# ತುಂಗಭದ್ರಾ ನದಿ ಪ್ರಾಂತ್ಯದ ಅನುಭಾವ ಸಾಹಿತ್ಯ

## (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

ಯಂಕಮ್ಮ

ಮಾರ್ಗದರ್ಶಕರು

ಡಾ. ವೆಂಕಟೇಶ ಇಂದ್ವಾಡಿ

ಸಹ ಪ್ರಾಧ್ಯಾಪಕರು








ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೭

# ತುಂಗಭದ್ರಾ ನದಿ ಪ್ರಾಂತ್ಯದ ಅನುಭಾವ ಸಾಹಿತ್ಯ

## (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು

**ಯಂಕಮ್ಮ**

ಮಾರ್ಗದರ್ಶಕರು

**ಡಾ. ವೆಂಕಟೇಶ ಇಂದ್ವಾಡಿ**

ಸಹ ಪ್ರಾಧ್ಯಾಪಕರು





ಭಾಷಾ ನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

೨೦೧೭



# ಮಾರ್ಗದರ್ಶಕರ ದೃಢೀಕರಣ ಪತ್ರ

**ಯಂಕಮ್ಮ** ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **"ತುಂಗಭದ್ರಾ ನದಿ ಪ್ರಾಂತ್ಯದ ಅನುಭಾವ ಸಾಹಿತ್ಯ" (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ದಿನಾಂಕ** : 5-1-17

**ಸ್ಥಳ** : **ವಿದ್ಯಾರಣ್ಯ**

**ಡಾ. ವೆಂಕಟೇಶ ಇಂದ್ವಾಡಿ**
ಸಹ ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ-೫೮೩ ೨೭೬**

# ಸಂಶೋಧಕರ ಘೋಷಣಾ ಪತ್ರ

**"ತುಂಗಭದ್ರಾ ನದಿ ಪ್ರಾಂತ್ಯದ ಅನುಭಾವ ಸಾಹಿತ್ಯ" (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗದ ಸಹ ಪ್ರಾಧ್ಯಾಪಕರಾದ **ಡಾ. ವೆಂಕಟೇಶ ಇಂದ್ವಾಡಿ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ದಿನಾಂಕ :** 5-1-17
**ಸ್ಥಳ :** **ವಿದ್ಯಾರಣ್ಯ**

**ಯಂಕಮ್ಮ**
ಪಿಎಚ್.ಡಿ. ಸಂಶೋಧನ ವಿದ್ಯಾರ್ಥಿನಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ-೫೮೩ ೨೭೬**

# ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ ಮತ್ತು ಸ್ವರೂಪ

೧.೩. ಅಧ್ಯಯನದ ವಿಧಾನ

೧.೪. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

ನಮ್ಮ ನಾಡು - ದೇಶ ಸಾವಿರಾರು ವರ್ಷಗಳಿಂದಲೂ ಅನೇಕ ಸಾಧು ಸತ್ಪುರುಷರನ್ನು ಕಂಡಿದೆ. ಭಾರತ ದೇಶದಲ್ಲಿ ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಅನೇಕ ಸಂತರು, ಶರಣರು ಮಹಿಮೆಗಳನ್ನು, ಪವಾಡಗಳನ್ನು ಮಾಡಿದ್ದಾರೆ. ಉತ್ತರ ಭಾರತದ ಹಿಮಾಲಯದ ಸ್ವಾಮಿಶಿವಾನಂದ, ಸ್ವಾಮಿರಾಮ, ಬಂಗಾಳದಲ್ಲಿ ಸ್ವಾಮಿ ರಾಮಕೃಷ್ಣ ಪರಮಹಂಸ, ಮಹಾರಾಷ್ಟ್ರದಲ್ಲಿ ಸಂತ ತುಕಾರಾಮ, ತಮಿಳುನಾಡಿನಲ್ಲಿ ಆಳ್ವಾರ್ ಸಂತರು ಹಾಗೂ ೬೩ ಪುರಾತನರು, ತೆಲುಗು ದೇಶದ ಯೋಗಿ ವೇಮನ, ಕೇರಳದ ಶಂಕರಾಚಾರ್ಯರು, ಇತ್ತೀಚಿನ ಮಾತಾ ಅಮೃತಾನಂದಮಯಿಯವರು ಹೀಗೆ ಹೇರಳವಾಗಿ ದಕ್ಷಿಣದವರೆಗೆ ದೈವಪುರುಷರು ಕಾಣಸಿಗುತ್ತಾರೆ.

ಇತ್ತೀಚೆಗೆ ಭಾರತದ ಪುನರುಜ್ಜೀವನದ ಸಮಯದಲ್ಲಿ ಜನಜೀವನವನ್ನು ಮೇಲುಮಟ್ಟಕ್ಕೇರಿಸಿದ ಪುಣ್ಯಪುರುಷರ ಜೀವನವೇ ಒಂದು ಪವಾಡವಾಗಿತ್ತು. ಅವರ ದಿವ್ಯ ಚೇತನ ಚಮತ್ಕೃತವಾಗಿ ಜನತೆಯ ಹೃದಯವನ್ನು ಪರಿವರ್ತಿಸುತ್ತಿತ್ತು. ಅವರು ದೇಹಬಿಟ್ಟ ಮೇಲೂ ಆ ಚೇತನದ ಪ್ರಭಾವ ಇನ್ನೂ ಕಾರ್ಯಗೈಯ್ಯುತ್ತಲೇ ಇದೆ. ಜಗತ್ತಿನ ನಿರಂತರ ಸ್ಫೂರ್ತಿ ಸ್ಥಾನಗಳಲ್ಲಿ ಇವರೆಲ್ಲರಿದ್ದಾರೆ.

ಕರ್ನಾಟಕದಲ್ಲಿ ಗುಲಬರ್ಗಾದ ಶರಣ ಬಸವೇಶ್ವರ, ಬಂದೇ ನವಾಜ್‌ನಿಂದ ಹಿಡಿದು ನಂಜನಗೂಡಿನ ಗುರು ಮಲ್ಲೇಶ್ವರನವರೆಗೂ ಅನೇಕ ಮಹಾತ್ಮರು ಕಾಣಸಿಗುತ್ತಾರೆ. ಧಾರವಾಡದ ಮೃತ್ಯುಂಜಯ ಸ್ವಾಮಿಗಳು, ಅಥಣಿ ಶಿವಯೋಗಿಗಳು, ಚಿತ್ರದುರ್ಗದ ನಾಯಕನಹಟ್ಟಿಯ ತಿಪ್ಪೇಸ್ವಾಮಿ ಎಂಬುವವರು, ತುಮಕೂರಿನ ಎಡೆಯೂರು ಸಿದ್ಧಲಿಂಗೇಶ್ವರರು, ಮೈಸೂರಿನ ಮಹದೇಶ್ವರ ಬೆಟ್ಟದ ಮಹದೇಶ್ವರರು, ನಿಜಗುಣ ಶಿವಯೋಗಿಗಳು ಮುಂತಾದ ಗಣ್ಯಶಿವಯೋಗಿ ಗಳನ್ನು ಕಾಣಬಹುದಾಗಿದೆ.

ಕನ್ನಡ ನಾಡಿನ ಉದ್ದಗಲಕ್ಕೂ ಇಂತಹ ಅನೇಕ ಮಹಾಪುರುಷರು ಆಗಿ ಹೋಗಿದ್ದಾರೆ. ಕನ್ನಡ ನಾಡಿನ ಬಳ್ಳಾರಿ ಜಿಲ್ಲೆಯಲ್ಲಿ ಹಲವು ಶರಣರು, ತತ್ವಪದಕಾರರು, ಸೂಫಿಗಳು, ಅವಧೂತರು, ಸಿದ್ಧರು ಮುಂತಾದ ಮಹಾಮಹಿಮರು ತಮ್ಮ ಲೀಲಾ ವಿನೋದಗಳಿಂದ ನಾಡಿನ ಜನಜೀವನದ ಜಾಗೃತಿಗೆ ಅನುಗ್ರಹ ಶಕ್ತಿಗಳಾಗಿ ವ್ಯಕ್ತಿಗಳಾಗಿ ಕಾರಣೀಭೂತರಾಗಿದ್ದಾರೆ.

ಈ ಸತ್ಪುರುಷರೆಲ್ಲರ ಜೀವನವು ಲಕ್ಷಾಂತರ ಜನರಿಗೆ, ಭಕ್ತರಿಗೆ ಚೈತನ್ಯದಾಯಕವಾಗಿದೆ. ಯಾರು ಬೇಕಾದರೂ ಈ ಮಹಾಪುರುಷರ ಜೀವನ ಪದ್ಧತಿಯಿಂದ, ಭಕ್ತಿಮಾರ್ಗದಿಂದ ಪ್ರೇರಣೆ ಹೊಂದಿ ಸತ್ಪ್ರಜೆಗಳಾಗಬಹುದು. ಇವರ ಕಥೆಗಳು, ಉಪದೇಶಗಳು ಮತ್ತು ನೀತಿ ಪಾಠಗಳು, ಯಾರು ದುಃಖದಿಂದ ನೊಂದಿರುತ್ತಾರೆಯೋ, ಪ್ರಾಪಂಚಿಕ ಜೀವನದಲ್ಲಿ ಜಿಗುಪ್ಸೆ ಹೊಂದಿರುತ್ತಾರೆಯೋ ಅಂಥವರಿಗೆ ಇವು ಶಾಂತಿ ಮತ್ತು ಸಂತೋಷವನ್ನು ನೀಡುತ್ತವೆ. ಪ್ರಾಪಂಚಿಕ ಮತ್ತು ಪಾರಮಾರ್ಥಿಕ ವಿಷಯಗಳಲ್ಲಿ ಅವರಿಗೆ ಜ್ಞಾನವನ್ನೂ, ಅರಿವನ್ನೂ ಉಂಟುಮಾಡುತ್ತವೆ.

### ೧.೧. ಅಧ್ಯಯನದ ಉದ್ದೇಶ

ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತಿರುವ ತುಂಗಭದ್ರಾ ನದಿ ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮ ಬೆಟ್ಟಸಾಲಿನ ವರಹ ಪರ್ವತದಲ್ಲಿ ಉಗಮವಾಗಿ ಶಿವಮೊಗ್ಗ ಜಿಲ್ಲೆಯ ಕೂಡಲಿಯಲ್ಲಿ ಬಂದು ಸೇರುತ್ತವೆ. ಅವುಗಳಲ್ಲಿ ಒಂದು ತುಂಗಾ ಇನ್ನೊಂದು ಭದ್ರಾ, ಎರಡೂ ಕಲೆತು ಮುಂದೆ ಸಾಗಿದಾಗ ತುಂಗಭದ್ರಾ ಎಂಬ ಹೆಸರನ್ನು ಪಡೆದಿದೆ. ಹೀಗೆ ಹರಿದು ಬಂದ ನದಿಯು ಹೂವಿನಹಡಗಲಿ ತಾಲೂಕಿನ ಮೂಲಕ ಬಳ್ಳಾರಿ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಹೀಗೆ ಬಳ್ಳಾರಿ ಜಿಲ್ಲೆಯಲ್ಲಿ ಹರಿದು ಬಂದ ನದಿಯ ತೀರದಲ್ಲಿ (ಪ್ರಾಂತ್ಯದಲ್ಲಿ) ಅನೇಕ ಅನುಭಾವಿಗಳ ಕ್ಷೇತ್ರಗಳಿವೆ. ಹೀಗೆ ಹರಿದು ಮುಂದೆ ಕೃಷ್ಣಾ ನದಿಯನ್ನು ಸೇರುತ್ತದೆ.

ಅನುಭಾವಿಗಳಾದ ಸಂತರು, ಸಿದ್ಧರು, ಆರೂಢರು, ಅವಧೂತರು ನಾಥರಂತೆ ಲೌಕಿಕ ಬಂಧನವನ್ನು ತಿರಸ್ಕರಿಸಿ, ಧ್ಯಾನ ಯೋಗದಂತಹ ಸಾಧನೆಯಲ್ಲಿ ನಿರತರಾಗಿ, ಗುರುವಿನ ಅನುಗ್ರಹ ಪಡೆದು, ಆಧ್ಯಾತ್ಮಿಕ ಅನುಭಾವವನ್ನು ಸಾಕ್ಷಾತ್ಕರಿಸಿಕೊಂಡವರು. ಇಂತಹ ಅನುಭಾವಿಗಳು ದೇಶದ ಉದ್ದಗಲಕ್ಕೂ ಪ್ರತಿ ತಲೆಮಾರಿನಲ್ಲಿಯೂ, ಆಗಾಗ್ಗೆ ಅವತರಿಸಿರುತ್ತಾರೆ. ಬದುಕಿನ ಜಂಜಾಟದಿಂದ ದೂರವಾಗಿ ತಮ್ಮ ಸಾಧನೆಯಿಂದ ಅನುಭಾವದ ಚೇತನವಾಗಿ ಬೆಳೆದಿದ್ದಾರೆ. ತಮ್ಮ ಅನುಭಾವಿಕ ವ್ಯಕ್ತಿತ್ವದಿಂದಲೇ ಜನಸಾಮಾನ್ಯರನ್ನು ತಮ್ಮೆಡೆಗೆ ಸೆಳೆದುಕೊಂಡು ಸರ್ವವರ್ಗದವರಿಂದ, ಸರ್ವಧರ್ಮದವರಿಂದ ಭಕ್ತಿಪೂರ್ವಕ ಮನ್ನಣೆ ಪಡೆದಿದ್ದಾರೆ.

ಜಾತಿ, ಮತ, ಧರ್ಮಗಳ ಎಲ್ಲೆಯನ್ನು ಮೀರಿದ ಈ ಸಾಧಕರು ಹಣ, ಅಧಿಕಾರ, ಅಹಂಕಾರಗಳನ್ನು ತಿರಸ್ಕರಿಸಿ ಅನುಭಾವಿಕ ಶಕ್ತಿಯ ಮುಂದೆ ಉಳಿದೆಲ್ಲವೂ ತೃಣಸಮಾನವೆಂದು ತಿಳಿದವರು. ತಮ್ಮ ಸಾಧನೆಯಿಂದ ಸಿದ್ಧಿಗೇರಿದ ಮೇಲೆ, ತಮ್ಮನ್ನು ನಂಬಿದ ಭಕ್ತ ಜನತೆಯನ್ನು ಉದ್ಧರಿಸುತ್ತಾ ತಮ್ಮ ನಡೆ, ನುಡಿಗಳಿಂದಲೇ ಶಾಶ್ವತ ಸುಖದ ಮಹತ್ವವನ್ನು ಸಾರುತ್ತಾ ತಮ್ಮ ಆತ್ಮೋನ್ನತಿಯ ಜೊತೆಗೆ ಸಮಾಜದ ಉನ್ನತಿಯನ್ನು ಬಯಸಿದವರಾಗಿದ್ದಾರೆ.

ಅನುಭಾವಿಗಳು ಸಾಧನೆಯಿಂದ ಸಿದ್ಧಿಯನ್ನು ಪಡೆದು ತಮ್ಮನ್ನು ತಾವೇ ಮರೆತು, ದೇಶ ಸಂಚಾರ ಮಾಡಿ ಹೋದಲ್ಲೆಲ್ಲಾ ತಮ್ಮ ಮಹಿಮೆಯನ್ನು ತೋರಿ ಕೊನೆಗೊಂದು ಊರಲ್ಲಿ

ನೆಲೆನಿಂತು ಸಮಾಧಿ ಹೊಂದಿದವರು. ಇವರು ತಮ್ಮನ್ನು ನಂಬಿ ಬಂದ ಭಕ್ತರ ಕಷ್ಟಗಳನ್ನು, ನೋವುಗಳನ್ನು ಪರಿಹರಿಸುತ್ತಾ ಅವರ ಇಷ್ಟಾರ್ಥಗಳನ್ನು ನೆರವೇರಿಸುತ್ತ ಅವರು ಆರಾಧಿಸುವ ದೈವವಾಗಿ ಭಕ್ತರ ಮನೆಮನಗಳಲ್ಲಿ ನೆಲೆಸಿದ್ದಾರೆ. ಮೇಲು - ಕೀಳು, ಸಣ್ಣವರು - ದೊಡ್ಡವರು ಎನ್ನದೆ ಸರ್ವರು ಸಮಾನರು ಎಂಬ ಧೋರಣೆಯಿಂದ ಬದುಕಿ ಸ್ವಾತಂತ್ರ್ಯ ಸಮಾನತೆಯನ್ನು ಯಾವುದೇ ಜಾತಿ, ಭೇದ ಭಾವಗಳಿಲ್ಲದೆ ಸಮಾನರೆಂದು ಸಾರಿದ್ದಾರೆ. ಇಂಥ ಮಹಾತ್ಮರ ಜೀವನ, ಅವರು ಪ್ರತಿಪಾದಿಸಿದ ಮೌಲ್ಯಗಳು, ನೀಡಿದ ಸಂದೇಶಗಳು ಇಂದಿನ ಸಮಾಜಕ್ಕೆ ಅತ್ಯಂತ ಅವಶ್ಯಕ.

ಈ ಅನುಭಾವ ಸಾಹಿತ್ಯವು ಯಾವ ಜಾತಿ ಧರ್ಮದ ಪರವಾಗಿ ನಿಂತುಕೊಳ್ಳದೆ ಜಾತಿ, ಧರ್ಮ, ಮೇಲು–ಕೀಳುಗಳನ್ನು ಮೆಟ್ಟಿನಿಂತು ಎಲ್ಲರೂ ಒಂದೇ ಇಲ್ಲಿ ಯಾವುದು ಬೇರೆಯಲ್ಲ ಎಂಬ ತತ್ವವನ್ನು ಸಾರಿ ಸಾರಿ ಹೇಳುತ್ತದೆ. ತನ್ನ ತಾನು ಮೊದಲರಿಯಬೇಕು ನಂತರ ಮತ್ತೊಬ್ಬರನ್ನು ಅರಿಯಲು ಸಾಧ್ಯ; ತನ್ನನ್ನೇ ಅರಿಯದಿದ್ದಾಗ ಮತ್ತೊಬ್ಬರನ್ನು ಹಾಳು ಮಾಡುವವನನ್ನು ವಿಕೃತ ಮನಸ್ಸಿನ ಮನುಜನೆನ್ನಬೇಕು. ಅವನಲ್ಲಿ ಸದಾ ಹಾಳಾಗುವ, ಹಾಳು ಮಾಡುವ ಗುಣಗಳೇ ತುಂಬಿರುತ್ತವೆ. ಇವನಲ್ಲಿ ಇವನ ಮನದಲ್ಲಿ ದೇವ ಮತ್ತು ದೈವತ್ವದ ಒಂದಂಶವು ಇರದೇ ದೂರ ಸರಿದಿರುತ್ತದೆ. ಮೊದಲು ಮನುಜ ಆ ದೈವತ್ವದ ಅಂಶವನ್ನು ಬೆಳೆಸಿಕೊಳ್ಳಲು ತನ್ನನ್ನು ತಾನರಿತರೆ ಚಂದ ಎನ್ನುವ ಈ ಅನುಭಾವ ಸಾಹಿತ್ಯವು ಅನುಭಾವದ ಮಾರ್ಗದ ಕಡೆಗೆ ಕೊಂಡೊಯ್ಯುತ್ತದೆ. ಬಳ್ಳಾರಿ ಜಿಲ್ಲೆ ಶಿಷ್ಟಕವಿಗಳಿಂದ, ಶಿಷ್ಟಜನರಿಂದ ಉಪೇಕ್ಷೆಗೆ ಒಳಗಾಗಿ ಜನಪದರಿಂದ ನಿತ್ಯ ಪೂಜಿಸಿಕೊಳ್ಳುತ್ತಿರುವ ಅನುಭಾವಿಗಳು ಶರಣರು, ತತ್ವಪದಕಾರರು, ಸೂಫಿಗಳ ಜೀವನ, ಸಂದೇಶ, ಸಾಹಿತ್ಯ ಮತ್ತು ಪ್ರಭಾವಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಪ್ರಸ್ತುತ ನನ್ನ ಅಧ್ಯಯನದ ವಿಷಯ ತುಂಗಭದ್ರಾ ನದಿ ಪ್ರಾಂತ್ಯದ ಅನುಭಾವ ಸಾಹಿತ್ಯ. ಪಾಶ್ಚಿಮಾತ್ಯ - ಸಂಸ್ಕೃತಿಯ ಪ್ರಭಾವ, ಜಾಗತೀಕರಣ, ನವವಸಾಹತುಶಾಹಿ ಮುಂತಾದ ಅನ್ಯಪ್ರಭಾವಗಳ ಒತ್ತಡಕ್ಕೆ ಸಿಲುಕಿರುವ ಇಂದಿನ ಜನತೆಗೆ ಅನುಭಾವಿಗಳ ನೆಲೆಗಳಲ್ಲಿ ನಡೆಯುವ ಆಚರಣೆ ಉತ್ಸವಗಳು ಭಾವೈಕ್ಯತೆ, ಮತೀಯ ಸಹಿಷ್ಣುತೆ ಮತ್ತು ಸಾಂಸ್ಕೃತಿಕ ಸಮನ್ವಯತೆಯು ಅತ್ಯಗತ್ಯ.

ಇಂಥ ಮಹಾನುಭಾವಿಗಳ ಪರಿಪೂರ್ಣ ವ್ಯಕ್ತಿತ್ವ, ಜೀವನಮೌಲ್ಯ ಮತ್ತು ಜನತೆಗೆ ನೀಡಿದ ಸಂದೇಶಗಳನ್ನು ಅಧ್ಯಯನಕ್ಕೊಳಪಡಿಸಿದಾಗ ಮಾನವೀಯ ಮೌಲ್ಯಗಳು, ಪ್ರೇರಣೆ -ಪ್ರಭಾವಗಳು ಮತ್ತು ಭಕ್ತ ಜನರು ಪಡೆದುಕೊಂಡಿರುವ ನೆಮ್ಮದಿ ಇತ್ಯಾದಿಗಳನ್ನು ತಿಳಿಯಲು ಸಾಧ್ಯವಾಗುತ್ತದೆ.

ಅನುಭಾವದಿಂದ ಸಾಧನೆಯ ಸಿದ್ಧಿಯನ್ನು ಪಡೆದು ಅನೇಕ ಮನಸಿಜರನ್ನು ದೈವತ್ವದ ದಾರಿಯಡೆಗೆ ನಡೆಸಿದ ಅನುಭಾವಿಗಳಿಗೆ ತುಂಗಭದ್ರಾ ನದಿ ಪ್ರಾಂತ್ಯದ ಹಂಪಿ ಪರಿಸರ ಪೂರಕವಾಗಿತ್ತು. ಅದೆಷ್ಟೂ ಕವಿಗಳಿಗೆ ಪಂಡಿತರಿಗೆ, ವಿರಕ್ತರಿಗೆ, ಶರಣರಿಗೆ, ದಾಸರಿಗೆ, ಅನುಭಾವಿಗಳಿಗೆ, ಅವಧೂತರಿಗೆ ಆಶ್ರಯವನ್ನು ನೀಡಿದೆ. ಹರಿಹರ, ರಾಘವಾಂಕ, ದೇಪರಾಜ,

ಮಹಾಲಿಂಗದೇವ ಲಕ್ಕಣ್ಣದಂಡೇಶ, ಗುರುಬಸವ, ಚಾಮರಸ, ಕರಸ್ಥಲ ನಾಗಿದೇವ, ಕನಕದಾಸ, ಪುರಂದರದಾಸ, ಹೀಗೆ ಕವಿಪರಂಪರೆ ಮತ್ತು ಅನುಭಾವ ಪರಂಪರೆ ಈ ನೆಲದಲ್ಲಿ ಬೆಳೆದು ಬಂದಿದೆ.

ಮುಖ್ಯವಾಗಿ ವಿಜಯನಗರದ ಅರಸರು ಸಾಹಿತ್ಯ ಮತ್ತು ಸಂಸ್ಕೃತಿಯ ಸಂವರ್ಧನೆಗೂ ಕಾರಣವಾಗಿದ್ದವರು. ಪ್ರೌಢದೇವರಾಯನ ಕಾಲ ವಿಶಾಲ ಧಾರ್ಮಿಕ ಮನೋಭಾವ ವೀರಶೈವ ಧರ್ಮದ ಪುನರುತ್ಥಾನ ನೂರೊಂದು ವಿರಕ್ತರ ಅವತಾರ ಈ ಕಾಲದಲ್ಲಿ ನಡೆದಿದೆ. ಕಲ್ಯಾಣದಲ್ಲಿ ನಡೆದ ಸಾಂಕೃತಿಕ ಬಿಕ್ಕಟ್ಟನ್ನು ಎದುರಿಸಲಾರದೆ ಕಲ್ಯಾಣವನ್ನು ತೊರೆದ ಶರಣರು ಕೊಡೆಕಲ್ಲು ಜಲದುರ್ಗ ಅಲ್ಲದೇ ಹಂಪಿ ಪರಿಸರದಲ್ಲಿಯೂ ನೆಲೆಸಿದ್ದರು. ಈ ಹಂಪಿ ಪರಿಸರದಲ್ಲಿ ನೆಲೆಸಿದ ವಿರಕ್ತರಲ್ಲಿ ಕೆಲವರು ಶಿವಯೋಗದ ನಿಬ್ಬೆರಗಿನಲ್ಲಿ ಅಂಗಲೀಲೆಯನ್ನು ಮೆರೆದ ಮಹಾನುಭಾವಿಗಳಾಗಿದ್ದಾರೆ.

ಬಳ್ಳಾರಿ ಜಿಲ್ಲೆಯಲ್ಲಿ ಅನುಭಾವ ಪರಂಪರೆ ಮೊದಲ ಬಾರಿಗೆ ಕಂಡು ಬಂದಿರುವುದು ಹಂಪಿ ಪರಿಸರದಲ್ಲಿಯೇ. ಅನುಭಾವಿಗಳ ಅನುಭಾವವೆಂಬುದು ಜಾತಿ ಮತ್ತು ಪಂಥಗಳನ್ನು ಮೀರಿರುವಂಥದ್ದು. ಈ ಕಾಲದಲ್ಲಿ ಸೃಷ್ಟಿಯಾದ ಸಾಹಿತ್ಯ ಮತ್ತು ವಿರಕ್ತರ ಹಾಡುಗಳಲ್ಲಿ ನಿಜವಾದ ದಾರ್ಶನಿಕ ಲಕ್ಷಣವನ್ನು, ಅನುಭಾವ ಮಾರ್ಗವನ್ನು ಮತ್ತು ತತ್ವಬೋಧನೆಯನ್ನು ಕಾಣಬಹುದು.

೧೭ನೇ ಶತಮಾನದಲ್ಲಿ ನೂರೊಂದು ವಿರಕ್ತರ ಮತ್ತು ಅನುಭಾವಿಗಳ ಜೀವನ, ಸಾಧನೆ, ಮೌಲ್ಯ, ತತ್ವಗಳು ಭಕ್ತರುಗಳ ಮೇಲೆ ಅವರ ಸಾಂಸ್ಕೃತಿಕ ಜೀವನದ ಮೇಲೆ ಮತ್ತು ಪ್ರಭಾವ ಬೀರಿ ದೈನಂದಿನ ಜೀವನದಲ್ಲಿ ಸೇರಿಕೊಂಡುದಾಗಿದೆ. ಈ ಅನುಭಾವ ಪರಂಪರೆಯುಳ್ಳ ಹಲವಾರು ಅನುಭಾವಿಗಳು ಹಂಪಿ ಪರಿಸರದಲ್ಲಿ ಜಾತಿ, ಮತ, ಧರ್ಮ, ಪಂಥಗಳನ್ನು ಮೀರಿ ಸಿದ್ಧಿ ಮಾಡಿದ್ದಾರೆ. ವೈಜ್ಞಾನಿಕ ಕ್ಷೇತ್ರಕ್ಕೆ ಆಶ್ಚರ್ಯ ಮತ್ತು ಕುತೂಹಲ ಮೂಡಿಸುವಂತೆ ಸಾಧನೆ ಮಾಡಿದ್ದಾರೆ. ೧೯ ಮತ್ತು ೨೦ನೇ ಶತಮಾನದ ವೇಗದ ಯುಗದಲ್ಲಿ ಈ ಅನುಭಾವಿಗಳೆಲ್ಲ ಭಕ್ತಜನತೆಯ ಆರಾಧ್ಯದೈವವಾಗಿ ತಮ್ಮ ಆಸ್ತಿತ್ವವನ್ನು ಉಳಿಸಿಕೊಂಡಿರುವುದು ಇಲ್ಲಿ ಸ್ಪಷ್ಟವಾಗಿ ಕಾಣಸಿಗುತ್ತದೆ. ಒಟ್ಟಾರೆಯಾಗಿ ಅನುಭಾವಿಗಳಾದ ಶರಣರು, ತತ್ವಪದಕಾರರು ಸೂಫಿಗಳ, ಜೀವನ, ಸಾಧನೆ, ಸಿದ್ಧಿಯನ್ನು ಶೋಧಿಸಿ, ಅವರ ಸಂಸ್ಕೃತಿಯನ್ನು ತಿಳಿಯುವುದು ಈ ಅಧ್ಯಯನದ ಉದ್ದೇಶವಾಗಿದೆ.

**ಅಧ್ಯಯನದ ಆಕರಗಳು**

ಬದಲಾದ ಕಾಲಘಟ್ಟದಲ್ಲಿ ಸಂಶೋಧನ ದೃಷ್ಟಿ ಬದಲಾಗುತ್ತಿದೆ. ಪ್ರತಿಯೊಂದು ಕ್ಷೇತ್ರಗಳಲ್ಲಿನ ಸೂಕ್ಷ್ಮ ಘಟಕಗಳು ಈಗೀಗ ಸಂಶೋಧನೆಗೆ ಒಳಪಡುತ್ತಿವೆ. ಆ ಮೂಲಕ ಸೂಕ್ಷ್ಮ ದೃಷ್ಟಿಕೋನದಿಂದ ಅಧ್ಯಯನ ಮಾಡಲಾಗುತ್ತಿದೆ. ಹಿಂದಿನ ಕಾಲದಲ್ಲಿ ನಿರಕಾರಿಸಲ್ಪಟ್ಟ, ಅನೇಕ ವಿಷಯಗಳು, ಕ್ಷೇತ್ರಗಳು ಇಂದು ಅಧ್ಯಯನಕ್ಕೊಳಪಡುತ್ತಿರುವುದನ್ನು ಗಮನಿಸಬಹುದು. ಆ ಮೂಲಕ

ಅವುಗಳಲ್ಲಡಗಿರುವ ಗುಣಾವಗುಣಗಳನ್ನು ತೋರಿಸಲಾಗುತ್ತಿದೆ. ಇದುವರೆಗೂ ಉಪೇಕ್ಷೆಗೆ ಒಳಪಟ್ಟ ಅನುಭಾವ ಸಾಹಿತ್ಯಗಳ ಬಗೆಗೆ, ಸಾಹಿತಿಗಳ ಬಗೆಗೆ ಮತ್ತು ಅವುಗಳ ಸೃಷ್ಟಿಗೆ ಕಾರಣೀಭೂತರಾದ ಮಹಾಪುರುಷರ ಬಗೆಗೆ ಅಧ್ಯಯನವನ್ನು ಮಾಡಲು ಉದ್ದೇಶಿಸಲಾಗಿದೆ. ಈ ಹಿನ್ನೆಲೆಯಲ್ಲಿ ಜನಮುಖಿ ವ್ಯಕ್ತಿಗಳಾದ ಶರಣರು, ತತ್ವಪದಕಾರರು, ಸೂಫಿಗಳ ಸಾಧನೆ ಮತ್ತು ಅವರು ಪಡೆದ ಸಿದ್ಧಿಯನ್ನು ಕಟ್ಟಿಕೊಡುವಾಗ ಲಿಖಿತ ಮತ್ತು ಮೌಖಿಕ ಆಧಾರಗಳೆರಡೂ ಮುಖ್ಯವಾಗುತ್ತವೆ. ಈ ಅನುಭಾವಿಗಳು ಯಾವುದೇ ಒಂದು ವ್ಯವಸ್ಥೆಯ ಮತ್ತು ವ್ಯಕ್ತಿಗಳ ವಿರುದ್ಧ ಹೋರಾಡಿದವರಲ್ಲ; ಮೌನಕ್ಕೆ ಮತ್ತು ಏಕಾಂಗಿತನಕ್ಕೆ ಮಹತ್ವ ಕೊಟ್ಟಿರುವ ಇವರು ಸಾಹಿತ್ಯವನ್ನು ರಚಿಸಿದವರಲ್ಲ. ಆದರೆ ಅವರ ಬಗ್ಗೆ ವಿವಿಧ ರೂಪಗಳಲ್ಲಿ ಲಿಖಿತ ಸಾಹಿತ್ಯ ರಚಿಸಲ್ಪಟ್ಟಿರುವುದು ಗಮನಾರ್ಹ. ಅವರ ಜೀವನ, ಸಾಧನೆ, ಸಿದ್ಧಿ ಮಹಿಮೆ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯದ ಮೂಲಕ ಶಿಷ್ಯಪರಂಪರೆ, ಭಕ್ತ ಸಮೂಹ, ಸಮಿತಿಯ ಸದಸ್ಯರನ್ನು ಭೇಟಿ ಮಾಡಿ ವಿಷಯ ಸಂಗ್ರಹಿಸಲಾಗಿದೆ. ಒಟ್ಟಾರೆ ಲಿಖಿತ ಮತ್ತು ಮೌಖಿಕ ಆಕರಗಳನ್ನು ಆಧಾರವಾಗಿಟ್ಟುಕೊಂಡು ಈ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

**ಲಿಖಿತ ಸಾಹಿತ್ಯ**

ಗತಕಾಲದ ವ್ಯಕ್ತಿಗಳ ಜೀವನ ಚರಿತ್ರೆ ಕಟ್ಟುವಾಗ ಅಧ್ಯಯನ ಸಾಮಗ್ರಿಗಳು ಅತ್ಯಾವಶ್ಯಕವಾಗಿದ್ದು, ಲಿಖಿತ ಆಧಾರಗಳು ದೊರೆತಷ್ಟು ಅಧ್ಯಯನ ಪೂರ್ಣತೆಯನ್ನು ಪಡೆದುಕೊಳ್ಳುತ್ತದೆ. ಪ್ರಸ್ತುತ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಅನುಭಾವಿಗಳ ಬಗೆಗಿನ ಚರಿತ್ರೆ, ಪುರಾಣ, ನಾಟಕ, ಲೇಖನಗಳು, ಭಕ್ತಿಗೀತೆಗಳು, ಧ್ವನಿಸುರಳಿಗಳು, ಸುಪ್ರಭಾತ ಇತ್ಯಾದಿ ಪ್ರಕಟಿತ ಮತ್ತು ಅಪ್ರಕಟಿತ ಸಾಹಿತ್ಯ ಸೃಷ್ಟಿಯಾಗಿವೆ. ಅವುಗಳನ್ನು ಹೀಗೆ ಸಂಗ್ರಹಿಸಲಾಗಿದೆ.

**ಅನುಭಾವಿಗಳ ಕುರಿತು ಬಂದಿರುವ ಪ್ರಮುಖ ಕೃತಿಗಳು**

೧. ಶ್ರೀ ಮರಿಯೋಗೀಶ್ವರ ಪುರಾಣ: ಪಂಡಿತ ವೈ. ನಾಗೇಶ ಶಾಸ್ತ್ರಿಗಳು, ೧೯೪೮.

೨. ಶ್ರೀ ಶಿವಶರಣ ಮಲ್ಲೇಶ್ವರನ ಪುರಾಣ: ಶ್ರೀ ಪ್ರಭಾನಂದ ಪಂಡಿತರು ಹಿರಿಯ ಮಠ, ರೌಡಕುಂದ, ೧೯೮೭.

೩. ಜೀವನ ಚರಿತ್ರೆ: ಕಾನಮಡುಗು ಶರಣಪ್ಪ: ಭುಜಂಗಮಠದ ವಿದ್ವಾನ್ ಗುರುಸಿದ್ಧಯ್ಯ, ೧೯೬೮.

೪. ಕಾನಮಡುಗು ಶರಣಾರ್ಯರ ಸುಪ್ರಭಾತ ಮತ್ತು ಭಕ್ತಿಗೀತೆಗಳು: ಕೆ. ಅನಸೂಯಮ್ಮ ಶರಣಪ್ಪ, ಆಲೂರು, ೧೯೮೬.

೫. ಕುರುಗೋಡು ನೀಲಮ್ಮನವರ ಸಾಂಸ್ಕೃತಿಕ ಅಧ್ಯಯನ: ಡಾ. ಕೆ.ಎಂ. ಮೇತ್ರಿ, ಡಾ. ಮೃತ್ಯುಂಜಯ ರುಮಾಲೆ, ೨೦೦೮

೬. ಗದ್ದಿಕೇರಿ ದೊಡ್ಡಬಸಪ್ಪನವರ ಸುಪ್ರಭಾತ ಹಾಗೂ ಭಕ್ತಿಗೀತೆಗಳು: ಡಾ. ಎನ್.ಎಸ್. ಹಾಲಪ್ಪ, ೧೯೮೮.

೭. ಶ್ರೀ ಎರ್ರಿಸ್ವಾಮಿಗಳ ಲೀಲಾವಿಲಾಸ, ಶಿ.ವ. ಚನ್ನಬಸವೇಶ್ವರ, ೧೯೬೩.

೮. ಲೀಲಾಮೃತ - ಪಂ॥ ವೈ. ನಾಗೇಶ ಶಾಸ್ತ್ರಿಗಳು, ೧೯೬೬.

೯. ಶ್ರೀ ಎರ್ರಿಸ್ವಾಮಿಗಳ ಶಿವಮಯ ಜೀವನ ಚರಿತ್ರೆ ಮತ್ತು ತಿಕ್ಕಯ್ಯ ವಿರಚಿತ ಭಕ್ತಿಗೀತೆಗಳು (ಸಂ.) ಜೋಳದರಾಶಿ ದೊಡ್ಡನಗೌಡ.

೧೦. ಚೇಳಗುರಿಕೆ ಶ್ರೀ ಎರ್ರಿತಾತ ಸ್ವಾಮಿಗಳು - ಬಿ.ಸಿ. ಬಸವರಾಜ್.

೧೧. ಚೇಳಗುರಿಕೆ ಎರ್ರಿತಾತನವರ ಭಕ್ತಿಗೀತೆಗಳು(ಸಂ.), ಜೋಳದರಾಶಿ ದೊಡ್ಡನಗೌಡರು ಮತ್ತು ಶಿ.ವ.ಚನ್ನಬಸವೇಶ್ವರರು.

೧೨. ಚೇಳಗುರಿಕೆ ಎರ್ರಿತಾತ - ಜೋಳದರಾಶಿ ದೊಡ್ಡನಗೌಡ

೧೩. ಚೇಳಗುರಿಕೆ ಎರ್ರಿತಾತ - ಎಸ್. ಶಿವಾನಂದ

೧೪. ಶ್ರೀ. ಎರ್ರಿಸ್ವಾಮಿ ಸೇಂಟ್ ಆಫ್ ಚೇಳಗುರಿಕೆ.

೧೫. ಚೆಳ್ಳಗುರ್ಕಿ ಶ್ರೀ ಎರ್ರಿಸ್ವಾಮಿಗಳ ಶಿವಮಯ ಜೀವನ ಚರಿತ್ರೆ ಮತ್ತು ತಿಕ್ಕಯ್ಯಾವಧೂತರು ವಿರಚಿತ ಭಕ್ತಿಗೀತೆಗಳು.

೧೬. ಶ್ರೀ ಜಡೆಯೋಗೀಶ್ವರ ಚರಿತ್ರೆ, ಗುರುಸಿದ್ಧಲಿಂಗ ಶಿವಾಚಾರ್ಯರು

೧೭. ಜಡೇಸಿದ್ಧ ಶಿವಯೋಗಿಗಳ ಪುರಾಣ - ಪಂ॥ ಅಮರನಾಥ ಶಾಸ್ತ್ರಿಗಳು

೧೮. ಮಹಾಮಹಿಮೆ ಯಮ್ಮಿಗನೂರು ಜಡೇಸಿದ್ಧರ ಶತಕ - ಚನ್ನಬಸವ ಶಿವಬಸಪ್ಪ ಕಲ್ಮಂಗಿ

೧೯. ಶ್ರೀ ಸದ್ಗುರು ವೆಂಕಾವಧೂತರ ಪುರಾಣ - ಶ್ರೀ ಶಿವಮೂರ್ತಿಶಾಸ್ತ್ರಿ

೨೦. ದಮ್ಮೂರು ಶ್ರೀ ಸದ್ಗುರು ವೆಂಕಾವಧೂತರ ಚರಿತ್ರೆ: ಜೀವನ ಮತ್ತು ಸಾಧನೆ ವೇಮಲ ಗಟ್ಟೆಪ್ಪ ಶ್ರೇಷ್ಠಿ

೨೧. ಶ್ರೀ ಸದ್ಗುರು ಸ್ತುತಿ ಪುಷ್ಪಾಂಜಲಿ (ಸಂ) ವೇಮಲ ಗಟ್ಟೆಪ್ಪ ಶ್ರೇಷ್ಠಿ

೨೨. ಶಿವರಾಮವಧೂತರ ಜೀವನ ಚರಿತ್ರೆ - ಚಾಕುಬಂಡೆ ಎಂ.ಎಸ್. ಪುಟ್ಟಣ್ಣ

೨೩. ಶಿವರಾಮವಧೂತರ ಪುರಾಣ - ಬದನೇಹಾಳು ಮರಿಸಿದ್ಧಯ್ಯ ಸ್ವಾಮಿಗಳು

೨೪. ಬಳ್ಳಾರಿ ಜಿಲ್ಲೆಯ ಅವಧೂತರು; ಕರಿಯಪ್ಪ ಮಾಳಿಗೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು - ೨೦೦೮.

**೧.೨. ಅಧ್ಯಯನದ ವ್ಯಾಪ್ತಿ ಮತ್ತು ಸ್ವರೂಪ**

ಅನುಭಾವಿಗಳನ್ನು ಕುರಿತು ಬಂದಿರುವ ಲಿಖಿತ ಆಕರಗಳಷ್ಟೇ ಮುಖ್ಯವಾದದ್ದು ಕ್ಷೇತ್ರಕಾರ್ಯ. ಇದರಲ್ಲಿ ಸಂದರ್ಶನ ಮತ್ತು ಅವಲೋಕನವನ್ನು ಅಳವಡಿಸಿಕೊಳ್ಳಲಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ

ಬರುವ ತುಂಗಭದ್ರಾ ನದಿ ಪ್ರಾಂತ್ಯದ ಅನುಭಾವಿಗಳಾದ ಕುರುಗೋಡು ನೀಲಮ್ಮ, ಬಳ್ಳಾರಿ ಮರಿಸ್ವಾಮಿ, ಗದ್ದಿಕೇರಿ ದೊಡ್ಡಬಸಪ್ಪ, ಕಾನಮಡುಗು ಶರಣಪ್ಪ, ಸಿಂಧಿಗೇರಿ ಮಲ್ಲಪ್ಪ, ಬಳ್ಳಾರಿ ಮಕ್ದುಂ ಜಾನಿ ಬಾಬಾ, ಕುಡುತಿನಿ ಲಂಗರ್‌ಷಾವಲಿ, ಹೊಸಪೇಟೆ ಮೀರ್ ಆಲಂ ನವಾಜ್, ಕಂಪ್ಲಿ ಬಡೇ ಸಾಹೇಬ್ ಖಾದ್ರಿ, ಉಜ್ಜಯಿನಿ ಸಾದಿಕ್‌ವಲಿ ಷಾ ಖಾದ್ರಿ ಲೋಲಂಗರ್, ಓರೆಬಾಯಿ ಲಕ್ಷ್ಮಿದೇವಮ್ಮ, ಎತ್ತಿನಹಟ್ಟಿ ಮಲ್ಲಿಕಾರ್ಜುನ, ಬಳ್ಳಾರಿಯ ಶಿಲವೇರಿ ಶಿವಪ್ಪ, ಮೈಲಾರ ಬಸವಲಿಂಗ ಶರಣರು, ಚಳ್ಳಗುರ್ಕಿಯ ತಿಕ್ಕಯ್ಯ - ಈ ಎಲ್ಲ ಅನುಭಾವಿಗಳು ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿರುವವರಾಗಿದ್ದಾರೆ.

**ಸ್ವರೂಪ** : ಕ್ಷೇತ್ರಕಾರ್ಯದಲ್ಲಿ ಸಂಗ್ರಹ ಮಾಡಿದ ಆಕರಗ್ರಂಥಗಳು, ಜನವದಂತಿಗಳು, ವಕ್ತೃಗಳ ಮಾಹಿತಿಗಳನ್ನು ಬಳಸಿಕೊಂಡಂತೆ ತುಂಗಭದ್ರಾ ನದಿ ಪ್ರಾಂತ್ಯದ ಅನುಭಾವ ಸಾಹಿತ್ಯ ಎನ್ನುವ ಮಹಾಪ್ರಬಂಧವು ಏಳು ಅಧ್ಯಾಯಗಳನ್ನೊಳಗೊಂಡಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನವನ್ನು ತಿಳಿಸುವುದರ ಜೊತೆಗೆ ತುಂಗಭದ್ರಾ ನದಿ ಪ್ರಾಂತ್ಯದ ಬಳ್ಳಾರಿ ಜಿಲ್ಲೆಯ ಪರಿಸರದಲ್ಲಿನ ಅನುಭಾವ ಮೂಲ ನೆಲೆಯನ್ನು ಗುರುತಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಅರ್ಥ, ಪರಿಕಲ್ಪನೆ, ವ್ಯಾಖ್ಯಾನಗಳನ್ನು ವಿಶ್ಲೇಷಣೆ ಮಾಡುವುದರ ಜೊತೆಗೆ ಅನುಭಾವದ ತಾತ್ವಿಕ ಚರ್ಚೆಯನ್ನು ಮಾಡಲಾಗಿದೆ.

ಅಧ್ಯಾಯ ಮೂರರಲ್ಲಿ ಕನ್ನಡ ಸಾಹಿತ್ಯದಲ್ಲಿನ ಅನುಭಾವ ಪರಂಪರೆಯಲ್ಲಿ ಶರಣರು, ದಾಸರು, ತತ್ವಪದಕಾರರು, ಸೂಫಿಗಳು, ಅವಧೂತರು ಮೊದಲಾದ ಅನುಭಾವಿಗಳ ಅನುಭಾವ ಮಾರ್ಗಗಳನ್ನು ವಿಶ್ಲೇಷಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ತುಂಗಭದ್ರಾ ನದಿ ಪ್ರಾಂತ್ಯದ ಅನುಭಾವಿಗಳಾದ ಶರಣರ, ತತ್ವಪದಕಾರರ, ಸೂಫಿಗಳ ಬದುಕಿನ ಚಿತ್ರಣವನ್ನು ವಿವೇಚಿಸುತ್ತ ಸಮಾಜ, ಸಾಹಿತ್ಯ, ಧಾರ್ಮಿಕ ಕ್ಷೇತ್ರಗಳಿಗೆ ಅವರ ಕೊಡುಗೆಯನ್ನು ದಾಖಲಿಸುತ್ತ ಸಂಗ್ರಹಿಸಿದ ಮಾಹಿತಿಗಳನ್ನು ಸಾಮಗ್ರಿಯಾಗಿ ರೂಪಿಸಿಕೊಂಡು ಚರ್ಚಿಸಲಾಗಿದೆ.

ಅಧ್ಯಾಯ ಐದರಲ್ಲಿ ತುಂಗಭದ್ರಾ ನದಿ ಪ್ರಾಂತ್ಯದ ಅನುಭಾವಿಗಳನ್ನು ಕುರಿತು ಬಂದಿರುವ ಸಾಹಿತ್ಯವನ್ನು ವಿವರಿಸಿ ಚರ್ಚಿಸಲಾಗಿದೆ.

ಅಧ್ಯಾಯ ಆರರಲ್ಲಿ ಸಮಕಾಲೀನತೆ ಮತ್ತು ಅನುಭಾವಿಗಳ ಸಂಬಂಧವನ್ನು ಚರ್ಚಿಸುತ್ತ ಅನುಭಾವಿಗಳ ಕ್ಷೇತ್ರಗಳಲ್ಲಿ ನಡೆಯುತ್ತಿರುವ ಆಚರಣೆಗಳು, ನಂಬಿಕೆಗಳನ್ನು ವಿವೇಚಿಸುತ್ತ ಅನುಭಾವಿಗಳ ಸಂದೇಶಗಳು ಎಷ್ಟು ಪ್ರಸ್ತುತ ಎನ್ನುವುದನ್ನು ವಿವರಿಸಲಾಗಿದೆ.

ಕೊನೆಯದಾಗಿ ಏಳನೇ ಅಧ್ಯಾಯದಲ್ಲಿ ಒಟ್ಟು ಸಂಶೋಧನೆಯ ಫಲಿತಗಳನ್ನು ದಾಖಲಿಸಲಾಗಿದೆ. ಅನುಬಂಧದಲ್ಲಿ ಕಾರ್ಯದ ಸಂದರ್ಭದಲ್ಲಿ ಮಾಹಿತಿ ನೀಡಿದ ಸಂಪನ್ಮೂಲ ವ್ಯಕ್ತಿಗಳ

ವಿವರ ನೀಡಲಾಗಿದೆ. ಸಂಗ್ರಹಿಸಿದ ಛಾಯಾಚಿತ್ರಗಳು ಹಾಗೂ ಇತರ ಮಾಹಿತಿಗಳನ್ನು ನೀಡುತ್ತ ಪರಾಮರ್ಶನ ಗ್ರಂಥಗಳ ವಿವರ ನೀಡಲಾಗಿದೆ.

## ೧.೩. ಅಧ್ಯಯನದ ವಿಧಾನ

ಪ್ರತಿಯೊಂದು ಅಧ್ಯಯನವು ತನ್ನದೇ ಆದ ವಿಧಾನವೊಂದನ್ನು ಹೊಂದಿರುತ್ತದೆ. ಹಾಗೆಯೇ ಅಧ್ಯಯನ ವಿಧಾನಗಳು ಸಿದ್ಧ ರೂಪದಲ್ಲಿ ಕಂಡುಬರುವುದಿಲ್ಲ. ಪ್ರತಿ ಅಧ್ಯಯನಕ್ಕೂ ಅದರದೇ ಆದ ವಿಧಾನವನ್ನು ರೂಪಿಸಿಕೊಳ್ಳಲಾಗುತ್ತದೆ. ಕೆಲವೊಮ್ಮೆ ಅಧ್ಯಯನಕ್ಕೆ ಆಯ್ದುಕೊಂಡ ಪಠ್ಯಗಳೇ ಮುಖ್ಯವಾಗಿರುತ್ತವೆ. ಹಾಗೆಯೇ ಅಧ್ಯಯನಕ್ಕೆ ಆಯ್ದುಕೊಂಡ ಪಠ್ಯಗಳ ಜೊತೆಗೆ ಪಠ್ಯೇತರಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಮುಖ್ಯವಾಗಿರುತ್ತದೆ. ಈಗಾಗಲೇ ಕೆಲವರು ಅನುಭಾವ ಸಾಹಿತ್ಯವನ್ನು ಕುರಿತು ಅಧ್ಯಯನ ಮತ್ತು ಕೆಲಸ ಕಾರ್ಯಗಳನ್ನು ಮಾಡಿದ್ದಾರೆ. ಹಾಗೆ ಅನುಭಾವಿಗಳ ಕುರಿತಾದ ಅಧ್ಯಯನವೂ ಜನಪ್ರಿಯಗೊಳ್ಳುತ್ತಿದೆ. ಅಧ್ಯಯನಕ್ಕೆ ಕೆಲವು ಮಿತಿಗಳಿವೆ. ಇದು ಅಧ್ಯಯನಕ್ಕೆ ಬೌದ್ಧಿಕ ಶಿಸ್ತು ಮತ್ತು ಚೌಕಟ್ಟನ್ನು ಒದಗಿಸುತ್ತದೆ. ಅಧ್ಯಯನ ಕೊನೆಗೆ ಸಿದ್ಧಗೊಳ್ಳುವ ಈ ವಿಶ್ಲೇಷಣಾತ್ಮಕ ಸಮರ್ಥನೆಯು ದಿಕ್ಸೂಚಿಯಂತೆ ಕೆಲಸ ಮಾಡುತ್ತದೆ. ಹಾಗಾಗಿ ಪ್ರಸ್ತುತ ಈ ಅಧ್ಯಯನದಲ್ಲಿ ಈ ವಿಧಾನಗಳನ್ನು ಬಳಸಲಾಗಿದೆ.

೧. ಅನುಭಾವಿಗಳನ್ನು ಕುರಿತು ಬಂದಿರುವ ಲಿಖಿತ ಆಕಾರಗಳಷ್ಟೇ ಮುಖ್ಯವಾದದ್ದು ಕ್ಷೇತ್ರ ಕಾರ್ಯ. ಇದರಲ್ಲಿ ಸಂದರ್ಶನ ಮತ್ತು ಅವಲೋಕನವನ್ನು ಮುಖ್ಯವಾಗಿ ಅಳವಡಿಸಿ ಕೊಳ್ಳಲಾಗಿದೆ.

೨. ತುಂಗಭದ್ರಾ ನದಿ ಪ್ರಾಂತ್ಯದ ಅನುಭಾವಿ ನೆಲೆಗಳಿಗೆ ಹೋಗಿ ಅವರ ಗದ್ದುಗೆ ಸಮಾಧಿಗಳನ್ನು ನಿತ್ಯ ನೋಡಿಕೊಳ್ಳುತ್ತಿರುವ ಮತ್ತು ಪೂಜಿಸುತ್ತಿರುವ ಸಮಿತಿಯವರನ್ನು ಭಕ್ತರನ್ನು, ಸಂದರ್ಶಿಸಿ ಮಾಹಿತಿ ಸಂಗ್ರಹಿಸಲಾಗಿದೆ.

೩. ಅನುಭಾವಿಗಳ ಹೆಸರಿನಲ್ಲಿ ನಿರ್ಮಾಣವಾಗಿರುವ ಮಠಗಳು, ದರ್ಗಾಗಳ, ಆಚರಣೆಗಳ ಬಗ್ಗೆ ನಂಬಿದ ಭಕ್ತ ಸಮೂಹವನ್ನು ಭೇಟಿ ಮಾಡಿ ವಿಷಯ ಸಂಗ್ರಹಿಸಲಾಗಿದೆ.

೪. ಅನುಭಾವಿಗಳ ಬಗ್ಗೆ ಕೃತಿಯನ್ನು ರಚಿಸಿರುವ ಲೇಖಕರನ್ನು ಭೇಟಿ ಮಾಡಿ ಕೃತಿ ರಚನೆಯ ಹಿನ್ನೆಲೆ ಮತ್ತು ಕೃತಿಯ ವಸ್ತುವಿಗೆ ಸಂಬಂಧಿಸಿದಂತೆ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ.

೫. ಅನುಭಾವಿಗಳಿಗೆ ಸಂಬಂಧಿಸಿದ ಮೌಖಿಕ ಸಂದರ್ಶನ ಮತ್ತು ಪ್ರಕಟಿತ ಮತ್ತು ಅಪ್ರಕಟಿತ ಸಾಮಗ್ರಿಗಳನ್ನು ಸಂಗ್ರಹಿಸಲಾಗಿದೆ.

೬. ಇದಕ್ಕೆ ಸಂಬಂಧಿಸಿದ ಎಷ್ಟೋ ಮಾಹಿತಿಗಳು ಇನ್ನೂ ಅಜ್ಞಾತವಾಗಿವೆ. ಮೌಖಿಕ ನೆಲೆಯಲ್ಲಿಯೇ ಇರುವುದನ್ನು ಶೋಧಿಸಲಾಗಿದೆ. ದರ್ಗಾ, ಮಠಗಳ ಆಚರಣೆಯಲ್ಲಿ ಭಾಗಿಯಾಗಿ ಸಂಬಂಧಿಸಿದ ಛಾಯಾಚಿತ್ರಗಳನ್ನು ಸಂಗ್ರಹಿಸಲಾಗಿದೆ.

## ೧.೪. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಕ್ರಿ.ಶ. ೧೯೬೩ರಲ್ಲಿ ಪ್ರಕಟವಾದ ಬಸವೇಶ್ವರರ ಕೃತಿಯಾದ 'ಶ್ರೀ ಎರ್ರಿಸ್ವಾಮಿಗಳ ಲೀಲಾವಿಲಾಸ' ಕೃತಿಯಲ್ಲಿ ಚಳ್ಳಗುರ್ಕಿ ಎರ್ರಿಸ್ವಾಮಿಯವರ ಬಾಲ್ಯ ಮತ್ತು ಜೀವನವನ್ನು ಕುರಿತು ಅವರ ಬದುಕಿನ ಚಿತ್ರಣವನ್ನು ನೀಡಲಾಗಿದೆ. ಅವರ ಮಹಿಮೆಯನ್ನು ಅವರಿಂದ ಭಕ್ತ ಜನಸಮುದಾಯ ಪಡೆದುಕೊಂಡ ಪ್ರತಿಫಲವನ್ನು ಈ ಕೃತಿಯಿಂದ ತಿಳಿಯಬಹುದಾಗಿದೆ. ಎರ್ರಿಸ್ವಾಮಿಯವರನ್ನು ನಂಬಿದ ಭಕ್ತರು ಅವರನ್ನು ತಮ್ಮ ಮನೆ ಮನದಲ್ಲಿ ಪೂಜಿಸಿ ಕೊಳ್ಳುತ್ತಿರುವುದನ್ನು ಕೃತಿಯಲ್ಲಿ ಸಾಕ್ಷೀಕರಿಸಿದ್ದಾರೆ. ಎರ್ರಿಸ್ವಾಮಿಯವರು ತಾವು ಪಡೆದ ಈ ಸಾಧನೆಯ ಶಕ್ತಿಯಿಂದ ಜನರ ಕಷ್ಟ ನಿವಾರಣೆ ಮಾಡಿರುವುದು. ಅದರಿಂದಾಗಿ ಜನಸಾಮಾನ್ಯರು ತಮ್ಮ ಜೀವನದಲ್ಲಿ ಸುಖವನ್ನು ಕಂಡು ಎರ್ರಿಸ್ವಾಮಿಯವರಿಗೆ ಶರಣಾಗಿ ಭಕ್ತರಾಗಿರುವುದನ್ನು ಈ ಕೃತಿಯಿಂದ ತಿಳಿದುಬರುತ್ತದೆ. ಇಂದಿಗೂ ಎರ್ರಿಸ್ವಾಮಿಯವರನ್ನು ನಂಬಿ ಪೂಜಿಸುತ್ತಿರುವುದನ್ನು ಕಂಡರೆ ಈ ಜನರು ಪ್ರೇರಿತರಾಗಿರುವುದು ಇವರ ಬಗೆಗಿನ ಚರಿತ್ರೆ, ಪುರಾಣಗಳ ಮತ್ತು ಮಹಿಮೆ ಪವಾಡಗಳ ಕಥೆಯನ್ನು ಕೇಳುವುದರ ಮೂಲಕ ಓದುವುದರ ಮೂಲಕವೆಂಬುದನ್ನು ಲೇಖಕರು ತಿಳಿಸಿದ್ದಾರೆ.

೧೯೬೭ರಲ್ಲಿ ಪ್ರಕಟವಾದ ವೈ. ನಾಗೇಶ ಶಾಸ್ತ್ರಿಯವರ ಕೃತಿಯಾದ 'ಲೀಲಾಮೃತ' ಕೃತಿಯಲ್ಲಿ ಚಳ್ಳಗುರ್ಕಿ ಎರ್ರಿಸ್ವಾಮಿಯವರ ಬದುಕಿನ ಚಿತ್ರಣವನ್ನು ಮಹಿಮೆಯನ್ನು ನೀಡಲಾಗಿದೆ. ಅಧಿಕ ಭಕ್ತ ಸಮುದಾಯ ಹೊಂದಿರುವ ಬಗೆಯನ್ನು ಇಲ್ಲಿ ತಿಳಿಸಲಾಗಿದೆ. ಭಕ್ತರು ಎರ್ರಿಸ್ವಾಮಿಯವರನ್ನು ತಮ್ಮ ದೈವವಾಗಿ ಪೂಜಿಸುತ್ತಿದ್ದಾರೆಂಬುದನ್ನು ಇಲ್ಲಿ ವಿವರಿಸಲಾಗಿದೆ. ಅವರು ಮಾಡಿದ ಅನೇಕ ಲೀಲೆಗಳಿದೆಂಬುದನ್ನು ಈ ಕೃತಿಯಿಂದ ತಿಳಿದುಬರುತ್ತದೆ.

೧೯೭೫ರಲ್ಲಿ ಪ್ರಕಟವಾದ ಅಮರನಾಥ ಶಾಸ್ತ್ರಿಗಳ ಇವರ ಕೃತಿಯಾದ 'ಎಮ್ಮಿಗನೂರು ಜಡೆಸಿದ್ಧ ಶಿವಯೋಗಿಗಳ ಪುರಾಣವು' ಈ ಕೃತಿಯಲ್ಲಿ ಜಡೆಸಿದ್ಧನವರ ಬಾಲ್ಯ, ಜೀವನ, ಅವರು ಮಾಡಿದ ಸಾಧನೆ ಬದುಕಿನ ಪಯಣ ಮತ್ತು ಸಾಧನೆಯಿಂದ ಮಾಡಿದ ಲೀಲೆಗಳನ್ನು ತಿಳಿಸಲಾಗಿದೆ. ಜನಸಾಮಾನ್ಯರ ಕಷ್ಟಗಳನ್ನು ನಿವಾರಿಸುತ್ತ ಜನ ಮನಗಳಲ್ಲಿ ನೆಲೆಸಿ ಅವರಿಗೆ ದೈವವಾಗಿ ಮನೆಮನಗಳಲ್ಲಿ ಪೂಜಿಸಿ ಆರಾಧಿಸುವ ದೈವಗಳಾಗಿರುವುದನ್ನು ಈ ಕೃತಿಯಿಂದ ತಿಳಿದುಬರುತ್ತದೆ.

೨೦೦೫ರಲ್ಲಿ ಪ್ರಕಟವಾದ ಮರಿಸಿದ್ಧಯ್ಯ ಸ್ವಾಮಿಗಳ 'ಶ್ರೀ ಶಿವರಾಮವಧೂತರ ಪುರಾಣವು' ಕೃತಿಯಲ್ಲಿ ಇವರು ತಮ್ಮ ಜೀವನವನ್ನು ಮತ್ತು ಜೀವನದಲ್ಲಿ ನಡೆದ ಘಟನೆಗಳು ನಂತರ ಇವರು ತಮ್ಮ ಬದುಕಿನಲ್ಲಿ ಸಾಧಿಸಿದ ಸಾಧನೆಗಳನ್ನು ಗುರುತಿಸಲಾಗಿದೆ. ಮಾಡಿದ ಮಹತ್ಕಾರ್ಯಗಳು, ಇವರಿಂದ ಜನಸಾಮಾನ್ಯರು ಕಂಡುಕೊಂಡ ಫಲಗಳನ್ನು ಒಟ್ಟಾರೆಯಾಗಿ ಬದುಕಿನ ಪಯಣದ ಏಳುಬೀಳುಗಳನ್ನು, ಸಾಧನೆಯ ಶಕ್ತಿಯೇನೆಂಬುದನ್ನು ಈ ಕೃತಿಯಿಂದ ತಿಳಿಯಬಹುದಾಗಿದೆ.

೨೦೦೧ರಲ್ಲಿ ಪ್ರಕಟವಾದ ವ್ಹಿ.ಜಿ. ಶೆಟ್ಟಿ ಇವರ ಶ್ರೀ ಸದ್ಗುರು ವೆಂಕಾವಧೂತರ ಪುರಾಣ ಕೃತಿಯಲ್ಲಿ ವೆಂಕಾವಧೂತರು ನೆಲೆನಿಂದ ಊರು, ಅವರು ಜನರಿಗೆ ಮಾಡಿದ ಮಹತ್ಕಾರ್ಯ ಮತ್ತು ಜನರು ಇವರು ಮಾಡಿದ ಕಾರ್ಯಗಳಿಂದ ಕಂಡುಕೊಂಡ ಪರಿಹಾರ ಇವುಗಳನ್ನು ವಿವರಿಸಲಾಗಿದೆ. ವೆಂಕಾವಧೂತರ ಬದುಕಿನ ದಾರಿ ಮತ್ತು ಅವರು ಜನಸಾಮಾನ್ಯರಿಗೆ ದೈವವಾಗಿ ಆರಾಧಿಸುವ ಪೂಜಿಸುವ ದೇವರಾದ ಬಗೆಯನ್ನು ಇಲ್ಲಿ ಕಾಣಬಹುದಾಗಿದೆ.

೨೦೦೦ರಲ್ಲಿ ಪ್ರಕಟವಾದ ಶರಣಪ್ಪರೆಡ್ಡಿಯವರ 'ಕೊಳಗಲ್ಲು ಎರಿಬಸವೇಶ ಪುರಾಣ' ಕೃತಿಯು ಎರಿಬಸವನ ಜೀವನದ ಹಾದಿಯನ್ನು ತಿಳಿಸುತ್ತದೆ. ಅವನು ತನ್ನ ಕುಟುಂಬದಿಂದ ಹೊರಬಂದು ಗುರುವಿಗಾಗಿ ಪರಿತಪಿಸಿ ನಂತರ ಗುರುವನ್ನು ಪಡೆದ ಸಾಧನೆಯ ಹಾದಿಯಲ್ಲಿ ನಡೆದು ಶಕ್ತಿಯನ್ನು ಪಡೆದು ಕೊಳಗಲ್ಲು ಎಂಬ ಊರಿನಲ್ಲಿ ನೆಲೆನಿಂತು ಆ ಊರಿನ ಜನರನ್ನು ಆಶೀರ್ವದಿಸಿ ಅವರ ಕಷ್ಟಗಳನ್ನು ನಿವಾರಿಸಿರುವುದನ್ನು ಕೃತಿಯಲ್ಲಿ ಉಲ್ಲೇಖಿಸಲಾಗಿದೆ.

ಕೊಳಗಲ್ಲಿನಲ್ಲಿ ಪ್ರಸಿದ್ಧ ದೇವರಾಗಿ ಪೂಜಿಸಿಕೊಳ್ಳುತ್ತ ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುತ್ತ ಮಾಡಿದ ಮಹತ್ಕಾರ್ಯಗಳನ್ನು ಈ ಕೃತಿಯಲ್ಲಿ ಕಾಣಬಹುದಾಗಿದೆ.

೨೦೦೮ರಲ್ಲಿ ಪ್ರಕಟವಾದ ಪಿಎಚ್.ಡಿ. ಸಂಶೋಧನಾ ಮಾಲಿಕೆಯಾದ 'ಬಳ್ಳಾರಿ ಜಿಲ್ಲೆಯ ಅವಧೂತರು' ಈ ಕೃತಿಯಲ್ಲಿ ಅವಧೂತರ ಅರ್ಥ, ಅವರ ಲಕ್ಷಣ ಮತ್ತು ಸಾಹಿತ್ಯವನ್ನು ವಿವರಿಸಲಾಗಿದೆ. ಅವಧೂತರನ್ನು ನಂಬಿ ಅವರಿಂದ ಕಷ್ಟ ನಿವಾರಣೆಯನ್ನು ಮಾಡಿಕೊಂಡು ಆರಾಧಿಸಿ ಪೂಜಿಸುತ್ತ ಭಕ್ತರು ಮಠಗಳನ್ನು ನಿರ್ಮಾಣ ಮಾಡಿ ತಮ್ಮ ಮನೆ ದೈವಗಳಾಗಿ ಪೂಜಿಸುತ್ತಿರುವುದನ್ನು ವಿವರಿಸಿದ್ದಾರೆ.

೧೯೯೯ರಲ್ಲಿ ಪ್ರಕಟವಾದ ಡಾ. ಎಫ್.ಟಿ. ಹಳ್ಳಿಕೇರಿಯವರು ಸಂಪಾದನೆಯ ಕೃತಿಯಾದ 'ಎಮ್ಮೆ ಬಸವನ ಕಾಲಜ್ಞಾನ ಸಾಹಿತ್ಯ' ಕೃತಿಯಲ್ಲಿ ಎಮ್ಮೆ ಬಸವನ ಜೀವನ ಚರಿತ್ರೆ ಮತ್ತು ಈತನ ಕಾಲಜ್ಞಾನ ಸಾಹಿತ್ಯದ ವಿವರವನ್ನು ನೀಡಲಾಗಿದೆ. ಶರಣ ಸಂಪ್ರದಾಯದ ಬಸಪ್ಪನ ಕಾಯಕ ಎಮ್ಮೆಗಳನ್ನು ಕಾಯುವುದಾಗಿತ್ತು. ಈ ಕಾಯಕದಿಂದ ಈತನಿಗೆ ಎಮ್ಮೆ ಬಸವನೆಂಬ ಹೆಸರು ಬಂದು ಅದೇ ರೂಢಿಯಾಗಿ ಕರೆಯಲ್ಪಟ್ಟಿದೆಂಬ ವಿಷಯವನ್ನು ವಿವರಿಸಲಾಗಿದೆ. ಮುಂದೆ ನಡೆಯಬಹುದಾದ ವಿಷಯವನ್ನು ಈತನು ಮುಂಚಿತವಾಗಿ ತಿಳಿಸುತ್ತಿದ್ದ. ಕಾಲಜ್ಞಾನವನ್ನು ಹೊಂದಿದವನಾಗಿದ್ದನೆಂಬುದನ್ನು ಈ ಕೃತಿ ತಿಳಿಸುತ್ತದೆ.

೨೦೧೪ರಲ್ಲಿ ಪ್ರಕಟವಾದ ಡಾ. ಅಮರೇಶ ನುಗಡೋಣಿಯವರ 'ತತ್ವಪದ ಸಾಹಿತ್ಯ ಅಧ್ಯಯನ' ಕೃತಿಯಲ್ಲಿ ತತ್ವಪದ ಸಾಹಿತ್ಯದ ಪರಂಪರೆ ರೂಪ ಕುರಿತ ಚರ್ಚೆಯನ್ನು ಮಾಡಿದ್ದಾರೆ. ತತ್ವಪದಕಾರರು ಮತ್ತು ಜನ ಸಮುದಾಯಗಳ ಅಂತರ್‌ಸಂಬಂಧದ ಸ್ವರೂಪವನ್ನು ನೀಡಲಾಗಿದೆ. ತತ್ವಪದಗಳ ವಸ್ತು ಮತ್ತು ಅಭಿವ್ಯಕ್ತಿಯ ವಿಧಾನವನ್ನು ತಿಳಿಸುತ್ತ, ತತ್ವಪದ ಸಾಹಿತ್ಯದಲ್ಲಿ ಪ್ರತಿಭಟನೆ ಪ್ರತಿರೋಧದ ಸ್ವರೂಪ ವಿವರಿಸಲಾಗಿದೆ.

೨೦೦೦ರಲ್ಲಿ ಪ್ರಕಟವಾದ ರಹಮತ್ ತರೀಕೆರೆ ಸಂಪಾದನೆಯ ಕೃತಿ 'ಧರ್ಮ' ವಿಶ್ವಕೋಶ ಈ ಕೃತಿಯಲ್ಲಿ ಅನುಭಾವವೆಂಬುದರ ಕುರಿತ ವಿವರಣೆಯಿದೆ. ಸಾಧಕ ತನ್ನ ಇಷ್ಟ ದೈವದ ಜೊತೆಗೆ ನಡೆಸುವ ಸಂಭಾಷಣೆಯೂ ಅನುಭಾವ ಎನಿಸಿಕೊಳ್ಳುತ್ತದೆ ಎಂದು ಲೇಖಕರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅನುಭಾವವು ಸಾಧಕರ ಸ್ಪರ್ಶಮಣಿ ಎಂಬುದನ್ನು ತಿಳಿಸುತ್ತ ಅನುಭಾವಿಗಳು ಎಂದರೆ ಅವರು ಎಲ್ಲ ಧರ್ಮಗಳ ಚೌಕಟ್ಟುಗಳನ್ನು ಮೀರಿ ನಿಂತಿದ್ದಾರೆ ಎಂದೇ ಅರ್ಥ. ಹೀಗೆ ಅನುಭಾವದ ಅರ್ಥವನ್ನು ತಿಳಿಸಿ ಅನುಭಾವಿಗಳ ಲಕ್ಷಣಗಳನ್ನು ಇಲ್ಲಿ ನೀಡಿದ್ದಾರೆ. ಯೋಗ - ಅನುಭಾವ, ಆಧ್ಯಾತ್ಮ - ಅನುಭಾವ, ತಂತ್ರ ಅನುಭಾವ ಇವುಗಳ ಸ್ಥಿತಿಗಳನ್ನು ವ್ಯತ್ಯಾಸವನ್ನು ಇಲ್ಲಿ ವಿವರಿಸಲಾಗಿದೆ. ಆಧ್ಯಾತ್ಮ ಧರ್ಮದ ಒಳಗಿನಿಂದಲೇ ಹುಟ್ಟುವ, ಬಹುದೂರ ತನ್ನ ಧರ್ಮದ ಚೌಕಟ್ಟಿನಲ್ಲೇ ಸಾಗುವ ಜ್ಞಾನವಾಗಿದೆ. ಅನುಭಾವಕ್ಕೆ ಯಾವುದೇ ಒಂದು ಧರ್ಮದ ಹಂಗಿಲ್ಲ. ಅದು ತಾರ್ಕಿಕವಲ್ಲ. ಯೋಗ - ಆಧ್ಯಾತ್ಮ - ಅನುಭಾವ ಮೂರು ದೇಹ - ಮನಸ್ಸು - ಹೃದಯಗಳ ಸಮತೋಲನವನ್ನು ಸಾಧಿಸಿ, ಅಪೂರ್ವ ಆತ್ಮಶಕ್ತಿಯನ್ನು ಸಿದ್ಧಿಸಿಕೊಳ್ಳುವ ವಿದ್ಯೆ. ಅನುಭಾವದ ಮತ್ತು ಅನುಭಾವಿಗಳ ಲಕ್ಷಣ ಮತ್ತು ಅರ್ಥವನ್ನು ಕೃತಿಯಲ್ಲಿ ನೋಡಬಹುದಾಗಿದೆ. ಹಾಗೆ ಜೈನ, ಬೌದ್ಧ, ಕ್ರೈಸ್ತ ಧರ್ಮದಲ್ಲಿನ ಅನುಭಾವವನ್ನು ವಿವರಿಸಲಾಗಿದೆ.

೨೦೦೦ರಲ್ಲಿ ಪ್ರಕಟವಾದ ಡಾ. ಬಸವರಾಜ ಸಬರದ ಅವರ ಸಂಪಾದನೆಯ ಕೃತಿಯಾದ 'ಹೈದರಾಬಾದ್ ಕರ್ನಾಟಕದ ತತ್ವಪದಗಳು' ಕೃತಿಯಲ್ಲಿ ಹೈದರಾಬಾದ್ ಕರ್ನಾಟಕದ ತತ್ವಪದಕಾರರು ಸ್ವರಚಿತ ಪದಗಳು ನೀಡಲಾಗಿದೆ. ತತ್ವಪದಗಳ ಅರ್ಥ, ಅನುಭಾವದ ಅರ್ಥ ಮತ್ತು ತತ್ವಪದಕಾರರ ಜಿಲ್ಲೆಯ ವೈಶಿಷ್ಟ್ಯತೆಯನ್ನು ಪ್ರಸ್ತಾವನೆಯಲ್ಲಿ ವಿಶ್ಲೇಷಿಸಲಾಗಿದೆ. ಹೈದಾರಾಬಾದ್ ಕರ್ನಾಟಕ ಪ್ರದೇಶದ ಜಿಲ್ಲೆಗಳ ತತ್ವಪದಕಾರರ ರಚನೆಯ ತತ್ವಪದಗಳನ್ನು ಕೃತಿಯಲ್ಲಿ ನೀಡಲಾಗಿದೆ. ಹೈದರಾಬಾದ್ ಕರ್ನಾಟಕದ ಜಿಲ್ಲೆಗಳಾದ ಗುಲಬರ್ಗಾ, ರಾಯಚೂರು, ಬೀದರ್, ಕೊಪ್ಪಳ ಜಿಲ್ಲೆಗಳ ಪರಿಸರದಲ್ಲಿನ ತತ್ವಪದಕಾರರ ರಚನೆಯ ತತ್ವಪದಗಳು ಈ ಕೃತಿಯಲ್ಲಿ ಕಂಡುಬರುತ್ತವೆ. ಬಳ್ಳಾರಿ ಜಿಲ್ಲೆಯೂ ಕೂಡ ಹೈದರಾಬಾದ್ ಕರ್ನಾಟಕಕ್ಕೆ ಒಳಪಟ್ಟಿದ್ದು, ಇಲ್ಲಿ ಅನೇಕ ತತ್ವಪದಕಾರರು ಮತ್ತು ತತ್ವಪದಗಳು ಲಭ್ಯವಿದ್ದರೂ ಕೃತಿಯಲ್ಲಿ ಕೈ ಬಿಟ್ಟಿರುವುದು ಕೃತಿಯ ದೊಡ್ಡ ಕೊರತೆಯಾಗಿ ಕಂಡುಬರುತ್ತದೆ.

ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ವಿಶಿಷ್ಟವಾದ ಪರಂಪರೆಯಿದೆ; ಕನ್ನಡದ ಪ್ರಥಮ ಕೃತಿ 'ಕವಿರಾಜಮಾರ್ಗ'ವನ್ನು ಕೊಟ್ಟಿದ್ದು ಇದೇ ಪ್ರದೇಶವಾಗಿದೆ. ಶರಣರ, ದಾಸರ ಕಾರ್ಯಕ್ಷೇತ್ರವಾದ ಈ ಪ್ರದೇಶ ತತ್ವಪದಕಾರರ ತಾಣವೂ ಆಗಿದೆ. ವಚನ, ಸ್ವರವಚನ, ಕೀರ್ತನೆ, ಸುಳಾದಿ, ಉಗಾಭೋಗದಂತಹ ವಿಶಿಷ್ಟ ಸಾಹಿತ್ಯ ರೂಪಗಳನ್ನು ನೀಡಿದೆ. ಈ ನೆಲ ಅನೇಕ ಸಮನ್ವಯಗಳನ್ನು ಸಾಧಿಸಿದೆ. ಅನೇಕ ಭಾಷೆ, ಮತ ಮತ್ತು ಅನೇಕ ಸಮುದಾಯಗಳ

ಜನರು ಸೌಹಾರ್ದಯುತವಾಗಿ ಜೀವನ ನಡೆಸುತ್ತಿದ್ದಾರೆ. ಶರಣರು, ದಾಸರು, ತತ್ವಪದಕಾರರು ಸೌಹಾರ್ದಯುತ ಬದುಕಿಗೆ ಪ್ರೇರಣೆಯಾಗಿದ್ದಾರೆ ಎಂಬುದನ್ನು ಈ ಕೃತಿ ವಿಶ್ಲೇಷಿಸುತ್ತದೆ.

ಎಂ. ಬಸವಣ್ಣಯ್ಯ ಅವರ ಕೃತಿ 'ಬುಗ್ಗಪ್ಪ ತಾತನವರ ಪುರಾಣ' ೨೦೦೯ರಲ್ಲಿ ಪ್ರಕಟವಾಗಿದೆ. ಈ ಕೃತಿಯಲ್ಲಿ ಹರಗಿನಡೋಣಿಯಲ್ಲಿ ನೆಲೆಸಿರುವ ಬುಗ್ಗಪ್ಪ ತಾತನವರ ಜನನ, ಬಾಲ್ಯ, ಯೌವನದ ವಿವರಗಳನ್ನು ನೀಡಲಾಗಿದೆ. ಬುಗ್ಗಪ್ಪನವರು ಗುರುಗಳನ್ನು ಪಡೆದು ಆಧ್ಯಾತ್ಮಿಕತೆಯ ಮಾರ್ಗದಲ್ಲಿ ತೊಡಗಿಸಿಕೊಂಡು ನಿಜ ಜೀವನದ ಅರ್ಥವನ್ನು ಕಂಡುಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ತಾನು ಪಡೆದ ಸಾಧನೆಯ ಶಕ್ತಿಯಿಂದ ಜನಸಾಮಾನ್ಯರ ಸಮಸ್ಯೆಗಳನ್ನು ಪರಿಹರಿಸುತ್ತ ಬಂದವರಾಗಿದ್ದಾರೆ. ಜನಸಾಮಾನ್ಯರ ಮನದಲ್ಲಿ ದೈವವಾಗಿ ಉಳಿದು, ಪೂಜಿಸಿಕೊಳ್ಳುತ್ತಿರುವ ಬದುಕಿನ ಚರಿತ್ರೆಯನ್ನು ಈ ಕೃತಿಯಲ್ಲಿ ಕಟ್ಟಿಕೊಟ್ಟಿದ್ದಾರೆ.

'ಮಹಾಯೋಗಿ ಮಹಾದೇವ ವಿಜಯ' ಎಂಬ ಕೃತಿ ೨೦೧೦ರಲ್ಲಿ ಪ್ರಕಟವಾಗಿದೆ. ಪ್ರಭಾನಂದ ಪಂಡಿತ ಇವರ ಕೃತಿಯಲ್ಲಿ ಮಹಾದೇವ ತಾತನವರ ಜನನ ಮತ್ತು ಬಾಲಲೀಲೆಯನ್ನು ತಿಳಿಸಲಾಗಿದೆ. ಮಹಾದೇವ ತಾತನವರು ತಮ್ಮ ಜೀವನದಲ್ಲಿ ಮಾಡಿದ ತೀರ್ಥಯಾತ್ರೆಗಳನ್ನು ವಿವರಿಸುತ್ತ ಬದುಕಿನ ಚರಿತ್ರೆಯನ್ನು ಈ ಕೃತಿಯಲ್ಲಿ ತಿಳಿಸಿದ್ದಾರೆ. ಮಹದೇವ ತಾತನವರು ತ್ರಿಕಾಲಜ್ಞಾನಿಗಳಾಗಿದ್ದರು. ಇವರು ಮುಂದೆ ನಡೆಯುವ ಘಟನೆಗಳನ್ನು ಕುಳಿತಲ್ಲಿಯೇ ತಿಳಿಸುತ್ತಿದ್ದರು. "ಬಳ್ಳಾರಿ ದೊಡ್ಡ ಗಡಿಯಾರದ ಬಜಾರ್ ನಿರ್ಮಾಣವಾಗುವುದು, ಅಲ್ಲೀಪುರದಲ್ಲಿ ದಾರದ ಮಿಲ್ಲು, ಬಟ್ಟೆಯ ಮಿಲ್ಲುಗಳು ಸ್ಥಾಪಿಸಲ್ಪಡುವುವು. ತುಂಗಭದ್ರೆಯು ನನ್ನ ಮಠದ ಸ್ಥಳಕ್ಕೆ ಬರುವಳು. ಇಲ್ಲಿ ರೈಲ್ವೆ ಸ್ಟೇಷನ್ ನಿರ್ಮಾಣವಾಗುವುದು ಮತ್ತು ಅದಕ್ಕೆ ಸ್ವಲ್ಪ ದೂರದಲ್ಲಿ ಮತ್ತೊಂದು ಸ್ಟೇಷನ್ ಸ್ಥಾಪಿಸಲ್ಪಡುವುದು" ಎಂಬುವುದಾಗಿ ಭವಿಷ್ಯವಾಣಿಯನ್ನು ನುಡಿದಿದ್ದರು. ಆದರಂತೆ ಅವೆಲ್ಲ ನಡೆದಿರುವುದನ್ನು ಇಂದಿಗೂ ಜನಸಾಮಾನ್ಯರು ಉಲ್ಲೇಖಿಸುವುದನ್ನು ಕೃತಿಯಲ್ಲಿ ತಿಳಿಸಲಾಗಿದೆ.

೨೦೧೩ರಲ್ಲಿ ಪ್ರಕಟವಾದ ಹಗರಿಬಸಪ್ಪನವರ ಕೃತಿ 'ಹೂವಣ್ಣ ತಾತನವರ ಜೀವನ ಚರಿತ್ರೆ'. ಈ ಕೃತಿಯಲ್ಲಿ ಹೂವಣ್ಣ ತಾತನವರ ಬಾಲ್ಯ ಜೀವನ, ಬದುಕಿನ ಚರಿತ್ರೆಯನ್ನು ನೀಡಲಾಗಿದೆ. ಅವರ ಬದುಕಿನಲ್ಲಿ ಸಾಧನೆಯ ಶಕ್ತಿಯಿಂದ ನಡೆಸಿದ ಮಹತ್ಕಾರ್ಯಗಳ ವಿವರವನ್ನು ಕೃತಿಯಲ್ಲಿ ತಿಳಿಸಿದ್ದಾರೆ. ಸಾಧನೆಯ ಶಕ್ತಿಯಿಂದ ಜನಸಾಮಾನ್ಯರ ಸಂಕಷ್ಟಗಳನ್ನು ನಿವಾರಣೆ ಮಾಡಿ, ಅವರ ಬದುಕಿಗೆ ಹೊಸ ರೂಪವನ್ನು ಕಟ್ಟಿಕೊಟ್ಟಿರುವ ಹೂವಣ್ಣ ತಾತರ ಮಹಿಮೆಯನ್ನು ಈ ಕೃತಿಯಲ್ಲಿ ನೀಡಿದ್ದಾರೆ.

೨೦೧೨ರಲ್ಲಿ ಪ್ರಕಟವಾದ ಯಲ್ಲಪ್ಪಮಾಸ್ತರ ಬನ್ನಿಕೊಪ್ಪ ಅವರ ಕೃತಿಯಾದ 'ಶ್ರೀ ವೀರಭದ್ರಸ್ವಾಮಿ ಚರಿತಾಮೃತ'ದಲ್ಲಿ ವೀರಭದ್ರಸ್ವಾಮಿಯವರ ಜನ್ಮ ಮತ್ತು ಬಾಲಲೀಲೆಯನ್ನು ನೀಡಿದ್ದಾರೆ. ವೀರಭದ್ರಸ್ವಾಮಿಯವರು ಜೀವನದಲ್ಲಿ ವೈರಾಗ್ಯ ಹೊಂದಿ ಗುರು ತೋರಿದ

ಹಾದಿಯಲ್ಲಿ ನಡೆದು ಸಾಧನೆಗೈದರು. ಸಾಧನೆ ಶಕ್ತಿಯಿಂದ ಜನರ ಕಷ್ಟ ನಿವಾರಣೆ ಮಾಡಿದರು. ಬಳ್ಳಾರಿಯ ಜನರ ಸಮಸ್ಯೆಗಳನ್ನು ಪರಿಹಾರ ಮಾಡಿರುವುದನ್ನು ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಹಲವಾರು ಕ್ಷೇತ್ರಗಳಿಗೆ ಸಂಚಾರ ಮಾಡಿ ಜನರ ಕಷ್ಟ ನಿವಾರಣೆಯನ್ನು ಮಾಡಿರುವುದನ್ನು ಕೃತಿಯಿಂದ ತಿಳಿಯಬಹುದು.

'ಬಳ್ಳಾರಿ ಜಿಲ್ಲೆಯ ಐತಿಹ್ಯಗಳು' ಎಂಬ ಕೃತಿಯನ್ನು ಡಾ. ಎ. ಕರಿಬಸಪ್ಪ ಅವರು ೨೦೦೯ರಲ್ಲಿ ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ ಬಳ್ಳಾರಿ ಜಿಲ್ಲೆಯ ಐತಿಹ್ಯದ ಅರ್ಥ, ಸ್ವರೂಪವನ್ನು ತಿಳಿಸುತ್ತ ಇತಿಹಾಸವನ್ನು ತಿಳಿಸಲಾಗಿದೆ. ಪುರಾಣ, ನಂಬಿಕೆ, ಆಚರಣೆ, ಸಂಪ್ರದಾಯಗಳನ್ನು ಐತಿಹ್ಯದ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಸ್ಥಳಗಳ ಐತಿಹ್ಯ, ಘಟನಾ ಐತಿಹ್ಯ ಮತ್ತು ದೈವಸಂಬಂಧಿ ಐತಿಹ್ಯಗಳನ್ನು ವಿವರಿಸಲಾಗಿದೆ. ಸ್ಥಳ ಸಂಬಂಧಿ ಐತಿಹ್ಯಗಳಿಗೆ ಸಂಬಂಧಿಸಿದಂತೆ ಜಿಲ್ಲೆಯಲ್ಲಿ ಕಂಡುಬರುವ ಐತಿಹ್ಯಗಳನ್ನು ಅಧ್ಯಯನಕ್ಕೊಳಪಡಿಸಿದ್ದಾರೆ.



ಅಧ್ಯಾಯ : ಎರಡು

# ಅನುಭಾವ ತಾತ್ವಿಕ ವಿವೇಚನೆ

೨.೧. ಅನುಭಾವದ ಅರ್ಥ

೨.೨. ಅನುಭಾವದ ವ್ಯಾಖ್ಯಾನಗಳು

೨.೩. ಅನುಭಾವದ ವಿಶ್ಲೇಷಣೆ

ಅಧ್ಯಾಯ : ಎರಡು

# ಅನುಭಾವ ತಾತ್ವಿಕ ವಿವೇಚನೆ

ಅನುಭಾವವನ್ನು ಪಡೆಯಲು, ಕಾಣಲು, ಆಧ್ಯಾತ್ಮಿಕದಿಂದ ಮಾತ್ರ ಸಾಧ್ಯ. ಈ ರೀತಿಯ ಸಾಕ್ಷಾತ್ಕಾರ ಮನುಷ್ಯನನ್ನು ಒಂದು ಸ್ಥಿರವಾದ ದಾರಿಯಲ್ಲಿ ನಡೆಸಿಕೊಂಡು ಹೋಗುತ್ತದೆ. ಆ ದಾರಿಯಲ್ಲಿ ಮನುಜ ತನ್ನ ಬದುಕಿನ ಬಯಕೆಗಳನ್ನೆಲ್ಲ, ಜಂಜಾಟಗಳನ್ನೆಲ್ಲ ಬಿಟ್ಟು ವಿಭಿನ್ನವಾದ ಅನುಭವವನ್ನು ಕಾಣುತ್ತಾನೆ. ಅವನ ಮನಸ್ಸು ಮತ್ತು ಆತ್ಮ ಶುದ್ಧಗೊಂಡು ಪರಮಾತ್ಮನ ಸಾಮೀಪ್ಯವನ್ನು ಪಡೆಯುತ್ತವೆ. ಇದು ಅನುಭಾವದ ಮಾರ್ಗ.

ಜೈನ, ಬೌದ್ಧ, ಕ್ರೈಸ್ತ, ವೈಷ್ಣವ ಇತ್ಯಾದಿ ಧರ್ಮಗಳಲ್ಲಿ ಪರಮಾತ್ಮನನ್ನು ಕಾಣಲು, ಅನುಗ್ರಹ ಪಡೆಯಲು ಇರುವ ಸಾಧನ ಮುಕ್ತಿ, ಆಧ್ಯಾತ್ಮ, ಆತ್ಮಪರಿಶುದ್ಧತೆ. ಇವುಗಳಿಂದ ಅನುಭಾವವನ್ನು ಕಾಣಬಹುದಾಗಿದೆ.

ಆಧ್ಯಾತ್ಮದಿಂದ ಪಡೆಯುವ ಜೀವನದ ಒಂದು ವಿಧವೇ ಅನುಭಾವವೆನ್ನುವುದು ಇಲ್ಲಿ ಕಾಣಸಿಗುತ್ತದೆ. ಮನುಷ್ಯ ತನ್ನ ಜೀವನದಿಂದ ಪಡೆಯುವ ಮುಕ್ತಿಯೇ ಅನುಭಾವ. ಮುಕ್ತಿಯನ್ನು ಪಡೆಯುವ, ಪಡೆದ ವ್ಯಕ್ತಿ ತನ್ನಲ್ಲಿರುವ ಎಲ್ಲಾ ಬಯಕೆ-ಬಂಧನಗಳಿಂದ ಮುಕ್ತನಾಗಿರುತ್ತಾನೆ.

ಬೌದ್ಧಧರ್ಮವು ಮುಕ್ತಿ, ಮೋಕ್ಷವನ್ನು ನಿರ್ವಾಣ ಎಂದು ಹೇಳುತ್ತದೆ. ಮನುಷ್ಯ ನಿರ್ವಾಣ ಹೊಂದಲು ಅಷ್ಟಾಂಗ ಮಾರ್ಗವನ್ನು ಅನುಸರಿಸಬೇಕು. ಇದರಿಂದ ಆತನ ಆತ್ಮವು ಪರಿಶುದ್ಧಗೊಂಡು, ಮನಸ್ಸಿನ ಚಂಚಲತೆ ಮತ್ತು ಇಂದ್ರಿಯಗಳ ಬಯಕೆಗಳನ್ನು ನಿಯಂತ್ರಣ ದಲ್ಲಿಟ್ಟುಕೊಳ್ಳಬಹುದಾಗಿದೆ. ಸಾಧಕನು ಸಾಧನೆಗೈದು ಮುಕ್ತಿಯನ್ನು ಪಡೆಯಲು ಆತ್ಮವು ಪರಿಶುದ್ಧಗೊಂಡಿರಬೇಕು. ಅಷ್ಟಾಂಗ ಮಾರ್ಗವನ್ನು ಅನುಸರಿಸುವುದರಿಂದ ನಿರ್ವಾಣವನ್ನು ಹೊಂದಬಹುದಾಗಿದೆಂದು ಬೌದ್ಧಧರ್ಮ ತಿಳಿಸುತ್ತದೆ.

ಜೈನಧರ್ಮದಲ್ಲೂ ಆತ್ಮ ಪರಿಶುದ್ಧತೆಯಿಂದಲೇ ಮುಕ್ತಿಯನ್ನು ಪಡೆಯಲು ಸಾಧ್ಯಯೆನ್ನುವುದನ್ನು ಕಾಣಬಹುದಾಗಿದೆ. ಈ ಧರ್ಮದಲ್ಲಿ ಆತ್ಮ ಪರಿಶುದ್ಧತೆ ಪಡೆದವರನ್ನು 'ಜಿನ' ಎನ್ನುತ್ತಾರೆ. ಇವರು ಇಂದ್ರಿಯಗಳನ್ನು ಗೆದ್ದವರು. ಇವರ ಮನಸ್ಸು, ಆತ್ಮ ಪರಿಶುದ್ಧಗೊಂಡು ಸಾಧನೆಗೈದು

ಸಿದ್ಧಿಯನ್ನು ಪಡೆಯಬಹುದಾಗಿದೆ. 'ಜಿನ'ರು ಸಾಂಸಾರಿಕ ಬಂಧನವನ್ನು ಕಿತ್ತೆಸೆದು, ಅಗಾಧ ಜ್ಞಾನ ಸಂಪತ್ತು, ಪರಿಪೂರ್ಣ ಸಾಕ್ಷಾತ್ಕಾರವನ್ನು ಪಡೆದವರು. ಮುಕ್ತಿಯನ್ನು ಬಯಸುವ ಪ್ರತಿ ಮನುಷ್ಯ ಇವರಂತೆ ಪರಿಶುದ್ಧನಾಗಿರಬೇಕು. ಆಗ ಆತ್ಮ ಪರಿಶುದ್ಧಗೊಂಡು ಸಾಧನೆಗೈಯ ಬಹುದೆಂಬುದನ್ನು ತಿಳಿಸುತ್ತದೆ.

ಕ್ರೈಸ್ತ ಧರ್ಮವು ವ್ಯಕ್ತಿಯು ಮಾಡುವ ನಿರ್ಮಲವಾದ ಪ್ರಾರ್ಥನೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟಿದೆ. ವ್ಯಕ್ತಿ ತಾನು ಏಕಾಂಗಿಯಾಗಿ ಮಾಡುವ ಪ್ರಾರ್ಥನೆಯಲ್ಲಿ ನಿರ್ಮಲ ಪ್ರೀತಿ, ನಿರ್ಭಯವಾದ ಭಕ್ತಿ ಇರುತ್ತದಲ್ಲದೆ ನಿಷ್ಕಳಂಕ ಪ್ರೀತಿಗೆ ಇಲ್ಲಿ ಹೆಚ್ಚಿನ ಆದ್ಯತೆಯಿದೆ. ಈ ಧರ್ಮ ಹೇಳುವುದೆಂದರೆ ಇದು ಭಗವಂತ ಯೇಸುವಿನ ವಾಕ್ಯವು ಕೂಡ ಆಗಿದೆ. ಪ್ರೀತಿಯೆನ್ನುವುದು ಪವಿತ್ರ; ನಿಷ್ಕಳಂಕ. ನಾವು ನಮ್ಮನ್ನೆಷ್ಟು ಪ್ರೀತಿಸುವೆವೋ ಅಷ್ಟೇ ನೆರೆಹೊರೆಯವರನ್ನು ಪ್ರೀತಿಸಿ ಮತ್ತು ಶತ್ರುಗಳನ್ನು ಪ್ರೀತಿಸಿ; ದ್ವೇಷಿಸುವವರನ್ನು ಪ್ರೀತಿಸಿ ಇದರಿಂದ ಆತ್ಮವು ಪರಿಶುದ್ಧಿಗೊಳ್ಳುತ್ತದೆ. ಪರಿಶುದ್ಧವಾದ ಮನಸ್ಸಿನಲ್ಲಿ ಪರಮಾತ್ಮನ ಅನುಗ್ರಹವಿರುತ್ತದೆಂದು ತಿಳಿಸುತ್ತದೆ. ಪರಿಶುದ್ಧ ಪ್ರೀತಿಯಿಂದ ಅವನ ಮುಕ್ತಿಯನ್ನು ಪಡೆಯಲು ಸಾಧ್ಯ. ಬದುಕಿನ ಬಂಧನದಿಂದ ಭಗವಂತನ ಮಾರ್ಗದಲ್ಲಿ ನಡೆಯುವವನೆಂದು ಅರ್ಥೈಸಿಕೊಳ್ಳಬಹುದಾಗಿದೆ.

### ೨.೧. ಅನುಭಾವದ ಅರ್ಥ

ಭಕ್ತಿ, ಭಜನೆ, ಕೀರ್ತನೆ, ಸ್ಮರಣೆ ಮತ್ತು ಧ್ಯಾನಗಳಿಂದ, ಆತ್ಮ ಪರಿಶೋಧನೆಯಿಂದ ಪರಮಾತ್ಮನೊಳಗೆ ಸಮರಸ ಹೊಂದುವ ಭಾವವನ್ನೇ ಅನುಭಾವ ಎನ್ನಬಹುದು. ಈ ಮಾರ್ಗದಲ್ಲಿನ ಮಾರ್ಗಿಗಳು ಲೌಕಿಕ ಬದುಕಿನ ಎಲ್ಲಾ ಸುಖ ಸಂಪತ್ತು ತ್ಯಜಿಸಿ ಆತ್ಮ ಸಾಕ್ಷಾತ್ಕಾರಕ್ಕಾಗಿ ಹಂಬಲಿಸುವರು. ಆತ್ಮ ಸಾಕ್ಷಾತ್ಕಾರಕ್ಕೆ ಅನುಭಾವವೇ ಆಧಾರ. ಆಧ್ಯಾತ್ಮ ಜಗತ್ತಿನಲ್ಲಿ ವಿಶಿಷ್ಟ ಮಹತ್ವವುಳ್ಳದ್ದು ಅನುಭಾವ. ಆಧ್ಯಾತ್ಮಿಕ ಸಾಧನೆ ಮತ್ತು ಸಿದ್ಧಿಗಳ ಅನುಭವವನ್ನೇ ಅನುಭಾವ ಎನ್ನಬಹುದು. ಅನುಭಾವವನ್ನು ಅರಿಯುವುದು ಕಷ್ಟ. ಅದನ್ನು ಅನುಭವಿಸಿಯೇ ತಿಳಿಯಬೇಕು.

ಅನುಭಾವವೆಂಬುದು ಅಂತರಂಗದ ರತ್ನ ಆತ್ಮವಿದ್ಯೆ, ನಿಜನಿವಾಸದಲ್ಲಿರುವುದು, ಅಂತರಂಗ ದಲ್ಲಿರುವ ಶಕ್ತಿಗಳನ್ನು ಎಚ್ಚರಗೊಳಿಸಿ ಆ ಎಚ್ಚರದಿಂದ ತೆರೆದ ಒಳಗಣ್ಣಿನಿಂದ ಸತ್ಯದ ಸ್ವರೂಪವನ್ನು ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸಿಕೊಳ್ಳುವುದನ್ನು ಅನುಭಾವ ಎಂದು ವಿಶ್ಲೇಷಿಸಲಾಗಿದೆ.

ಅನುಭಾವವನ್ನು ಆಂಗ್ಲಭಾಷೆಯಲ್ಲಿ ಮಿಸ್ಟಿಸಿಸಮ್ ಎಂದು ಕರೆಯುತ್ತಾರೆ. ಮಿಸ್ಟಿಸಿಸಮ್ ಅಂದರೆ ಗೂಢವಾದುದು, ರಹಸ್ಯವಾದುದು ಎಂಬ ಅರ್ಥವಿದೆ.

೧. ಅನುಭಾವವೆಂಬುದು ಲೌಕಿಕದಿಂದ ಆಚೆ ಇರುವಂಥದ್ದು. ಅಲೌಕಿಕ ಮಾರ್ಗದಲ್ಲಿ ನಡೆದು ತನ್ನತನದ ಅರಿವನ್ನು ಪಡೆದು ಸಾಧನೆಯ ಸಿದ್ಧಿಯನ್ನು ಹೊಂದಿ ಕತ್ತಲಿನಲ್ಲಿರುವ ತನ್ನ ದೇಹದಲ್ಲಿ ಬೆಳಕಿನ ಸಂಚಾರದ ಸ್ಪರ್ಶವನ್ನು ಪಡೆಯುವಂಥದ್ದೇ ಅನುಭಾವ.

೨. ಅನುಭಾವವೆಂಬುದು ಸಾಧಕನನ್ನು ಸಿದ್ಧಿಗೇರಿಸಲು ಸಹಾಯಕವಾದ ಜೀವನ ದರ್ಶನವೂ ಮತ್ತು ಮಾರ್ಗವು ಹೌದು.

೩. ಮನುಷ್ಯನ ಅಂತರಂಗದಲ್ಲಿ ಅಡಗಿರುವ ಶಕ್ತಿಯನ್ನು ಎಚ್ಚರಗೊಳಿಸಿ ಅದನ್ನು ಪ್ರತ್ಯಕ್ಷವಾಗಿ ಸ್ಪರ್ಶಿಸುವುದೇ ಅನುಭಾವ.

೪. ಪರಮಾತ್ಮನ ನಿಜ ಸ್ವರೂಪವನ್ನು ಕಾಣುವುದೇ ಅನುಭಾವ.

೫. ಸೃಷ್ಟಿಯ ರಹಸ್ಯವನ್ನು ಅರಿಯುವುದೇ ಅನುಭಾವ.

೬. ಅಂತರಾತ್ಮದ ಪರಿಶುದ್ಧತೆಯಿಂದ ಪಡೆಯುವ ಅನುಭವವೇ ಅನುಭಾವ.

"ಅನುಭಾವಕ್ಕೆ ಯಾವುದೇ ಒಂದು ಧರ್ಮದ ಹಂಗಿಲ್ಲ, ಅದು ತಾರ್ಕಿಕವಲ್ಲ, ಅದು ಭಕ್ತಿ, ವಿರಕ್ತಿ, ಹಠ, ಧ್ಯಾನ, ಮೌನ, ಮಾತು, ಮಹಾಶಾಂತಿ, ವೀರಕ್ರೋಧದಲ್ಲಿ ಮೆರೆಯುತ್ತ ಯಾವ ಹಿಡಿತಕ್ಕೂ ಸಿಕ್ಕದೆ ಸಾಗುವ ನಿಗೂಢ ನಡೆ ನುಡಿ."[೧]

ಹಲವಾರು ಅನುಭಾವಿಗಳು ಅನುಭಾವವನ್ನು ಕುರಿತು ಹೀಗೆ ವ್ಯಾಖ್ಯಾನಿಸಿದ್ದಾರೆ.

### ೨.೨. ಅನುಭಾವದ ವ್ಯಾಖ್ಯಾನಗಳು

ಅನುಭಾವವನ್ನು ಕುರಿತಂತೆ ಆದ್ಯ ವಚನಕಾರ ದಾಸಿಮಯ್ಯನಾದಿಯಾಗಿ ಅನೇಕ ವಚನಕಾರರು ತಮ್ಮ ರಚನೆಯಲ್ಲಿ ಅನುಭಾವವನ್ನು ಹೀಗೆ ಚರ್ಚಿಸಿದ್ದಾರೆ.

ಪರರ ಸಹವಾಸ ಮಾಡಿದರೆ ಮಾತ್ರ ಅಲ್ಲಿ ಕೋಪ ದ್ವೇಷಗಳಿಗೆ ದಾರಿ ಹುಟ್ಟುತ್ತದೆ. ಮತ್ತೊಬ್ಬರಿಂದ ನಮಗೆ ತೊಂದರೆಯಾಗಿದೆ ಎನ್ನುವುದು ನಾವು ಸುಮ್ಮನಿದ್ದರೆ ಆಗದು ಮತ್ತೊಬ್ಬರನ್ನು ಸಂಪರ್ಕಿಸಿದಾಗ ಆಗುವ ಘಟನೆಯ ಸಂಘರ್ಷದಿಂದಲೇ ಅಲ್ಲಿ ಕೋಪಕ್ಕೆ ದಾರಿ ಸಿಗುತ್ತದೆ. ಹಾಗೆ ಭಗವಂತನ ಸಂಗವನ್ನು ಮಾಡಿದರೆ ಆತನಲ್ಲಿ ಮೊರೆಹೋದರೆ ತನು, ಮನ, ಶುದ್ಧಿಗೊಳಿಸಿ ಬಿಡದೆ ಪ್ರಾರ್ಥಿಸಿದರೆ ಪರಮಾತ್ಮನು ಒಲಿಯುವನು; ತನ್ನ ಪ್ರೀತಿಯನ್ನು ಅನುಗ್ರಹಿಸುವನು ಎಂದು ಅಕ್ಕಮಹಾದೇವಿಯು ಒಂದು ವಚನದಲ್ಲಿ ಅನುಭಾವವನ್ನು ಹೀಗೆ ಹೇಳಿದ್ದಾರೆ.

"ಸಂಗದಿಂದಲ್ಲದೆ ಅಗ್ನಿ ಹುಟ್ಟದು
ಸಂಗದಿಂದಲ್ಲದೆ ಬೀಜ ಮೊಳೆದೋರದು
ಸಂಗದಿಂದಲ್ಲದೆ ದೇಹವಾಗದು
ಸಂಗದಿಂದಲ್ಲದೆ ಸರ್ವಸುಖದೋರದು ಚೆನ್ನಮಲ್ಲಿಕಾರ್ಜುನಯ್ಯಾ"[೨]

ಕಾಲಹರಣ ಮಾಡುವುದು ಎಷ್ಟು ಸಮಂಜಸವಲ್ಲವೆಂಬುದನ್ನು ಇಲ್ಲಿ ತಿಳಿಸುತ್ತಾರೆ. ಪರಮಾತ್ಮ ಕರುಣಿಸಿದ ಈ ದಿನಗಳಲ್ಲಿ ನಡೆಯುವ ಜೀವನದ ಪಯಣವನ್ನು ಸಾರ್ಥಕಗೊಳಿಸಿ ಮುಕ್ತಾಯ ಗೊಳಿಸಬೇಕು. ಅದನ್ನು ವ್ಯರ್ಥಗೊಳಿಸದಿರಿ. ಕಳೆದ ದಿನ, ಹೊತ್ತು ಮತ್ತೆ ದೊರಕದು. ಸಿಗುವ

ಸಮಯದಲ್ಲಿ ಪರಮಾತ್ಮನನ್ನು ಪ್ರಾರ್ಥಿಸಿ ಪೂಜಿಸಿ ಮನ ಮನಸ್ಸನ್ನು ಶುದ್ಧೀಕರಿಸಿ ಕೊಳ್ಳಬಹುದೆನ್ನುವುದೇ ಈ ವಚನದಲ್ಲಿನ ಸತ್ಯತೆ. ಮುಕ್ತಾಯಕ್ಕ ತನ್ನ ವಚನವೊಂದರಲ್ಲಿ ಅನುಭಾವವನ್ನು ಹೇಳಿರುವುದನ್ನು ಕಾಣಬಹುದು.

"ಸುಮ್ಮನೇಕೆ ದಿನ ಕಳೆವಿರಿ, ಸುಮ್ಮನೇಕೆ ಹೊತ್ತುಗಳೆವಿರಿ?
ಸುಮ್ಮನೇಕೆ ಹೊತ್ತು ಗಳೆವಿರಿ ಸ್ವಾಮಿಗಳಿರಾ?
ಮಾಡಿ ಬನ್ನಿ ದಿನ ಶಿವರಾತ್ರಿಯ, ಕೇಳ ಬನ್ನಿ ಶಿವಾನುಭವವ,
ನೋಡಬನ್ನಿ ಅಜಗಣ್ಣನಿರವ ಬಸವಣ್ಣ ತಂದೆ."[೩]

ಆಸೆಗಳು ಮನುಷ್ಯನನ್ನು ಮನಸ್ಸನ್ನು ಕೊಲ್ಲುತ್ತವೆ. ಇವುಗಳನ್ನು ದೇಹದೊಳಗೆ ಸುಳಿಯಲು ಬಿಡುವುದು ತಪ್ಪು. ಅದನ್ನು ಆಚೆ ಓಡಿಸಬೇಕು. ಮನ ಶುದ್ಧಿಗೊಂಡು ಪರಮಾತ್ಮನಿಗೆ ಪ್ರಿಯವಾಗಲು ಅದರಲ್ಲಿರುವ ಕಲ್ಮಶಗಳಾದ ಆಸೆ, ಬಯಕೆ, ವೈಭೋಗ, ಸ್ತ್ರೀಸಂಗ, ಇದರ ಹಿಂದೆ ಹೋಗದೆ ಪರಮಾತ್ಮನ ಹಿಂದೆ ನಡೆದರೆ ಅವನ ಅನುಗ್ರಹದಿಂದ ಮುಕ್ತಿ ದೊರೆಯುತ್ತದೆ. ಅಲ್ಲಮಪ್ರಭುಗಳು ಅನುಭಾವವನ್ನು ತಮ್ಮ ವಚನಗಳಲ್ಲಿ ಚರ್ಚಿಸಿರುವ ಪರಿಯನ್ನು ಅವರ ವಚನದ ಕೆಲ ಸಾಲುಗಳಲ್ಲಿ ಕಾಣಬಹುದು.

"ಆಸೆಗೆ ಸತ್ತುದು ಕೋಟಿ
ಆಮಿಷಕ್ಕೆ ಸತ್ತುದು ಕೋಟಿ
ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ
ಗುಹೇಶ್ವರಾ ನಿಮಗಾಗಿ ಸತ್ತವರನಾರನೂ ಕಾಣೆ"[೪]

ಪರಮಾತ್ಮನ ಸೃಷ್ಟಿಯ ಈ ಜಗತ್ತಿನಲ್ಲಿ ಬದುಕಿ ಬಾಳಲು ವಿಶೇಷವಾದ ಜೀವ ನೀಡಿರುವುದು ಮನುಜನಿಗೆ. ಅದನ್ನು ಸರಿಯಾಗಿ ಬಳಸಿಕೊಳ್ಳುವುದು ಮನುಜನ ಧರ್ಮ. ಆದರೆ ಮನುಜ ಮತ್ತೊಬ್ಬ ಮನುಜನಿಗೆ ದೈಹಿಕ, ಮಾನಸಿಕ ತೊಂದರೆ ಕೊಟ್ಟು ನೋವು ಮಾಡುವುದರಿಂದ ವ್ಯಕ್ತಿ ನೋವಿಗೆ ಸಿಲುಕಿ ಬದುಕಲು ಭಯಪಡುವಂತ ಸ್ಥಿತಿಗೆ ಒಳಗಾಗುತ್ತಾನೆ. ಇದರ ತಪ್ಪನ್ನು ಅರಿತು ಅದನ್ನು ಸರಿಪಡಿಸಿಕೊಂಡು ಪರಮಾತ್ಮನ ಅನುಗ್ರಹ ಪಡೆಯಲು ಗಂಗಾಸ್ನಾನ, ತುಂಗಪಾನ ಎನ್ನುವಂತೆ ಗಂಗೆಯಲ್ಲಿ ಮುಳುಗಿ ಬಂದರೆ ಅರ್ಥವಿಲ್ಲದ ಬದುಕು ಅವನದಾಗುವುದು ಎಂಬುದಾಗಿ ಸಿದ್ಧರಾಮ ಅವರು ಅನುಭಾವದ ನುಡಿಗಳನ್ನು ತಮ್ಮ ವಚನದಲ್ಲಿ ಚಿಂತಿಸಿದ್ದಾರೆ.

"ಒಬ್ಬರ ಮನವ ನೋಯಿಸಿ ಒಬ್ಬರ ಮನೆಯ ಘಾತವ ಮಾಡಿ
ಗಂಗೆಯ ಮುಳುಗಿದರೆ ಆಗುವುದೇನಯ್ಯಾ!"[೫]

ವ್ಯಕ್ತಿಗೆ ತನ್ನ ಬದುಕಿನಲ್ಲಿ ಆಸೆ, ಬಯಕೆಗಳ ಮತ್ತು ವೈಭವದ ಜೀವನ ಎನ್ನುವುದು ಮನಸ್ಸಿಗೆ ಬಾರದಿರಲಿ; ಅದು ಬಂದಾಗ ಮನುಜ ಮನಸಿಜನಾಗುತ್ತಾನೆ. ತಾನಿರುವ ಸೃಷ್ಟಿಯ ಸೃಷ್ಟಿಕರ್ತನನ್ನೇ ಮರೆತು ಅಹಂ, ನಾನು, ನನ್ನದೆನ್ನುವ, ವಿಕೃತಗುಣಗಳಿಗೆ ದೇಹದಲ್ಲಿ ಪ್ರವೇಶ

ಕೊಡುತ್ತಾನೆ. ಅಂಥದ್ದನ್ನೆಲ್ಲ ಪರಮಾತ್ಮನ ಸಾಮಿಪ್ಯವನ್ನು ಬಯಸುವ ಯಾರಿಗೂ ಬಾರದಿರಲಿ. ಅದನ್ನು ದೂರ ತಳ್ಳು ಎನ್ನುವ ಉಪದೇಶವನ್ನು ಮುಪ್ಪಿನ ಷಡಕ್ಷರಿಯು ಚರ್ಚಿಸಿರುವುದನ್ನು ಅವರ ವಚನದ ಸಾಲುಗಳಲ್ಲಿ ಕಾಣಸಿಗುತ್ತದೆ.

"ಧರೆಯ ಸುಖದ ಭೋಗವೆನಗೆ
ಹರಿದು ಹೋಗಲಯ್ಯ ನಿಮ್ಮ
ಚರಣಕಮಲದಲ್ಲಿ ಮನವು ಮಗ್ನವಾಗಲಿ"॥[೬]

ಮನುಷ್ಯ ಜೀವನದಲ್ಲಿ ಆತ್ಮೀಯತೆಯಿಂದ ಬಾಳಿಬದುಕುವ ಆಸೆಯನ್ನು ಹೊಂದಿರಬೇಕು. ನೀತಿ ನಿಯಮಗಳಿಗೆ ಜಾಗವಿರಬೇಕು. ಆತ್ಮೀಯತೆ, ಅನುಕಂಪ, ಕರುಣೆ, ಇಲ್ಲದೆ ಬದುಕುವ ಮನುಜನ ಬದುಕು ಪ್ರಾಣಿಗಳಿಗಿಂತ ಕೀಳು. ಜಾತಿ, ಧರ್ಮವೆಂಬುದು ಆತ್ಮದ ದೃಷ್ಟಿಯಲ್ಲಿ ನೋಡಬೇಕು. ಆಗ ಜೀವನಕ್ಕೊಂದು ಅರ್ಥ ಸಿಗುವುದು. ಆತ್ಮಕ್ಕೆ ಜಾತಿ, ಮತಗಳಿಲ್ಲ; ಅದನ್ನು ಮನುಜ ತನ್ನ ಜೀವನದಲ್ಲಿ ಅಳವಡಿಸಿಕೊಂಡು ಸಮಾನತೆಯಿಂದ ಪ್ರೀತಿಯಿಂದ ಬಾಳಿ ಬದುಕಬೇಕು. ಯಾವ ಧರ್ಮವಿರಲಿ, ಮತವಿರಲಿ, ದೇವರು ಎಲ್ಲರಿಗೆ ಒಬ್ಬನೆನ್ನುವುದನ್ನು ಅರಿತು ಬಾಳಬೇಕೆನ್ನುವ ಸಂದೇಶವನ್ನು ಇಲ್ಲಿ ಕಾಣಬಹುದು. ಗುರುನಾನಕರು ತಮ್ಮ ವಾಕ್ಯಗಳಲ್ಲಿ ಅನುಭಾವವನ್ನು ಹೀಗೆ ಚರ್ಚಿಸಿದ್ದಾರೆ. "ನೈತಿಕ ಜೀವನವೇ ಮನುಷ್ಯನ ಧ್ಯೇಯವಾಗಬೇಕು. ನೀತಿಯ ನೆಲೆಗಟ್ಟಿಲ್ಲದ ಮನುಷ್ಯ ಮನುಷ್ಯನೇ ಅಲ್ಲ. ಅಂಥವನು ಪಶುವಿಗಿಂತಲೂ ಕಡೆ. ಜಾತಿಯ ಹೆಸರಿನಲ್ಲಿ ದುಷ್ಕೃತ್ಯ ಎಸಗುವವರು ಖಂಡನಾರ್ಹರು, ಪಂಥ, ಜಾತಿ, ಧರ್ಮ, ಮತಗಳು ಎಷ್ಟೇ ಇದ್ದರೂ ದೇವರು ಮಾತ್ರ ಒಬ್ಬನೇ."[೭]

ಪರಮಾತ್ಮನು ತಾನು ಸೃಷ್ಟಿಸಿರುವ ಪ್ರತಿ ಮನುಷ್ಯನನ್ನು ಸಮಾನತೆಯ ದೃಷ್ಟಿಯಲ್ಲಿ ನೋಡುತ್ತಾನೆ. ಭಗವಂತನಿಗೆ ಎಲ್ಲರೂ ಸಮಾನರು. ಅರಸನ ಉಡುಗೆ-ವೈಭವವನ್ನಾಗಲಿ, ಭಿಕಾರಿಗೆ ಯಾವುದು ಇಲ್ಲವೆನ್ನುವ ಭೇದಭಾವವನ್ನು ಅವನು ಮಾಡುವುದಿಲ್ಲ. ಪರಮಾತ್ಮನಿಗೆ ಪ್ರಿಯವಾದುದು ಪರಿಶುದ್ಧವಾದ ಮನಸ್ಸು. ಮನುಜ ತನ್ನ ಅಂತರಾತ್ಮವನ್ನು ಪರಿಶುದ್ಧ ಮಾಡಿಕೊಂಡು ಪ್ರಾರ್ಥಿಸಿದರೆ ಅನುಗ್ರಹಿಸುವನು. ಆಡಂಬರದ ಜೀವನ ಅವನು ನೋಡನು. ಪರಿಪಕ್ವವಾದ ಪರಿಶುದ್ಧವಾದ ಮನಸ್ಸಿನಿಂದ ಅರಸ, ಬಡವ, ಜಾತಿ, ಮತಗಳ ತಾರತಮ್ಯವನ್ನು ಬಿಟ್ಟು ಪೂಜಿಸಿದರೆ ಫಲ ಸಿಗುವುದೆಂಬುದನ್ನು ಇಲ್ಲಿ ದೃಢೀಕರಿಸಿದ್ದಾರೆ. ತುಕರಾಮರವರು ಅನುಭಾವವನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ. "ಅರಸನೂ ಭಿಕಾರಿಯೂ ಸಮಾನರು; ಆಂತರಿಕ ಶುದ್ಧಿ ಮುಖ್ಯವೇ ಹೊರತು ವೇಷಭೂಷಣಗಳಲ್ಲ, ಭಕ್ತಿಗೆ ಜಾತಿಭೇದದ ಬಂಧನವಿಲ್ಲ. ಭಕ್ತಿಯಿಂದ ದೇವರ ಸಾನಿಧ್ಯವನ್ನು ಪಡೆದು ಮುಕ್ತಿ ಹೊಂದಲು ಸಾಧ್ಯ."[೮]

ಮನುಜ ಮುಕ್ತಿ ಪಡೆಯಲು ಅವನು ತಾನು ಯಾವ ಜಾತಿಯೆಂದು ನೋಡುವುದು ವ್ಯರ್ಥ. ಭಕ್ತಿ ಮಾರ್ಗದಲ್ಲಿ ನಡೆದರೆ ಸಾಕು. ತಾನು, ತನ್ನದು, ನಾನು, ನನ್ನದೆಂಬ ಅಹಂಕಾರ, ಕೋಪ, ದ್ವೇಷ, ಅಸೂಯೆಗಳನ್ನು ಬಿಟ್ಟು ಸರ್ವವು ಭಗವಂತನೇ ಅವನು ಸೃಷ್ಟಿಸಿರುವ

ಜೀವಿಯನ್ನು ಅವನೇ ರಕ್ಷಿಸುವನೆಂದು ನಿಶ್ಚಲ, ನಿರ್ಮಲ ಮನಸ್ಸಿನಿಂದ ಪ್ರಾರ್ಥಿಸಿದರೆ ಪರಮಾತ್ಮನು ಮುಕ್ತಿಯನ್ನು ಕರುಣಿಸುವನೆಂಬುದನ್ನು ಈ ವಾಕ್ಯದಲ್ಲಿ ಕಾಣಬಹುದು. ಸಂತನಾಮದೇವ ತಮ್ಮ ವಾಕ್ಯದಲ್ಲಿ ಅನುಭಾವವನ್ನು ಹೀಗೆ ಚರ್ಚಿಸಿದ್ದಾರೆ. "ಯಾವುದೇ ಜಾತಿ, ಮತ ಕುಲದವರಾದರೂ ಭಕ್ತಿ ಮಾರ್ಗದಲ್ಲಿ ನಡೆದರೆ ಮುಕ್ತಿಯನ್ನು ಪಡೆಯುತ್ತಾರೆ. ಅಹಂಕಾರವನ್ನು ಬಿಟ್ಟು ಸರಳ ಜೀವಿಗಳಾಗಿ ಬದುಕಿದರೆ ಸಕಲ ಜೀವಿಗಳಲ್ಲಿಯೂ ವಾಸುದೇವನನ್ನು ಕಾಣಬಹುದು. ಸಿಟ್ಟು ಅಹಂಕಾರವನ್ನು ತ್ಯಜಿಸಿದವರನ್ನು ಮಾತ್ರವೇ ಸಂತರೆಂದು ತಿಳಿಯಬೇಕು."[೯]

ಭೂಮಿಯ ಮೇಲಿರುವ ಮನುಷ್ಯ ಜೀವಿಗಳೆಲ್ಲ ಒಂದೆ. ಇಲ್ಲಿ ಯಾವ ಕುಲ, ಜಾತಿಗಳಿಲ್ಲ. ಮನುಷ್ಯ ಜನ್ಮ ಪಡೆದ ಪ್ರತಿಯೊಬ್ಬನು ಎಲ್ಲರನ್ನು ಸಮನಾಗಿ ಕಾಣುವ ಮನೋಭಾವವುಳ್ಳವ ನಾಗಿರಬೇಕು. ಮನುಷ್ಯಜೀವಿಗಳಲ್ಲಿ ಒಂದೇ ಜಾತಿ; ದೇವರೊಬ್ಬನೇ ಎನ್ನುವ ಮನಸ್ಸನ್ನು ಹೊಂದಿರಬೇಕು. ಪರಮಾತ್ಮನ ಅನುಗ್ರಹ ಸಿಗುವುದು ಜಾತಿ, ಕುಲ, ಧರ್ಮ, ಆಚರಣೆಗಳಿಂದಲ್ಲ; ಅವನ ನಡೆನುಡಿ ಪರಿಶುದ್ಧತೆಯ ಮನಸ್ಸಿನಿಂದ ಎನ್ನುವುದನ್ನು ರಮಾನಂದರು ಚರ್ಚಿಸಿರುವುದನ್ನು ಕಾಣಬಹುದು. "ದೇವರು ಒಬ್ಬನೇ ಎಲ್ಲ ಧರ್ಮಗಳೂ ಸಮಾನವಾದವುಗಳು, ಎಲ್ಲ ಮತಗಳೂ ಸಮಾನತೆಯನ್ನು ಮಾನವೀಯತೆಯನ್ನು ಬೋಧಿಸುತ್ತವೆ. ಮನುಷ್ಯನಿಗೆ ಮನ್ನಣೆ ಸಿಗಬೇಕಾದುದು ಅವನ ನಡತೆ ಗುಣ, ಆಚರಣೆಗಳಿಗಾಯೇ ಹೊರತು ಅವನ ಮತ, ಧರ್ಮ, ಕುಲದ ಮೇಲಿನಿಂದಲ್ಲ."[೧೦]

ಮನುಷ್ಯ ತಾನು ಮಾಡಬೇಕಾದ ಕಾರ್ಯಗಳನ್ನು ತಾನು ಜೀವಿಸಿರುವಾಗಲೇ ನೆರವೇರಿಸಬೇಕು. ಬಹುತೇಕರು 'ನಾನು' ಎಂಬುದರ ಬಗ್ಗೆ ಅತೀ ವ್ಯಾಮೋಹವನ್ನು ಹೊಂದಿರುತ್ತಾನೆ. ಅದನ್ನು ಮೊದಲು ತ್ಯಜಿಸಬೇಕು. ತನ್ನಲ್ಲಿರುವ ಅಂಧಕಾರವನ್ನು ಕಳೆದು ಆತ್ಮ ಜ್ಞಾನವನ್ನು ಪಡೆದಾಗ ತಾನಾರೆಂಬುದು ಅರ್ಥವಾಗುತ್ತದೆ. ಆಗ ಪರಮಾತ್ಮನ ಅನುಗ್ರಹಕ್ಕೆ ಒಳಗಾಗುತ್ತಾನೆ. ಈ ಆತ್ಮಜ್ಞಾನ ಪಡೆಯಲಿಚ್ಛಿಸುವವನು ತನ್ನಲ್ಲಿರುವ ಸಾವಿನ ಭಯವನ್ನು ತೊರೆಯಬೇಕು. ಆಗ ಅವನ ಅಂತರಾತ್ಮ ಚಂಚಲತೆಯನ್ನು ತೊರೆದು ಪರಿಶುದ್ಧವಾಗಿ ದೇವರ ಸಾಮಿಪ್ಯವನ್ನು ಪಡೆಯುತ್ತದೆನ್ನುವುದನ್ನು ದಾರ್ಶನಿಕರು ತಿಳಿಸುತ್ತಾರೆ. ರಮಣ ಮಹರ್ಷಿಗಳು ಈ ಅನುಭಾವದ ಕುರಿತು "ಆತ್ಮದಿಂದ ಬೇರೆಯಾಗಿ ದೇವರನ್ನು ಕಂಡೆ ಎಂದು ಹೇಳುವುದು ಮನಸ್ಸಿನ ಭ್ರಮೆ. ಯಾರು ಅಹಮಿಕೆಯನ್ನು ಮೊದಲು ಕಳೆದುಕೊಂಡು ತನ್ನ ಆತ್ಮವನ್ನು ಕಂಡುಕೊಳ್ಳುತ್ತಾನೋ ಅಂಥವನು ದೇವರನ್ನು ಕಂಡಿದ್ದಾನೆ ಎನ್ನಬಹುದು. ಯಾಕೆಂದರೆ ದೇವರು ಆತ್ಮವಲ್ಲದೆ ಬೇರೆ ಅಲ್ಲ. "ನಾನು ಎಂಬ ಮಮಕಾರವನ್ನು ತ್ಯಜಿಸಬೇಕು ಮತ್ತು ಸಾವಿನ ಬಗೆಗೆ ಭಯವನ್ನು ಹಚ್ಚಿಕೊಳ್ಳದೇ ಆತ್ಮಜ್ಞಾನ ಪಡೆಯಲು ಯತ್ನಿಸಬೇಕು"[೧೧] ಎಂದು ಹೇಳಿದ್ದಾರೆ.

ಪ್ರತಿ ಮನುಷ್ಯನು ದೇವರಲ್ಲಿ ಪ್ರಾರ್ಥಿಸುವುದು ಮತ್ತು ಮೊರೆಹೋಗುವುದು ಸ್ವಾರ್ಥಕ್ಕಾಗಿ ಆ ಸ್ವಾರ್ಥದ ಪ್ರಾರ್ಥನೆ ಅದರ ಈಡೇರಿಕೆಯ ಭಕ್ತಿ ಬೇಡ. ಅಂಥ ಭಕ್ತಿಯನ್ನು ಭಕ್ತಿಯೆನ್ನುವುದಿಲ್ಲ.

ಅನುಭಾವಿಗಳಿಗೆ ಆಸೆಗಳೇ ಇಲ್ಲ ಎಂದಾಗ ಇಂಥ ಪ್ರಾರ್ಥನೆ ಅವರ ಮನದಲ್ಲಿ ಕೂಡ ಇರಕೂಡದು. ಪರಮಾತ್ಮನನ್ನು ಪ್ರೀತಿಸುವ ವ್ಯಕ್ತಿಯ ಹೃದಯದಲ್ಲಿ ಪರಮಾತ್ಮನ ಬಗೆಗಿನ ಪ್ರೀತಿಯ ಆಳ ಎಷ್ಟು ನಿಸ್ವಾರ್ಥವಾಗಿರುತ್ತದೆಯೋ ಅಂಥವರ ಮನದಲ್ಲಿ ಕೋಪ, ದ್ವೇಷ, ಅಸೂಯೆ, ಆಸೆ, ಬಯಕೆಗಳು ಇರುವುದಿಲ್ಲ. ಅಲ್ಲಿ ಪರಮಾತ್ಮನ ಪ್ರೀತಿ ಸಿಗುತ್ತದೆಂಬುದು ಇಲ್ಲಿ ವೇದ್ಯವಾಗುತ್ತದೆ. ಅನುಭಾವವನ್ನು ಕುರಿತ ಸಂತ ರಮಣಿ ರಬಿಯಾ ಹೀಗೆ ಹೇಳಿದ್ದಾರೆ.. "ಸ್ವಾಮಿ ದೇವರೇ, ನಾನು ನರಕಕ್ಕೆ ಹೆದರಿ ನಿನ್ನನ್ನು ಪ್ರಾರ್ಥಿಸಿದರೆ ನನ್ನನ್ನು ನರಕದಲ್ಲಿ ದಹಿಸಿಬಿಡು, ಸ್ವರ್ಗಕ್ಕೆ ಆಶಿಸಿ ನಿನ್ನನ್ನು ಧ್ಯಾನ ಮಾಡಿದರೆ ಸ್ವರ್ಗದ ಸುಖವನ್ನು ನನ್ನಿಂದ ಕಿತ್ತುಕೊಂಡುಬಿಡು. ನಿನ್ನನ್ನು ಪ್ರೀತಿಸಲೆಂದೇ ಪ್ರೀತಿಸಿದ್ದೇನೆ". "ನನ್ನ ಹೃದಯದಲ್ಲಿ ಎಷ್ಟೊಂದು ಪ್ರೇಮ ತುಂಬಿದೆ ಎಂದರೆ ಅದರಲ್ಲಿ ಇತರರನ್ನು ದ್ವೇಷಿಸಲು ಎಡೆಯೇ ಇಲ್ಲ."[೨]

ಪ್ರಪಂಚದ ಸೃಷ್ಟಿಯನ್ನು ಪರಮಾತ್ಮನು ಸೃಷ್ಟಿಸಿದ ಮೇಲೆ ಇಲ್ಲಿರುವುದೆಲ್ಲವೂ ಶ್ರೇಷ್ಠವಾದುದು. ಯಾವುದನ್ನು ತೆಗೆದುಹಾಕುವ ಹಾಗಿಲ್ಲ. ಹಾಗೇನಾದರೂ ಮಾಡಿದರೆ ಅದನ್ನು ಅಹಂಕಾರವೆನ್ನುವರು. ಈ ಅಹಂ ಪರಮಾತ್ಮನಿಗೆ ಸಲ್ಲದು. ಅಹಂನಿಂದ ಏನನ್ನು ಪಡೆದುಕೊಳ್ಳಲಾಗದು. ಅದರ ತ್ಯಾಗದಿಂದ ಪರಿಶುದ್ಧತೆಯ ಮನಸ್ಸನ್ನು ಪಡೆಯಲು ಸಾಧ್ಯ. ಮನುಜ ತನ್ನಲ್ಲಿರುವ ನಾನು ಎಂಬುದನ್ನು ಮುಚ್ಚಿಟ್ಟುಕೊಂಡು ಇನ್ನೊಬ್ಬರ ಅಹಂಕಾರದ ಬಗ್ಗೆ ಮಾತನಾಡುವುದು ವ್ಯರ್ಥ. ಇದರಿಂದ ಯಾವ ಫಲವಿಲ್ಲ. ತನ್ನಲ್ಲಿರುವ ಅಹಂಕಾರವನ್ನು ಸ್ವತಃ ತಾನೆ ಸರಿಪಡಿಸಿ ಅದನ್ನು ತೊರೆದು ಆಚೆ ಬಂದಾಗ ಆತ್ಮ ಪರಿಶುದ್ಧವಾಗಿ ಪರಮಾತ್ಮನ ಅನುಗ್ರಹ ಪಡೆಯಲು ಸಮರ್ಥವಾಗುವುದು. ಹಬೀಬ್ ಅಜಮಿಯವರು ಅನುಭಾವವನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ. "ಪ್ರೇಮಯೋಗಿಗಳಾದ ಸೂಫಿಗಳಿಗೆ ಯಾವುದೂ ತ್ಯಾಜ್ಯವಲ್ಲ, ಎಲ್ಲವೂ ಪೂಜ್ಯ; ಅವರ ವ್ಯಾಪಾರ ತ್ಯಾಗದಿಂದ ಹೆಚ್ಚುತ್ತದೆ. ಸಂಗ್ರಹದಿಂದ ಕುಗ್ಗುತ್ತದೆ. ನಾನು ನನ್ನ ಆತ್ಮ ಪರಿಶುದ್ಧಿ ಮಾಡಿಕೊಳ್ಳುವುದರಲ್ಲಿ ತೊಡಗಿದ್ದೇನೆ. ಇತರರು ಉಪನ್ಯಾಸ ಕೊಡುವುದರಲ್ಲಿ, ಕಾಗದ ಖರೀದಿ ಮಾಡುವುದರಲ್ಲಿ ತೊಡಗಿದ್ದಾರೆ.[೩]

ದೇವರನ್ನು ಪ್ರೀತಿಸುವವನ ಮನಸ್ಸು ಶುದ್ಧವಾಗಿರಬೇಕು. ಅಂತರಾತ್ಮ ದೇವರ ನೆನೆಯುತ್ತಿರಬೇಕು. ಆಗ ಮಾತ್ರ ಆ ವ್ಯಕ್ತಿ ದೇವರನ್ನು ತನ್ನ ಮನದ ತುಂಬ ಒಪ್ಪಿಕೊಂಡು ಅವನನ್ನು ಪ್ರೀತಿಸುತ್ತಿದ್ದಾನೆಂದು ಅರ್ಥವಾಗುತ್ತದೆ. ದೇವರನ್ನು ಪ್ರೀತಿಸುವ ಪ್ರತಿ ವ್ಯಕ್ತಿಯೂ ಯಾವುದಕ್ಕೂ ಅಂಜುವುದಿಲ್ಲ. ಸದಾ ಅವನ ತನು, ಮನ, ಧ್ಯಾನ ಪೂಜೆ, ಪ್ರಾರ್ಥನೆಯಲ್ಲಿಯೇ ಲೀನವಾಗಿರುತ್ತದೆ. ಇಂಥವನನ್ನು ಯಾರು ದ್ವೇಷಿಸುವುದಿಲ್ಲ. ಬದಲಿಗೆ ಪೂಜಿಸುತ್ತಾರೆ. ಅವನಿಂದ ಅವರ ಮನ ಪರಿವರ್ತನೆಗೊಂಡು ಅವರಿಗೂ ಪರಮಾತ್ಮನ ಅನುಗ್ರಹ ಪಡೆಯುವ ವಿಧಾನವನ್ನು ಅನುಸರಿಸುವ ಮನಸ್ಸುಳ್ಳವರಾಗುತ್ತಾರೆ. ತಮ್ಮ ಮನದಲ್ಲಿರುವ ನಡತೆಯನ್ನು ಪರಿವರ್ತಿಸಿಕೊಳ್ಳುವ ಪ್ರಯತ್ನವನ್ನು ಮಾಡಿಕೊಂಡು ಭಗವಂತನ ಅನುಗ್ರಹಕ್ಕೆ ಪಾತ್ರರಾಗುತ್ತಾರೆ. ಮುಸಯಲ್ ಅವರು

ಅನುಭಾವವನ್ನು ಈ ರೀತಿ ವ್ಯಾಖ್ಯಾನಿಸಿದ್ದಾರೆ.. "ನಾನು ದೇವರನ್ನು ಪ್ರಿತಿಸುತ್ತೇನೆ. ಆದ್ದರಿಂದ ಅವನನ್ನು ಪೂಜಿಸುತ್ತೇನೆ. ದೇವರಿಗೆ ಅಂಜುವವನಿಗೆ ಎಲ್ಲರೂ ಅಂಜುತ್ತಾರೆ.[೧೪]

ಮನುಷ್ಯನ ಮನಸ್ಸು ಅತ್ಯಂತ ಸೂಕ್ಷ್ಮವಾಗಿರುತ್ತದೆ. ಮನಸ್ಸು ಹೇಳಿದ್ದನ್ನು ತುಂಬಿಕೊಳ್ಳುತ್ತದೆ. ಅಂಥ ಮನಸ್ಸಿನಲ್ಲಿ ಅಹಂಕಾರವನ್ನು ತುಂಬಿಕೊಂಡರೆ ಅದು ಮನುಷ್ಯನ ನಡತೆಯನ್ನೇ ಬದಲಿಸುತ್ತದೆ. ಅನೇಕ ಬಯಕೆ - ಆಮಿಷಗಳಿಗೆ ಒಳಗಾಗುತ್ತದೆ. ಇದರಿಂದ ಆಚೆ ಬರಲು ಕಷ್ಟಸಾಧ್ಯ. ಇಂಥ ಮನಸ್ಸುಳ್ಳ ವ್ಯಕ್ತಿ ತನ್ನ ಮನಸ್ಸಿನಿಂದ ದೇವರನ್ನು ಕಾಣಲು ಸಾಧ್ಯವಿಲ್ಲ. ಯಾವ ಮನಸ್ಸು ಹಗುರವಾಗಿರುತ್ತದೆಯೋ, ಪರಿಶುದ್ಧವಾಗಿರುತ್ತದೆಯೋ ಅಲ್ಲಿ ದೇವರು ಇರುತ್ತಾನೆ. ನಾನು ಇರುವ ಕಡೆ ನೀನು ಎಂಬುದು ಇರಲು ಸಾಧ್ಯವಿಲ್ಲ. ಈ ಅಹಂಕಾರವನ್ನು ತೊಲಗಿಸಲು ಮನುಷ್ಯನು ತನ್ನ ಮನದ ತುಂಬ ಪ್ರೀತಿಯನ್ನು ತುಂಬಿಕೊಳ್ಳಬೇಕು. ಆಗ ಮಾತ್ರ ಈ ಅಹಂ ಮನುಷ್ಯನ ಮನಸ್ಸಿನಿಂದ ದೂರವಾಗುತ್ತದೆ. ಅಲ್ಲಿ ಪರಮಾತ್ಮನ ಅನುಗ್ರಹ ಪ್ರವೇಶ ಮಾಡುತ್ತದೆ. ಪರಮಾತ್ಮನ ಸ್ವರೂಪವನ್ನು ತಿಳಿಯಲು ಪ್ರೇಮವೇ ಮುಖ್ಯ ಕಾರಣ. ಹಾಗಾಗಿ ಪ್ರಪಂಚದಲ್ಲಿರುವ ಪ್ರೇಮವನ್ನು ಸ್ವೀಕರಿಸಬೇಕು. "ಅಹಂನಿಂದ ರಕ್ಷಿಸುವ ಏಕಮಾತ್ರ ವಸ್ತುವೆಂದರೆ ಪ್ರೇಮ; ಪ್ರಾಪಂಚಿಕ ಪ್ರೇಮದಿಂದಲೂ ನೀನು ಮುಖ ತಿರುವುಬೇಡ; ಏಕೆಂದರೆ ಪರಮ ಸತ್ಯವನ್ನು ಮುಟ್ಟಲು ಅದು ನಿನಗೆ ನೆರವಾದೀತು"[೧೫] ಎಂದು ಜಾಮಿಯವರು ವ್ಯಾಖ್ಯಾನಿಸುತ್ತಾರೆ.

ದೇವರನ್ನು ದೇವರ ಮೂಲಕ ಕಾಣಲು ಸಾಧ್ಯ. ಆದರೆ ಮನುಜ ದೇವರಾಗಲು ಸಾಧ್ಯವಿಲ್ಲ. ಹಾಗಾದರೆ ದೇವರನ್ನು ಹೇಗೆ ಕಾಣುವುದೆಂಬ ಯೋಚನೆ ಮನದಲ್ಲಿ ಮೂಡುವುದು ಸಹಜ. ಮನುಜ ದೇವನಾಗಲಾರ; ಆದರೆ ದೈವಾಂಶ ಗುಣವುಳ್ಳವನಾಗಬಹುದು. ಮನುಜನಲ್ಲಿರುವ ದ್ವೇಷ, ಅಸೂಯೆ; ಕೋಪ, ಅಹಂಕಾರ, ನಾನು ಎಂಬ ಅಹಂಗಳನ್ನು ತೊರೆದು, ಚಂಚಲ ಮನಸ್ಸನ್ನು ಸ್ಥಿರವಾಗಿಸಿ, ಅಂತರಾತ್ಮವನ್ನು ಪರಿಶುದ್ಧಗೊಳಿಸಿ ಜೀವನದ ಪ್ರತಿ ಕ್ಷಣವನ್ನು ಪ್ರೀತಿಯಲ್ಲಿ ನಡೆಸಬೇಕು. ಆಗ ಅವನು ತನ್ನನ್ನು ತಾನು ಅರಿಯಲು ಸಾಧ್ಯ. ದೇಹದೊಳಗಿರುವ ಆತ್ಮವು ಜ್ಯೋತಿಯ ರೂಪದಲ್ಲಿದೆ. ಪರಮಾತ್ಮನು, ಜ್ಯೋತಿ ಸ್ವರೂಪಿಯೆಂಬುದನ್ನು ಅರಿತುಕೊಳ್ಳುತ್ತಾನೆ. ನೂರಿಯವರು ಅನುಭಾವದ ಬಗ್ಗೆ "ದೇವರನ್ನು ದೇವರ ಮೂಲಕ ಮಾತ್ರ ತಿಳಿಯಬಹುದು. ನಾನು ಅವನ ಜ್ಯೋತಿಯನ್ನೇ ನೋಡಿ ಮಗ್ನನಾಗಿ ನಾನು ಜ್ಯೋತಿಯಾದೆ"[೧೬] ಎಂದು ಅಭಿಪ್ರಾಯಪಟ್ಟಿದ್ದಾರೆ.

ಮನುಷ್ಯ ಹುಟ್ಟಿ ಪ್ರಪಂಚದಲ್ಲಿ ಬಾಳಿ ಬದುಕುವವರೆಗೆ ಸುಖದ ಜೀವನವನ್ನು ಬಯಸಿ ತನ್ನ ನಡೆ ನುಡಿಯನ್ನು ಕೂಡ ಮರೆತುಬಿಡುತ್ತಾನೆ. 'ನಾನು' ಎಂಬ ಅಹಂ ಇರುತ್ತದೆ. ದೇವರನ್ನು ಕೂಡ ಮರೆಯುತ್ತಾನೆ. ಅದಕ್ಕೆಲ್ಲ ಅವನ ಸುಖ ಜೀವನವೇ ಇದಕ್ಕೆ ಕಾರಣ. ಪರಮಾತ್ಮನ ಅನುಗ್ರಹವಿಲ್ಲದ ಜೀವನ ವ್ಯರ್ಥವೆನ್ನುವುದನ್ನು ಅರಿಯುವುದಿಲ್ಲ. ಎಷ್ಟೇ

ಸುಖಭೋಗವಿದ್ದರೂ ಒಂದು ದಿನ ಅದನ್ನು ತೊರೆದುಹೋಗುವ ದೇಹಕ್ಕೆ ಎಷ್ಟು ಸುಖವಿದ್ದರೇನು ಫಲ. ಈ ಸುಖದ ಸಂಸಾರದಲ್ಲೂ ನೋವುಗಳನ್ನು ಸಮಸ್ಯೆಗಳನ್ನು ಎದುರಿಸುತ್ತಾನೆ. ಇದರಿಂದ ಮುಕ್ತಿ ಪಡೆಯಲು ಮನಸ್ಸು ಹಂಬಲಿಸುತ್ತದೆ. ಈ ಹಂಬಲಕ್ಕೆ ಅನುಗ್ರಹ ಸಿಗುವುದು ಪರಮಾತ್ಮನಿಂದ. ಅವನು ಅನುಗ್ರಹಿಸಬೇಕೆಂದರೆ ಮನುಷ್ಯ ತನ್ನ ಮನಸ್ಸನ್ನು ವೈಭವ ಜೀವನಕ್ಕೆ, ಅಹಂಕಾರಕ್ಕೆ ಒಳಪಡಿಸುವುದನ್ನು ತೊರೆಯಬೇಕು. ಅಂತರಾತ್ಮವನ್ನು ಪರಿಶುದ್ಧೀಕರಿಸಿಕೊಂಡಾಗ ಪರಮಾತ್ಮನು ಅನುಗ್ರಹಿಸುವನು. ಇದನ್ನೇ ತುಳಸಿದಾಸರ "ಜೀವನದಲ್ಲಿ ಐಹಿಕ ಸುಖ-ಭೋಗಗಳಲ್ಲಿ ಏನೂ ಸಾರವಿಲ್ಲ, ಈ ಸಂಸಾರ, ಕೌಟುಂಬಿಕ ಬಂಧನಗಳಿಂದ ಮುಕ್ತಿಯನ್ನು ಪಡೆಯಬೇಕು"[೧೭] ಎಂದು ಸಾರಿದ್ದಾರೆ.

ದೇವರು ಸೃಷ್ಟಿಸಿರುವ ಜಗತ್ತಿನಲ್ಲಿ ಮನುಜನಾದವನು 'ನಾನು', 'ನನ್ನದೆಂದು' ಹೊಡೆದಾಡುತ್ತಿರುತ್ತಾನೆ. ಮನುಷ್ಯ ಮಾಡಬಾರದ ಕೆಲಸಗಳನ್ನೆಲ್ಲ ಮಾಡಲು ತನ್ನ ನಡತೆಯನ್ನು ನುಡಿಯನ್ನು ಕೋಪದ, ದ್ವೇಷದ, ಅಸೂಯೆ, ಅಹಂಕಾರಗಳಿಗೆ ಒಪ್ಪಿಸಿರುತ್ತಾನೆ. ಇದರಿಂದ ಅವನು ಸೃಷ್ಟಿಯ ಬಗೆಗಿನ ಚಿಂತನೆಯಿಂದ ದೂರವಿರುತ್ತಾನೆ. ಎಲ್ಲವನ್ನು ಮಾಡಿ ನಂತರ ಕಷ್ಟ-ನೋವುಗಳು ಬಂದಾಗ ದೇವರಲ್ಲಿ ಮೊರೆಹೋಗುತ್ತಾನೆ. ಈ ಎಲ್ಲ ನಡೆ ನುಡಿಗಳಿರುವ ಮನುಷ್ಯನ ಮನಸ್ಸು ಶಾಂತವಾಗಿ ಶುದ್ಧವಾಗಿರಲು ಹೇಗೆ ಸಾಧ್ಯ? ಅದೆಲ್ಲವನ್ನು ತೊರೆದಾಗ ಸಾಧ್ಯವಾಗುತ್ತದೆ. ಪರಮಾತ್ಮನಲ್ಲಿ ಪ್ರಾರ್ಥಿಸುವ ಮನುಜ ಮತ್ತೆ ಸ್ವಾರ್ಥದ ಬೇಡಿಕೆಯನ್ನು ಕೇಳುತ್ತಾನೆ. ಕಷ್ಟ ಬೇಡ ಸುಖ ಕೊಡು, ಪರಮಾತ್ಮನು ಸರ್ವಂತರ್ಯಾಮಿ ಅವನೇ ಸೃಷ್ಟಿಸಿದ ಈ ಪ್ರಪಂಚದಲ್ಲಿರುವ ಪ್ರತಿಯೊಂದನ್ನು ರಕ್ಷಿಸುವ ಹೊಣೆ ಅವನಿಗಿರುತ್ತದೆ. ಈ ವಿಚಾರವಾಗಿ ಕನಕದಾಸರು "ದೇವರು ಈ ಎಲ್ಲ ಸೃಷ್ಟಿಯನ್ನು ಮಾಡಿದವನು ತಾನು ಸೃಷ್ಟಿಸಿದ ಈ ಜಗತ್ತನ್ನು ಈ ಜಗತ್ತಿನಲ್ಲಿಯ ಚರಾಚರ ಜೀವ ನಿರ್ಜೀವಗಳನ್ನು ರಕ್ಷಿಸುವ ಜವಾಬ್ದಾರಿಯನ್ನು ಅವನೇ ನಿರ್ವಹಿಸುತ್ತಾನೆ"[೧೮] ಎಂದು ಅನುಭವದ, ಸಾಕ್ಷಾತ್ಕಾರದ ನುಡಿಗಳನ್ನು ನುಡಿದಿದ್ದಾರೆ.

ಮನುಜ ತನ್ನಲ್ಲಿರುವ ಬೇಡವಾದ ಗುಣಗಳನ್ನು ಕಳೆದುಕೊಳ್ಳಲು ಕಷ್ಟಪಡುತ್ತಾನೆ. ಕಾರಣ ಅವನು ತನಗೆ ವೈಭವ ಸುಖದ ಜೀವನವೇ ಇರಲಿ ಎಂದು ಆಶಿಸುತ್ತಾನೆ. ಅದರಲ್ಲಿಯೇ ಅವನಿಗೆ ಅಹಂಕಾರಗಳ ಬುತ್ತಿಯು ತುಂಬಿರುತ್ತದೆ. ಇಂಥವುಗಳು ಇರುವಾಗ ಪರಮಾತ್ಮನ ಪ್ರಾರ್ಥನೆಯನ್ನು ಮಾಡಲು ಹೇಗೆ ಸಾಧ್ಯ? ಮನಸ್ಸು ಶುಚಿಗೊಳಿಸಿಕೊಳ್ಳುವುದಾದರೂ ಹೇಗೆ ಎಂಬುದನ್ನು ಚಿಂತಿಸುತ್ತಿರುತ್ತಾನೆ. ಆ ಚಂಚಲತೆಯ ಮನಸ್ಸನ್ನು ಹತೋಟಿಗೆ ತರಲು ಕೆಲವು ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಪ್ರತಿಕ್ಷಣ ಪರಮಾತ್ಮನ ಪ್ರಾರ್ಥನೆ ಮಾಡುತ್ತಿದ್ದರೆ ಪ್ರೀತಿಯ ಮಾತುಗಳನ್ನು ಆಡುತ್ತಿದ್ದರೆ ದೇವರ ನಾಮಗಳು ಹೇಳುತ್ತಿದ್ದರೆ, ಕೇಳುತ್ತಿದ್ದರೆ ಮನಸ್ಸನ್ನು ಪರಿಶುದ್ಧೀಕರಿಸಿಕೊಳ್ಳಬಹುದು. ವ್ಯಾಸರಾಯರು "ಶ್ರವಣ, ಸ್ಮರಣೆ, ಕೀರ್ತನ, ದಾಸ್ಯ, ಪಾದಸೇವನೆ, ಅರ್ಚನೆ, ಸಖ್ಯ, ವಂದನೆ, ಆತ್ಮ ನಿವೇದನೆಗಳೆಂಬ ಒಂಭತ್ತು ಬಗೆಯ ಭಕ್ತಿ ಕೈಂಕರ್ಯಗಳ

ಕಡೆಗೆ ಮನಸ್ಸು ಒಲಿದರೆ, ವಾಲಿದರೆ ಅರಿಷಡ್ವರ್ಗಗಳು ಹೇಳಹೆಸರಿಲ್ಲದೆ ಮಾಯವಾಗುತ್ತದೆ”[೧೯] ಎಂದು ತಿಳಿಸಿದ್ದಾರೆ.

ಜನಸಾಮಾನ್ಯರು ಆಡಂಬರದ ಜೀವನಕ್ಕೆ ಹವಣಿಸುತ್ತಿರುತ್ತಾರೆ. ಪ್ರತಿ ಕ್ಷಣವನ್ನು ತಮ್ಮ ಬುದ್ಧಿ, ಮನಸ್ಸನ್ನು ಅದಕ್ಕೆ ಅನುಸರಿಸಿಕೊಂಡಿರುತ್ತಾರೆ. ದೇಹವೆಂಬ ದೇಗುಲದಲ್ಲಿನ ಆತ್ಮದ ದೃಷ್ಟಿಯಲ್ಲಿ ಪ್ರಪಂಚವನ್ನು ನೋಡದೆ ತಮ್ಮ ದೇಹಕ್ಕೆ ಬಾಹ್ಯನೋಟಕ್ಕೆ ಹೆಚ್ಚಿನ ಆದ್ಯತೆಯನ್ನು ಕೊಡುತ್ತಾರೆ. ದೇಹವನ್ನು ಆಭರಣಗಳಿಂದ ಅಲಂಕರಿಸುತ್ತ, ಕ್ಷಣದ ಸುಖದತ್ತ ತಮ್ಮ ಮನಸ್ಸನ್ನು ವಾಲಿಸುತ್ತಾರೆ. ಇದರಿಂದ ಆತ್ಮದ ಜ್ಞಾನವೇನೆಂಬುದರ ಬಗೆಗಿನ ಅರಿವೇ ಇರುವುದಿಲ್ಲ. ಆತ್ಮಜ್ಞಾನವನ್ನು ಪಡೆಯಲು ಪರಮಾತ್ಮನ ಅನುಗ್ರಹ ಬೇಕು. ಅದನ್ನು ಪಡೆಯಲು ದೇಹದೊಳಗಿನ ಅಂತರಾತ್ಮ ಪರಿಶುದ್ಧತೆಯಾಗಬೇಕು. ಇವುಗಳ ಅರಿವಿಲ್ಲದೆ ಮನುಷ್ಯ ಆಡಂಬರದ, ವೈಭವದ, ಅಹಂಕಾರದ ಜೀವನದ ಪಯಣದಲ್ಲಿ ಮುನ್ನಡೆಯುತ್ತಿದ್ದಾನೆ. ಮನುಜನಿಗೆ ಆತ್ಮಜ್ಞಾನ ಪಡೆಯುವುದು ಮುಖ್ಯ. ಹಾಗಾಗಿ ದೇಹವನ್ನು ಆತ್ಮಜ್ಞಾನದ ಬೆಳಕಿನಿಂದ ಅಲಂಕರಿಸಿಕೊಳ್ಳಬೇಕೆನ್ನುವುದು ಇಲ್ಲಿ ಕಾಣಸಿಗುತ್ತದೆ. ಸಮರ್ಥ ರಾಮದಾಸರು “ದೇಹವನ್ನು ಆಭರಣಗಳಿಂದ ಅಲಂಕರಿಸುವುದರ ಬದಲು ಜ್ಞಾನದ ಬಟ್ಟೆಯಿಂದ ಅಲಂಕರಿಸು”[೨೦] ಎಂದು ವಿವರಿಸುತ್ತಾರೆ.

### ೨.೩. ಅನುಭಾವದ ವಿಶ್ಲೇಷಣೆ

ಅನುಭಾವವೆಂಬುದು ಆಧ್ಯಾತ್ಮದೊಳಗಿನ ಒಂದು ಅದ್ಭುತ ಶಕ್ತಿ. ಈ ಆಧ್ಯಾತ್ಮದ ನಂಟು ಪ್ರತಿಯೊಬ್ಬ ವ್ಯಕ್ತಿಗೆ ಬರುವಂಥದ್ದಲ್ಲ, ಕೆಲವರಿಗೆ ಮಾತ್ರ ಸಾಧ್ಯ. ಈ ಆಧ್ಯಾತ್ಮದಲ್ಲಿ ಒಂದು ಮಾಯೆಯಿದೆ, ಮಹಾಶಕ್ತಿಯಿದೆ. ಈ ಮಾಯಾಶಕ್ತಿಗಾಗಿ ದೇಹವನ್ನು ದಂಡಿಸಬೇಕು. ದೇಹ ದಂಡಿಸುವುದು ಸುಲಭವಾದ ಮಾತಲ್ಲ, ಯೋಗ್ಯನಾದ ವ್ಯಕ್ತಿಗೆ ಮಾತ್ರ ಇದು ಮೀಸಲಾಗಿದೆ. ಅನುಭವದಿಂದ ಅನುಭಾವದೆಡೆಗೆ ಬರುವ ವ್ಯಕ್ತಿ ಇದಕ್ಕೆ ಬದ್ಧನಾಗಿರುತ್ತಾನೆ ಎನ್ನುವುದರಲ್ಲಿ ಸಂಶಯವಿಲ್ಲ.

ಸಂತರು, ಸಿದ್ಧರು, ಶರಣರು, ಅವಧೂತರು, ಆರೂಢರು, ನಾಥರು ಇವರು ಲೋಕಹಿತವನ್ನು ಸಾಧಿಸುವುದಕ್ಕೆ ಹೊರಟವರು. ಲೋಕದ ಯಾವ ಆಸೆ ಇಲ್ಲದಿರುವ  ಇವರು ಸಂಗದಲ್ಲಿದ್ದು ನಿಸ್ಸಂಗಿಯಾದವರು ಎಂಬುದು ತಮ್ಮ ಆಚಾರ ವಿಚಾರಗಳಿಂದಲೇ ತಿಳಿಸಿದವರು. ಲೌಕಿಕದಲ್ಲಿ ಪಡೆಯಲಾಗದ್ದನ್ನು ಅಲೌಕಿಕದಲ್ಲಿ ಪಡೆಯಬಹುದಾಗಿದೆ. ಈ ಅಲೌಕಿಕವೇ ಅನುಭಾವ, ಅನುಭಾವವೆಂಬ ಮಾರ್ಗವನ್ನು ಸ್ಪರ್ಶಿಸಲು ಸಾಧಕನಿಂದ ಮಾತ್ರ ಸಾಧ್ಯ. ಸಾಮಾನ್ಯನಿಂದ ಸಾಧ್ಯವಿಲ್ಲ. ಈ ಸಾಧಕನನ್ನೇ ಅನುಭಾವಿ ಎನ್ನಲಾಗುತ್ತದೆ.

ಲೌಕಿಕ ಜೀವನದಲ್ಲಿನ ಹಲವು ಸಮಸ್ಯೆಗಳನ್ನು ಎದುರಿಸಿದ ಅನುಭವ ಹೊಂದಿದ ವ್ಯಕ್ತಿ ಅನುಭಾವಿಯಾಗಲು ಅವನಲ್ಲಿ ಮೂಡಿರುವ ವಿರಕ್ತಿಯೇ ಕಾರಣವಾಗುತ್ತದೆ. ಸರ್ವಸಂಗವನ್ನು ತ್ಯಾಗ ಮಾಡಿ ಅನುಭಾವ ಮಾರ್ಗವನ್ನು ಹಿಡಿಯುತ್ತಾನೆ. ವಿರಕ್ತಿ ಹೊಂದಿದ ವ್ಯಕ್ತಿ ಆಧ್ಯಾತ್ಮ

ಮಾರ್ಗಕ್ಕೆ ಮೊರೆಹೋಗುತ್ತಾನೆ. ಲೌಕಿಕದಲ್ಲಿ ಪ್ರತಿಕ್ಷಣವೂ ಹಂಗಿನ ಅರಮನೆಯಲ್ಲಿಯೇ ಜೀವನ. ಆದರೆ ಅಲೌಕಿಕದಲ್ಲಿ ಯಾವುದೇ ಋಣದ ಮಾತಿಲ್ಲ. ಹಂಗಿಲ್ಲದ ಅರಮನೆಯ ಜೀವನವು ಸಿಗುವುದು ಅನುಭಾವಿಗಳಿಗೆ ಮಾತ್ರ; ಅದು ಆಧ್ಯಾತ್ಮದ ಮೂಲಕ. ಆಧ್ಯಾತ್ಮವು ವ್ಯಕ್ತಿಗೆ ಶಿಸ್ತನ್ನು ಕಲಿಸಿಕೊಡುತ್ತದೆ. ಸಾಧನೆಯ ಮಾರ್ಗವನ್ನು ತೋರಿಸುತ್ತದೆ. ಇಷ್ಟದೈವವನ್ನು ತಲುಪುವ ಮಟ್ಟವನ್ನು ತಿಳಿಸುತ್ತದೆ. ಆಧ್ಯಾತ್ಮವು ವ್ಯಕ್ತಿಯೊಂದಿಗೆ ಬೆರೆತಾಗ ಅದರೊಂದಿಗೆ ಲೀನವಾಗಿ ಅನುಭಾವಿ ಎನಿಸಿಕೊಳ್ಳುತ್ತಾನೆ.

ಸಾಂಸಾರಿಕ ಜೀವನದಲ್ಲಿ ಆಸೆಗಳು ಹುಟ್ಟುತ್ತವೆ. ದೇಹಕ್ಕೆ ಹಸಿವಿನ ಬೇಡಿಕೆ ಆದಂತೆ ಬಯಕೆಗಳು ಬೆಳೆಯಲು ಪ್ರಾರಂಭಿಸುತ್ತವೆ. ಆಸೆ, ಬಯಕೆಗಳು ವೃದ್ಧಿಯಾದಂತೆ ದುಃಖದ ತೀವ್ರತೆ ಹೆಚ್ಚಾಗುತ್ತದೆ. ಇದರಿಂದ ಮನುಷ್ಯ ಜೀವನದಲ್ಲಿ ಜಿಗುಪ್ಸೆಗೊಂಡು ವಿರಕ್ತಿ ಹೊಂದಿ ತನ್ನ ಕತ್ತಲಾದ ಬದುಕಿನಿಂದ ಬೆಳಕಿನೆಡೆಗೆ ಬರಲು ಆಧ್ಯಾತ್ಮದ ಮಾರ್ಗವನ್ನು ಹಿಡಿಯುತ್ತಾನೆ. ಈ ಆಧ್ಯಾತ್ಮವು ಬೆಳಕಿನ ಹಾದಿಯಲ್ಲಿ ಕೈ ಹಿಡಿದು ಮುನ್ನಡೆಸುತ್ತದೆ. ಭಾರವಾದ ಮನಸ್ಸನ್ನು ಹಗುರಗೊಳಿಸಿ ಹೊಸ ಚೈತನ್ಯವನ್ನು ತುಂಬುತ್ತದೆ. ಹಸಿವಿನಿಂದ ಬಳಲಿ ನಿಶ್ಶಕ್ತಿಯನ್ನು ಹೊಂದಿದ ದೇಹಕ್ಕೆ ಯೋಗ ಶಕ್ತಿಯನ್ನು ನೀಡುತ್ತದೆ. ಬಳಲಿದ ದೇಹಕ್ಕೆ ಉತ್ಸಾಹವನ್ನು ಕೊಡುತ್ತದೆ. ಆಹಾರವಿಲ್ಲದೆ ಕುಸಿದು ರೋಗರುಜಿನಗಳಿಗೆ ಗೂಡು ಮಾಡಿಕೊಟ್ಟ ಈ ದೇಹಕ್ಕೆ, ಯೋಗವು ಆರೋಗ್ಯ ಆಯುಷ್ಯನ್ನು ದಯಪಾಲಿಸುತ್ತದೆ. ಆಸೆ, ದುಃಖ, ಬಯಕೆಗಳಿಗೆ ಅಂತ್ಯ ಹಾಡುವುದೇ ಅನುಭಾವ. ಅನುಭಾವವು ಮನುಷ್ಯನನ್ನು ಲೌಕಿಕ ಬಯಕೆಗಳಿಂದ ಮುಕ್ತಿಯನ್ನು ನೀಡುತ್ತದೆ. ಇದಕ್ಕೆ ಹೃದಯ ಸಹಜವಾಗಿ ಮಿಡಿಯುತ್ತದೆ. ಅನುಭಾವವು ತಾನೊಂದೆ ಸುಖವಾಗಿದ್ದರೆ ಸಾಕೆಂದು ಎಂದೂ ಭಾವಿಸದು; ಸಮಾಜದ ಹಿತವನ್ನು ಬಯಸುತ್ತದೆ. ತಾನು ತನ್ನದು ತನ್ನಿಂದಲೇ ಎಂಬ ಅಹಂ ಬಿಡುತ್ತದೆ. ರಾಜ ಮಹಾರಾಜರಾದ ಗೌತಮಬುದ್ಧ ಮತ್ತು ವರ್ಧಮಾನ ಮಹಾವೀರ ಇವರು ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದರೂ ತಾವು ಇದ್ದ ಸುಖವನ್ನು ಸಮಾಜದ ಒಳಿತಿಗಾಗಿ ತ್ಯಾಗ ಮಾಡಿದರು. ರಾಜವೈಭೋಗವಿದ್ದರೂ ಸಾಂಸಾರಿಕತೆಯಲ್ಲಿ ವಿರಕ್ತಿ ಮೂಡಿ ಆಧ್ಯಾತ್ಮದ ಮಾರ್ಗವನ್ನು ಹಿಡಿದು ನಿರಂತರ ಸಾಧನೆಯಿಂದ ಮುಕ್ತಿಯನ್ನು ಹೊಂದಿದವರು. ಯೋಗ , ಅನುಭಾವ, ಆಧ್ಯಾತ್ಮ ವಿರಕ್ತಿಗೊಂಡ ಪ್ರತಿ ವ್ಯಕ್ತಿಯ ಮನಸ್ಸು ಹೃದಯಗಳನ್ನು ಹಗುರಗೊಳಿಸಿ ಸಾಧನೆಯ ಶಿಖರವನ್ನು ತಲುಪಿಸಿ ಅವರ ಆಯುಷ್ಯ ವೃದ್ಧಿಗೆ ಹೊಸ ದಾರಿಯನ್ನು ತೋರಿಸುತ್ತ ನೆಮ್ಮದಿಯ ಸುಖ ಜೀವನ ನೀಡುತ್ತದೆ.

“ಕ್ರಿಸ್ತ ಬಹುದೊಡ್ಡ ಅನುಭಾವಿ. ರೋಮ್ ನಗರದ ಹೊರಾಂಗಣದ ಕಗ್ಗವಿಗಳಲ್ಲಿ ನೋವು ತಿನ್ನುತ್ತಿದ್ದ ಕುಷ್ಠರೋಗಿಗಳ ಮೈದಡವಿ ಸೇವೆ ಮಾಡಿದ ಅವನ ಜೀವಕಾರುಣ್ಯ; ತನ್ನ ಕೈ ಕಾಲುಗಳಿಗೆ ಮೊಳೆ ಬಡಿದು ಶಿಲಬೆಗೇರಿಸಿದವರನ್ನು ಕ್ಷಮಿಸುತ್ತ ತಾವೇನು ಮಾಡುತ್ತಿರುವರೆಂದು ಅವರಿಗೆ ಅರಿವಿಲ್ಲ ತಂದೆ ಎಂದು ಮೊರೆಯಿಟ್ಟ ಅವನ ಸಹನೆ ನಿನ್ನನ್ನು ಪ್ರೀತಿಸಿಕೊಳ್ಳುವಷ್ಟೆ

ನಿನ್ನ ಪಕ್ಕದವನನ್ನೂ ಪ್ರೀತಿಸು ಎಂದು ನುಡಿದು ನಡೆದು ತೋರಿಸಿದ ಅವನ ಮಾನವೀಯ ಘನತೆ ಇವೆಲ್ಲ ಅನುಭಾವದ ಲಕ್ಷಣಗಳೆ."೨೧

ಅನುಭಾವಿಗಳಲ್ಲಿ ಸಹನೆ ಹೆಚ್ಚಾಗಿರುತ್ತದೆ. ತನಗೆ ಯಾರಾದರೂ ಕೇಡು ಮಾಡಿದರೆ ಅದನ್ನು ಲೆಕ್ಕಿಸದೆ ಅದು ಅವರು ತಿಳಿಯದೆ ಮಾಡಿರುವ ತಪ್ಪು ಎಂದು ಕ್ಷಮಿಸುತ್ತಾ ಸುತ್ತಮುತ್ತಲಿನವರಿಗೆ ಒಳಿತನ್ನುಂಟುಮಾಡಬೇಕೆನ್ನುವುದೇ ಅವರ ಆಶಯವಾಗಿರುತ್ತದೆ. ಅನುಭಾವಿಯಾದ ಕ್ರಿಸ್ತನಾದ ಯೇಸು ಯಾವಾಗಲೂ ಒಂದು ಮಾತನ್ನು ಹೇಳುವ ಹಾಗೆ ನಮ್ಮನ್ನು ನಾವೆಷ್ಟು ಪ್ರೀತಿಸುತ್ತೇವೆಯೊ ಅಷ್ಟೆ ನಾವು ನಮ್ಮ ವೈರಿಗಳನ್ನು ಕೂಡ ಪ್ರೀತಿಸಬೇಕು; ಇದರಿಂದ ಅನುಭಾವಿಗಳ ಸಹನೆ, ಪ್ರೀತಿ, ಸಹಾಯ ಇನ್ನಿತರ ಗುಣಗಳ ಅನಾವರಣವಾಗುವುದನ್ನು ಗಮನಿಸಬಹುದು.

ಸಾಮಾನ್ಯ ವ್ಯಕ್ತಿಗಳಲ್ಲಿ ಅಹಂಕಾರ, ಕೋಪ, ಸಿಟ್ಟು, ನಾನು, ನನ್ನದು, ನನ್ನಿಂದಲೇ ಎಲ್ಲ ಎಂಬ ಗುಣಗಳಿರುತ್ತವೆ. ಆಸೆ ಬಯಕೆಗಳು ಬಲವಾಗಿರುತ್ತವೆ. ಅನುಭಾವದ ಮಾರ್ಗದ ನಂತರ ಇವೆಲ್ಲ ದೂರವಾಗುತ್ತವೆ. ಸಿದ್ಧರು, ಸಂತರು, ಸೂಫಿಗಳು, ಶರಣರು ಈ ಅನುಭವದಲ್ಲಿ ಮಿಂದೆದ್ದು ವಿರಕ್ತಿಯನ್ನು ಹೊಂದಿ ಅನುಭಾವದ ಮಾರ್ಗದ ಕಡೆ ವಾಲಿದವರಾಗಿದ್ದಾರೆ. ಸಾಂಸಾರಿಕ ಜೀವನವೇ ಬೇಡ ಎಂಬ ಜಿಗುಪ್ಸೆ ಮನಸಲ್ಲಿ ಮೂಡಿ ವೈರಾಗ್ಯ ಹೊಂದಿದ ಸಮಯದಲ್ಲಿ ಇವರಿಗೆ ಕಾಣಿಸಿದ ಒಂದು ಮಹತ್ತರವಾದ ಮಾರ್ಗವೇ ಈ ಅನುಭಾವ ಮಾರ್ಗ.

'ನಾನು', 'ನನ್ನದೆನ್ನುವ' ಅಹಂಭಾವದ ಸಾಧಾರಣ ವ್ಯಕ್ತಿ ಯೋಗ ಸಾಧನೆಯಲ್ಲಿ ನಿರತನಾದನಂತರ ಅದು ಅವನಿಂದ ದೂರವಾಗುತ್ತದೆ. ನಿಜದ ಸ್ವರೂಪವನ್ನು ತೋರಿಸುತ್ತದೆ. ನಿಜವನ್ನರಿಯುವುದು ಸಾಧನೆಯ ಸಿದ್ಧಿಯನ್ನೇರಿದಾಗ; ಅದರಿಂದ ಆಕೆ ಅರಿಷಡ್ವರ್ಗ ಗುಣಗಳನ್ನು ದೂರ ಮಾಡಲು ಸಾಧ್ಯವಾಗುತ್ತದೆ.

ಅರಿತಷ್ಟು ಅರಿಯಬೇಕೆನ್ನುವ ಈ ಅನುಭಾವವನ್ನು ಯಾರು ಅರಿತುಕೊಳ್ಳಬೇಕಾದರೆ, ಅನುಭಾವಿಯೆಂಬುದನ್ನು ತಿಳಿಯಬೇಕಾದರೆ ಮೌಖಿಕದಿಂದ ತಿಳಿದರೆ ಸಾಲದು; ಸ್ವತಃ ತಾನೇ ಅನುಭಾವಿಯಾದಾಗ ಮಾತ್ರ ಸಾಧ್ಯವಾಗುತ್ತದೆ.

"ಅನುಭಾವ ಕೇವಲ ಹೊರಗಿನ ಕಾಟಾಚಾರದ ಮಾತಲ್ಲ, ಆ ಮಾತು ಅರಿವಿನೊಳಗಿನ ಅರಿವಿನಿಂದ ಬರಬೇಕು. ಅನುಭಾವಕ್ಕೆ ವಿಶಿಷ್ಟತನ ಉಂಟು; ಅದು ಮನುಷ್ಯ, ಸಮಾಜ, ರಾಷ್ಟ್ರ ಎಂಬುದರಿಂದ ಹೊರಟು, ವಿಶ್ವವೇ ತನ್ನದೆಂಬ ಅರಿವು ಬೆಳೆಯುವ ತನಕ ಹೊರಡುತ್ತದೆ. ಇಷ್ಟು ಸಮಷ್ಟಿಯ ನೆಲೆಯ ಬಗೆಗಳಲ್ಲಿ 'ಅನುಭಾವ'ದ ಪರಿಕಲ್ಪನೆ ಶರಣರಲ್ಲಿ ಬಗೆ ಬಗೆಯ ಆವರ್ತಗಳನ್ನು ಪಡೆಯುತ್ತದೆ.

ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯ,
ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯ,
ಸತ್ಯದ ಬಲದಿಂದ ಅಸತ್ಯದ ಕೇಡು ನೋಡಯ್ಯ,
ಕೂಡಲ ಸಂಗನ ಶರಣರ ಅನುಭಾವದಿಂದ ಎನ್ನ ಮನದ ಕೇಡ ನೋಡಯ್ಯ.

ಅಜ್ಞಾನ ಕೇವಲ ಅಜ್ಞಾನವಲ್ಲ, ಅದು ಅಜ್ಞಾನಕ್ಕೆ ತಗಲಿರುವ ಕೇಡು, ಅಜ್ಞಾನಕ್ಕೆ ಕೇಡುಂಟಾಗಬೇಕಾದರೆ ಜ್ಞಾನದ ಬಲದಿಂದ ಮಾತ್ರ ಸಾಧ್ಯ"[೨೨]

ಬಸವಣ್ಣನವರ ಈ ಹೇಳಿಕೆ ಲೋಕಕಲ್ಯಾಣಕರವಾದುದಾಗಿದೆ. ಜ್ಞಾನವೆಂಬುದು ಬೆಳಕು, ಅಜ್ಞಾನವೆಂಬುದು ಕತ್ತಲು. ಲೋಕ ಕತ್ತಲಿನಿಂದ ಬೆಳಕಿನತ್ತ ನಡೆಯಬೇಕಾದರೆ ಜ್ಞಾನದ ಅವಶ್ಯಕತೆ ಇಲ್ಲಿ ಬೇಕಾಗಿದೆ. ವಜ್ರದಿಂದ ವಜ್ರವನ್ನು ಕತ್ತರಿಸುವಂತೆ, ಅಸತ್ಯವನ್ನು ಸತ್ಯದಿಂದಲೇ ತಿದ್ದಬೇಕು. ಲೋಕವನ್ನು ಬೆಳಗಿಸುವ ಜ್ಞಾನ ಈ ಅನುಭಾವಿಗಳಿಂದ ಮಾತ್ರ ಸಾಧ್ಯ.

"ಸಂಗಮ ಸ್ಥಿತಿ ಶರಣನ ಕೊನೆಯ ಮೆಟ್ಟಿಲು. ಜ್ಯೋತಿ ಜ್ಯೋತಿಯನ್ನು ಸೇರಿದಂತೆ. ಇದರಲ್ಲಿ ಶರಣನೊಬ್ಬನ ಕಾಯದ, ಮನದ ಎಲ್ಲಾ ಕಿಲ್ಬಿಷಗಳು ಕಡಿದು ಹೋಗಿರುತ್ತವೆ. ಅವನು ಶುದ್ಧಾದ್ವೈತದಲ್ಲಿ ನೆಲೆನಿಂತಿರುತ್ತಾನೆ. ಕೇವಲ ಬೆಳಕು ಬೆಳಕನ್ನು ಅಪ್ಪುವಂಥ ಸ್ಥಿತಿ. ಇದನ್ನು ಜಗತ್ತಿನ ಅನುಭಾವಿಗಳು ಬೇರೆ ಬೇರೆ ಅನುಭವಗಳ ನೆಲೆಯಲ್ಲಿ ಹೇಳುವರಾದರೂ ಏಕಗತಿ ಮತ್ತು ಏಕಸ್ಥಿತಿ ಇದೆ".[೨೩]

ಸಂಗಮ ಸ್ಥಿತಿ ಎಂದರೆ ಕೂಡುವುದು ಲೀನವಾಗುವುದು. ಆತ್ಮ ಪರಮಾತ್ಮನಲ್ಲಿ ಬೆರೆಯುವುದು. ಇದು ಸಾಧನೆಯ ಸಿದ್ಧಿಗೇರಿದ ಸಾಧಕನ ಕೊನೆಯ ಹಂತ ಅವನು ತನ್ನ ಗುರಿಯನ್ನು ತಲುಪಿದ ಹಂತ ದೇಹದಲ್ಲಿರುವ ಎಲ್ಲಾ ತಾನು ತನ್ನದೆಂಬುಘಗಳೆಲ್ಲವೂ ದೇಹದಿಂದ ಸಂಪೂರ್ಣವಾಗಿ ಮಾಯವಾಗಿರುವ ಹಂತ-ಆಗ ಅವನು ಪರಿಪೂರ್ಣವಾಗಿ ಒಬ್ಬ ಅನುಭಾವಿಯಾಗಿರುತ್ತಾನೆ.

ಸಾಧನೆಯ ಸಂಗದಿಂದ ಅನುಭಾವವೆಂಬುದು ದೊರಕುವುದು. ಸಾಧನೆಯನ್ನು ಮಾಡದೆ ಕುಳಿತಲ್ಲಿಯೇ ಅನುಭಾವ ಸಿಗದು. ಅನುಭಾವವೆಂಬುದು ಅಂತರಂಗದ ರತ್ನ. ಇದನ್ನು ಪಡೆಯಲು ಪರಮಾತ್ಮನ ಸಂಗವನ್ನು ಮಾಡಬೇಕು. ಪರಮಾತ್ಮನ ಸಂಗ ಆಧ್ಯಾತ್ಮದ ಮೂಲಕ ದೊರೆಯುವುದು. ಧ್ಯಾನ, ಆಧ್ಯಾತ್ಮವೆಂಬೆರಡರ ಸಂಗದಿಂದ ಮಾತ್ರ ಅನುಭಾವವೆಂಬ ಸಂಗಾತಿ ದೊರೆಯುತ್ತದೆ. ಈ ಧ್ಯಾನ, ಆಧ್ಯಾತ್ಮದಿಂದ ಮನಸ್ಸಿನ ಚಂಚಲತೆ ಕಳಚಿ ಪರಿಶುದ್ಧಗೊಳ್ಳುತ್ತದೆ. ಧ್ಯಾನವಿಲ್ಲದೆ, ಆಧ್ಯಾತ್ಮವಿಲ್ಲದೆ ಅನುಭಾವ ದೊರಕದು. ಅನುಭಾವವಿಲ್ಲದೆ ಪರಮಾತ್ಮನ ಸಾಮಿಪ್ಯ ದೊರಕದು. ಆಧ್ಯಾತ್ಮದ ಸಂಗಾತಿಯಿದ್ದಲ್ಲಿ ಮನಶುದ್ಧಿಯಾಗುತ್ತದೆ. ಮನಶುದ್ಧಿಯಾದಲ್ಲಿ ಪರಮಾತ್ಮನ ಅನುಗ್ರಹ ದೊರೆಯುತ್ತದೆ.

ಶರಣರ ಅಭಿಪ್ರಾಯದಂತೆ ಮನುಜ ಮನಸ್ಸಿನ ಭಾವನೆಗಳಿಗೆ ಬಲಿಯಾಗುವ ಬದಲು ಶಿವನ ಧ್ಯಾನ ಮಾಡಿ ಶಿವನ ಸನ್ನಿಧಿಗೆ ಬಂದು ಶಿವನ ಮಹಿಮೆಯನ್ನು ಕೇಳಿ, ಶಿವಾನುಭವದ ಮಹತ್ವವನ್ನು ಅರಿಯುವುದು ಸೂಕ್ತ.

ಪ್ರತಿದಿನ ಕುಳಿತು ಸ್ವಾರ್ಥದ ಮಾತಿಗೆ ಮನಕೊಟ್ಟು ವಿಕೃತ ಭಾವನೆಗಳಿಗೆ ಬಲಿಯಾಗುವ ಬದಲು ಆ ಮನಸ್ಸನ್ನು ಶಿವನ ಸ್ವರೂಪವನ್ನರಿಯಲು ಬಳಸಬೇಕು. ಅದರಿಂದ ಚಂಚಲ ಮನಸ್ಸಿನ ವಿಕೃತ ಬಯಕೆಗಳು ದೂರವಾಗಿ ಪರಮಾತ್ಮನನ್ನು ಕಾಣುವ ಮತ್ತು ಅವನಿಂದ ಆಶೀರ್ವಾದ ಪಡೆಯುವ, ಅನುಗ್ರಹಕ್ಕೆ ಒಳಗಾಗುವ ಭಾಗ್ಯ ಸಿಗುವುದು. ಮನುಷ್ಯ ತಾನು ತನ್ನದನ್ನು ಬಿಟ್ಟು ಭಗವಂತನಲ್ಲಿ ಮೊರೆಹೋದರೆ ಶಾಶ್ವತ ಸುಖ ಸಿಗುತ್ತದೆ. ಯಾವುದೇ ಕಷ್ಟಗಳಿಂದ ಮುಕ್ತಿ ದೊರೆಯುತ್ತದೆ. ಪ್ರತಿ ಕ್ಷಣವೂ ತನು ಮನವನ್ನು ಶುದ್ಧೀಕರಿಸಿಕೊಂಡರೆ ಪರಮಾತ್ಮನ ಅನುಗ್ರಹಕ್ಕೆ ದೇಹ ಯೋಗ್ಯತೆಯನ್ನು ಪಡೆಯುತ್ತದೆ. ಆ ಪರಮಾತ್ಮನ ದಯೆಗೆ ಒಳಗಾದ ದೇಹವು ವಜ್ರದಂತೆ ಹೊಳಪನ್ನು ಪಡೆಯುವಂತಾಗುತ್ತದೆ. ಕತ್ತಲೆ ತುಂಬಿದ ಮನುಜನ ದೇಹವನ್ನೆಲ್ಲ ಬೆಳಕು ಆವರಿಸುತ್ತದೆ. ಹೀಗಾಗಿ ಸುಮ್ಮನೆ ಕೂಡುವ ಬದಲು ಪರಮಾತ್ಮನನ್ನು ಧ್ಯಾನಿಸಿದರೆ ಫಲ ಸಿಗುತ್ತದೆ. ಪ್ರತಿ ಕ್ಷಣವೂ ಪರಮಾತ್ಮನಿಗೆ ಮೀಸಲಿಟ್ಟು ಧ್ಯಾನಿಸಿದರೆ ಜೀವನದಲ್ಲಿ ಪ್ರತಿ ಜೀವಿ ಸಂತಸವನ್ನು ಕಾಣಬಹುದು.

ಅನುಭಾವವೆಂಬುದು ಮನುಜನ ಅಂತರಂಗದಲ್ಲಿರುವುದು. ಈ ಅಂತರಂಗವೆಂಬುದು ದೇಹದ ಒಳಗಿರುವುದು. ಇದನ್ನು ಹೇಗೆ ಉಪಯೋಗಿಸಿಕೊಳ್ಳುತ್ತಾನೆಂಬುದು ಮುಖ್ಯ. ಅನುಭಾವ ಅಡಗಿರಬೇಕಾದ ಅಂತರಾತ್ಮದಲ್ಲಿ ಆಸೆಗಳೆಂಬ ಕ್ಷಣಿಕ ಸುಖಭೋಗಗಳನ್ನು ತುಂಬಿಕೊಂಡರೆ ಅದರಿಂದ ಯಾವ ಸುಖವಿಲ್ಲ. ಅದು ಬರೀ ಭ್ರಮೆಗಳ ತಾಣವಾಗಿರುತ್ತದೆ. ಆಸೆಯೆಂಬುದು ಮನುಜನ ದೇಹವನ್ನೇ ಸುಡುತ್ತದೆ. ಇದು ದೇಹವೆಲ್ಲ ಆವರಿಸಿ ಒಂದು ದಿನ ಆತ್ಮ ದೇಹವನ್ನು ತೊರೆದು ಹೋಗುತ್ತದೆ. ಅಂದರೆ ಅಲ್ಲಿ ಮನುಜನ ದೇಹ ಆಸೆಗಾಗಿ ಸತ್ತುಹೋಯಿತೆಂದು ಹೇಳಬಹುದು.

ಮನುಜ ಕೇವಲ ಕ್ಷಣಿಕ ಸುಖಕ್ಕಾಗಿ ತನ್ನ ದೇಹದ ತುಂಬೆಲ್ಲ ಆಸೆ, ಹುಸಿ ಭರವಸೆಗಳನ್ನೇ ತುಂಬಿಕೊಂಡು ಪರಮಾತ್ಮನನ್ನು ಮರೆಯುತ್ತಾನೆ. ಸುಖದ ಹಿಂದೆ ಹೋಗಿ ದೇಹವನ್ನು ತ್ಯಜಿಸುತ್ತಾನೆ. ಅದೇ ಪರಮಾತ್ಮನನ್ನು ಪಡೆಯಲು ಅವನಿಗಾಗಿ ಏನೇ ಕಷ್ಟಗಳು ಬಂದರೂ ಹೆದರಿಸುವ ಮತ್ತು ಪ್ರತಿ ಕ್ಷಣವು ಭಗವಂತನ ಕಾಣುವ ಹಂಬಲದಲ್ಲಿದ್ದರೆ ಅವನು ಎಂದಿಗೂ ಕೈ ಬಿಡನು. ಪರಮಾತ್ಮ ನೀನು ಕಾಣದೆ ಹೋದರೆ ದೇಹ ನಶ್ವರವೆಂಬ ಮಾತು ಬಂದರೆ ಪರಮಾತ್ಮ ಅಂಥವರನ್ನು ಮೆಚ್ಚುತ್ತಾನೆ. ಅವನಿಗಾಗಿ ಯಾರು ಪ್ರಾಣತ್ಯಾಗ ಮಾಡಲು ನಿಶ್ಚಯಿಸಿರುತ್ತಾರೋ ಅವರನ್ನು ಪರಮಾತ್ಮನು ಅನುಗ್ರಹಿಸುತ್ತಾನೆ.

ಮನಸ್ಸಿನ ಪರಿಶುದ್ಧತೆ, ಆಧ್ಯಾತ್ಮ, ಆಸೆರಹಿತ ಜೀವನ ನಡೆಸಲು ಮುಂದೆ ಬರುವವರು ಯಾರಿಲ್ಲ. ದೇಹದ ಸುಖಕ್ಕಾಗಿ ಹೆಣ್ಣು, ಸಂಪತ್ತು, ಆಸೆ, ಬಯಕೆ ಇವೆಲ್ಲವನ್ನು ದೇಹದ ತುಂಬ ತುಂಬಿಕೊಂಡು ಸಾಯುವವರಿದ್ದಾರೆ; ದೇವರಿಗಾಗಿ ಸಾಯುತ್ತೇನೆನ್ನುವವರು ಯಾರು ಇಲ್ಲ. ಮನುಜನಿಗೆ ಎಷ್ಟೇ ಇದ್ದರೂ ಇನ್ನೂ ಬೇಕೆನ್ನುವ ಬಯಕೆಗಳೇ ಹೆಚ್ಚಿರುವಾಗ ದೇಹದ ಆಸೆಗಾಗಿ ಜೀವವನ್ನು ತೊರೆದ ಜನರೇ ಹೆಚ್ಚಿದ್ದಾರೆ.

ಅನುಭಾವವೆಂಬುದು ದೊರಕುವುದು ಮನುಜನ ಪರಿಶುದ್ಧವಾದ ಮನಸ್ಸು ಮತ್ತು ಆಧ್ಯಾತ್ಮದ ಮೂಲಕ. ಮನಸ್ಸೆಂಬುದು ಪರಿಶುದ್ಧವಾದರೆ ಆ ಮನಸ್ಸಿನಲ್ಲಿ ಪರಮಾತ್ಮನ ಅನುಗ್ರಹದ ಪ್ರವೇಶವಾಗುತ್ತದೆ. ಮನಸ್ಸನ್ನು ಶುದ್ಧೀಕರಿಸಲು ಮನುಜ ಅಹಂಕಾರವನ್ನು, ಸಿಟ್ಟು ಕೋಪಗಳನ್ನು ಸಂಪೂರ್ಣವಾಗಿ ತೊರೆಯಬೇಕು. ನಾನು ನನ್ನದೆನ್ನುವುದು ಎಲ್ಲಿಯವರೆಗೆ ಇರುವುದೋ ಅಲ್ಲಿಯ ತನಕ ಮನುಜನಿಗೆ ದೇವರ ಅನುಗ್ರಹದ ಗಾಳಿಯೂ ದೊರಕದು. ದೇಹದಲ್ಲಿರುವ ಆತ್ಮದ ಪರಿಶುದ್ಧತೆ ಮುಖ್ಯವೇ ಹೊರತು ದೇಹದ ಶುದ್ಧಿಯಲ್ಲ.

ಯಾವ ಮನುಜನ ಮನದಲ್ಲಿ ಅಹಂ, ಕೋಪ, ಅಸೂಯೆ, ದ್ವೇಷ ಇರುತ್ತದೆಯೋ ಅವನು ಸಂಪೂರ್ಣನಾಗಿ ವಿಕೃತ ಮನಸ್ಸುಳ್ಳವನಾಗಿರುತ್ತಾನೆ. ಅಂಥವನು ಇತರರನ್ನು ನೋಯಿಸುವ ಕೆಲಸಕಾರ್ಯಗಳಲ್ಲಿಯೇ ಇರುತ್ತಾನೆ. ಇಂಥ ಮನಸ್ಸುಳ್ಳ ವ್ಯಕ್ತಿ ಯಾವುದೇ ಪುಣ್ಯ ಕ್ಷೇತ್ರಗಳಿಗೆ ಹೋಗಿ ದೇವರ ದರ್ಶನ ಮಾಡಿದರೆ ಏನೂ ಫಲವಿಲ್ಲ. ಮನುಜನ ಮನಸ್ಸು ದೇಹ ಬುದ್ಧಿಗಳೆಲ್ಲವೂ ಪರಿಶುದ್ಧವಾಗಿದ್ದರೆ ಅವನ ಮನಸ್ಸು ಪರಮಾತ್ಮನ ಅನುಗ್ರಹಕ್ಕೆ ಒಳಗಾಗುತ್ತದೆ.

ಮನುಜನಾಗಿ ಹುಟ್ಟಿದ ಪ್ರತಿಯೊಬ್ಬರಿಗೂ ಆಸೆ - ಬಯಕೆಗಳು ಬರುವುದು ಸಹಜ. ಹಾಗಾಗಿ ಪ್ರತಿಯೊಬ್ಬ ಮನುಷ್ಯ ಸುಖಭೋಗಗಳಿಗೆ ಬಲಿಯಾಗಿದ್ದಾನೆ, ಬಲಿಯಾಗುತ್ತಲಿದ್ದಾನೆ. ಆ ಬಯಕೆಗಳನ್ನು ತೀರಿಸಿಕೊಳ್ಳಲು ಎಷ್ಟೆಲ್ಲ ಹರ ಸಾಹಸಗಳನ್ನು ಮಾಡುತ್ತಾನೆ. ತಾನು ನಡೆವ ಹಾದಿಯಲ್ಲಿ ಎಷ್ಟೇ ಸಮಸ್ಯೆಗಳು ಬಂದರೂ ಅದನ್ನು ಮೆಟ್ಟಿನಿಂತು ತನ್ನ ಮನದ ಬಯಕೆಗಳನ್ನು ಈಡೇರಿಸಿಕೊಂಡು ಮನುಷ್ಯ ಜನ್ಮ ಸಾರ್ಥಕವಾಯಿತೆನ್ನುವ ಮಾತು ಕಾಣಸಿಗುತ್ತದೆ.

ದೇಹ ಸುಖವನ್ನು ಹುಡುಕಿ ಬರುತ್ತದೆಯೋ ಸುಖ ದೇಹವನ್ನು ಹುಡುಕಿಕೊಂಡು ಹೋಗುತ್ತದೆಯೋ ಗೊತ್ತಿಲ್ಲ. ಆದರೆ ಅವನ ಮನಸ್ಸು ಬಯಕೆಯ ಮಹಾಪೂರವನ್ನೇ ಎದುರು ನೋಡುತ್ತಿರುತ್ತದೆ. ಭೂಮಿಯಲ್ಲಿ ಸುಖಭೋಗಗಳ ಸ್ವರ್ಗವಿದೆ. ಅದು ಕ್ಷಣಿಕವೆಂದು ಯಾರೂ ಭಾವಿಸುವುದಿಲ್ಲ. ಮನ, ತೃಪ್ತಿ ಎಲ್ಲವೂ ಅವನ ದೇಹಕ್ಕೆ ಸಂಬಂಧಿಸಿದುದಾಗಿದೆ. ಒಬ್ಬ ಮನುಷ್ಯ ತಾನು ಸಾಧಕನಾಗಬಯಸಿದರೆ ಕಠಿಣ ಪರಿಶ್ರಮ ಮಾಡಬೇಕಾಗುತ್ತದೆ. ಅದನ್ನು ಅನುಭಾವ ಎನ್ನುತ್ತಾರೆ. ಅಂಥ ಶ್ರಮ ಕಂಡರೆ ಸಾಮಾನ್ಯ ಮನುಜ ಸುಖದ ಬಯಕೆಗಳನ್ನೇ ಹುಡುಕಿಕೊಂಡು ಹೋಗುತ್ತಾನೆ. ವೈಭವದ ಜೀವನದ ಹಿಂದೆ ಹೋದವನಿಗೆ ತನ್ನನ್ನು ಸೃಷ್ಟಿಸಿದ ಪರಮಾತ್ಮನನ್ನೇ ಮರೆತು ತನ್ನಲ್ಲಿ ಅಹಂ, ಮೋಹ, ತಾನು, ತನ್ನದೆಲ್ಲವನ್ನು ಬೆಳೆಸಿಕೊಂಡು

ಕ್ರೂರಿಯಾಗಿ ಹೋಗುತ್ತಾನೆ. ಮನುಜನಲ್ಲಿ ತನ್ನತನದ ಅರಿವು ಮೂಡಬೇಕಾದರೆ ಇದನ್ನೆಲ್ಲ ತೊರೆದು ಮನಸ್ಸನ್ನು ಶುದ್ಧೀಕರಿಸಲು ಪರಮಾತ್ಮನ ಪ್ರಾರ್ಥನೆಯನ್ನು ಕೈಗೊಳ್ಳಬೇಕು. ಆಗ ಮನಶುದ್ಧಿಯಾಗಿ ಭಗವಂತನ ಅನುಗ್ರಹ ದೊರೆತು ತನ್ನಲ್ಲಿರುವ ಎಲ್ಲ ವೈಭೋಗದ ಜೀವನಕ್ಕೆ ಕೊನೆಗಾಣಿಸಿ ಅನುಭಾವದ ಬಾಗಿಲಿನೊಳಗೆ ಕುಳಿತುಕೊಳ್ಳುತ್ತಾನೆ.

ಸಮಾಜದಲ್ಲಿ ಜನಸಾಮಾನ್ಯರಲ್ಲಿ ಮನುಜ ಸಾಮಾನ್ಯನಾಗಿ ನಿಜರೂಪದಲ್ಲಿ ಬಾಳಿ ಬದುಕುವಂತವನಾಗಬೇಕೆ ಹೊರತು ಕಪಟ, ಮೋಸ, ವಂಚನೆಗಳೊಂದಿಗೆ ಅಲ್ಲ. ಅವನು ತಾನು ತನ್ನತನದ ಅರಿವಿಲ್ಲದೆ ಅಹಂ ಅನ್ನುವ ಪದದೊಂದಿಗೆ ಪ್ರತಿನಿತ್ಯ ಒಡನಾಟವಿಟ್ಟುಕೊಂಡು ಬಾಳಿದರೆ ಮನುಷ್ಯನೇ ಅಲ್ಲವೆಂದು ಹೇಳುತ್ತಾರೆ. ನಿಜ ಅರ್ಥದಲ್ಲಿ ನೈತಿಕ ಜೀವನವೆಂದರೆ ಒಳ್ಳೆಯ ಜೀವನವೆಂದರ್ಥ. ಹಾಗಾದರೆ ಇಲ್ಲಿ ಒಳ್ಳೆಯ ಜೀವನ ಕೆಟ್ಟ ಜೀವನವೆಂದು ಇರುತ್ತದೆಯೋ ಎಂಬುದೊಂದು ಪ್ರಶ್ನೆ ಏಳುತ್ತದೆ. ನಿಜ ಒಳ್ಳೆಯ ಜೀವನವೆಂದರೆ ಅಹಂ ಇಲ್ಲದಿರುವುದು. ಕೆಟ್ಟ ಜೀವನವೆಂದರೆ ನಾನು ಎಂಬ ಅಹಂಕಾರ ಇರುವಂಥದು. ಇನ್ನು ಮೇಲಿನ ಜಾತಿ ಕೆಳಜಾತಿ, ಧರ್ಮ, ಮತಗಳಲ್ಲಿ ಭಿನ್ನತೆಗಳಿದ್ದರೂ ಎಲ್ಲರೂ ಪೂಜಿಸುವುದು ಭಗವಂತನನ್ನೇ ಹೊರತು ಬೇರೆಯವರನ್ನಲ್ಲ. ಇದು ಧರ್ಮ ಕುಲಗಳೆಂದು ಬಡಿದಾಡುವ ಜನಕ್ಕೆ ಯಾಕೆ ಅರ್ಥವಾಗುತ್ತಿಲ್ಲ. ಇಂಥ ಮನುಜನನ್ನು ಹೇಗೆ ಮನುಜನೆಂದು ಒಪ್ಪಿಕೊಳ್ಳಬೇಕು. ಮುಖ್ಯವಾಗಿ ಈ ಮನುಜನಿಗೆ ತಿಳಿಸುವುದೇನೆಂದರೆ ನಾನು, ನನ್ನದು, ಜಾತಿ, ಧರ್ಮ ಪಂಥಗಳೆಂಬ ಕೀಳು ಮಟ್ಟ ಮನಸ್ಸನ್ನು ಹೊಂದಿರುವ ಮನುಜನನ್ನು ಭಗವಂತ ಮೆಚ್ಚುವುದಿಲ್ಲ ವೆಂಬುದು ಇವರಿಗೇಕೆ ಅರ್ಥವಾಗುತ್ತಿಲ್ಲ. ನಾನು ಎಂಬ ಅಹಂಕಾರಿಯನ್ನು ಭಗವಂತ ಹೇಗೆ ತಿರಸ್ಕರಿಸುತ್ತಾನೆಂದರೆ.

"ಪ್ರಿಯತಮೆಯ ಮನೆಯ ಕದವನ್ನು ಯಾರೋ ಹೊರಗಿನಿಂದ ತಟ್ಟಿದರು. ಒಳಗಿನಿಂದ ಧ್ವನಿ ಬಂತು 'ಯಾರು' "ನಾನು" ಉತ್ತರ ಬಂತು.

ಒಳಗಿನಿಂದ ಧ್ವನಿ ಬಂದಿತು. ಈ ಮನೆಯಲ್ಲಿ ನಾನು ಮತ್ತು ನೀನು ಇಬ್ಬರೂ ಒಟ್ಟಿಗೆ ಇರುವುದು ಸಾಧ್ಯವಿಲ್ಲ" ಬಾಗಿಲು ತೆರೆಯಲೇ ಇಲ್ಲ. ಪ್ರೇಮಿ ನಿರಾಶನಾಗಿ ಹೊರಟುಹೋದ. ವರ್ಷವಿಡೀ ಅವನು ಕಾಡುಮೇಡುಗಳಲ್ಲಿ ಅಲೆದ. ತಪಸ್ಸು ಮಾಡಿದ. ನೇಮ ವ್ರತ ಎಲ್ಲ ಮಾಡಿದ. ಕೊನೆಗೆ ವರ್ಷ ಕಳೆದ ಬಳಿಕ ಆ ಪ್ರೇಮಿ ಪುನಃ ಬಂದ, ಪ್ರಿಯತಮೆಯ ಮನೆ ಬಾಗಿಲನ್ನು ತಟ್ಟಿದ.

"ಯಾರು"? ಒಳಗಿನಿಂದ ಧ್ವನಿ ಬಂತು
"ನೀನು"ಪ್ರೇಮಿ ಉತ್ತರ ಕೊಟ್ಟ
ಬಾಗಿಲು ತೆರೆಯಿತು. ಪ್ರಿಯ ಪ್ರೇಯಸಿಯರು
ಕೂಡಿದರು, ಕೂಡಿ ಒಂದಾದರು."[೨೪]

ನಾನು ನನ್ನದೆನ್ನುವುದೆಲ್ಲ ನೈತಿಕತೆಗೆ ವಿರುದ್ಧವಾಗಿರುವುದು. ಎಲ್ಲರೂ ಪೂಜಿಸುವುದು, ಪ್ರಾರ್ಥಿಸುವುದು ಒಬ್ಬನನ್ನೇ! ಹಲವು ನಾಮಗಳಿಂದ ಪೂಜಿಸುವ ದೇವರು ಒಬ್ಬನೇ ಎನ್ನುವುದನ್ನು ಅರಿತು ನಡೆದರೆ ಪರಮಾತ್ಮನು ಮೆಚ್ಚುವನು.

ಸಿರಿತನ ಬಡತನವೆನ್ನುವುದು ಭಗವಂತನ ದೃಷ್ಟಿಯಲ್ಲಿ ಶೂನ್ಯ; ಭಗವಂತನ ಸೃಷ್ಟಿಯಲ್ಲಿ ತಾರತಮ್ಯದ ಮಾತಿಲ್ಲ. ಜಾತಿ ಎಂಬ ಪದಕ್ಕೆ ಜಾಗವೇ ಇಲ್ಲ. ಪರಮಾತ್ಮ ಸೃಷ್ಟಿಸಿದ ಸೃಷ್ಟಿಯಲ್ಲಿ ಎಲ್ಲರೂ ಸರಿಸಮಾನವಾಗಿರುವಂಥವುಗಳಾಗಿದ್ದು ಎಲ್ಲ ಜೀವಿಗಳಿಗೆ ಸಮಾನತೆಯೆಂಬ ಪ್ರೀತಿಯನ್ನು ತೋರಿಸಿರುವವನು ಭಗವಂತ ಮಾತ್ರ. ಇಂತಹ ನಿಸ್ವಾರ್ಥದ ಪ್ರೀತಿಯನ್ನು ಪಡೆಯಲು ಮನುಜನಾದವನು ಪ್ರೀತಿ ಮತ್ತು ಭಕ್ತಿಯಿಂದ ನುಡಿದು ನಡೆದರೆ ಅವರಿಗೆ ಭಗವಂತನ ಸಾಮಿಪ್ಯ ದೊರಕುವುದು ಖಚಿತ. ಮನುಷ್ಯನ ಮನಸ್ಸಿನ ಶುದ್ಧತೆಯನ್ನು ಪರಮಾತ್ಮ ಪ್ರೀತಿಸುತ್ತಾನೇ ಹೊರತು ಬಾಹ್ಯ ಸೌಂದರ್ಯದ ಆಡಂಬರವನ್ನಲ್ಲ. ಇದನ್ನರಿಯದ ಮನುಜ ಬಾಹ್ಯ ಆಡಂಬರದ ಜಿವನದಿಂದಲೇ ಮೆರೆಯುತ್ತಾನೆ. ಕೊನೆಗೆ ಒಂದು ದಿನ ಜೀವನದಲ್ಲಿ ಏಳು ಬೀಳುಗಳನ್ನುಂಡು ತನ್ನ ಬದುಕಿನ ಬಗ್ಗೆ ತಾನೇ ವಿರಾಗಿಯಾಗಿ ಮುಕ್ತಿಪಡೆಯಲು ಬಯಸುತ್ತಾನೆ. ಅವನು ಬಯಸಿದಾಗ ಮುಕ್ತಿ ದೊರೆಯದು. ಲೌಕಿಕ ಬಂಧನದಿಂದ ಮುಕ್ತಿ ಬಯಸುವುದಾದರೆ ಅವನು ತನ್ನ ಮನಸ್ಸನ್ನು ಶುದ್ಧೀಕರಿಸಿಕೊಳ್ಳಬೇಕು. ಆ ಶುದ್ಧವಾದ ಮನಸ್ಸಿನಿಂದ ಒಂದೇ ಚಿತ್ತೇಕಾಗ್ರತೆಯಿಂದ ಭಗವಂತನಲ್ಲಿ ಮೊರೆಹೋದಾಗ ಅವನಿಗೆ ಮೆಚ್ಚುಗೆಯಾಗಿ ತನ್ನ ಸಾಮಿಪ್ಯ ಬಯಸಿ ಬೇಡಿದವನಿಗೆ ದಯಪಾಲಿಸಿ ಮುಕ್ತಿಯನ್ನು ಕೊಡುತ್ತಾನೆ. ಭಗವಂತನನ್ನು ಬಯಸುವ ಮನಸ್ಸಿನಲ್ಲಿ ಸ್ವಾರ್ಥವಿರಬಾರದು. ಪರಮಾತ್ಮನ ಸಾಮೀಪ್ಯವನ್ನು ಬಯಸುವವನು ದೇವರೊಂದಿಗೆ ತನ್ನ ಭಕ್ತಿಯನ್ನು ನಿರ್ಮಲವಾಗಿ ಇಟ್ಟಿರಬೇಕು. ಯಾವ ರೀತಿಯೆಂದರೆ ಇದಕ್ಕೆ ಪರಿಪೂರಕವಾದ ಒಂದು ಅಂಶವೊಂದನ್ನು ಗಮನಿಸಬಹುದು.

"ಒಬ್ಬ ಮುದುಕಿ ಒಂದು ಕೈಯಲ್ಲಿ ಪಂಜು ಮತ್ತೊಂದು ಕೈಯಲ್ಲಿ ನೀರಿನ ಗಡಿಗೆ ಹಿಡಿದುಕೊಂಡು ಹೋಗುತ್ತಿದ್ದಳಂತೆ" ಇದೇನು ಹಗಲಿನಲ್ಲಿ ದೀವಿಟಿಗೆ(ಪಂಜು) ಏಕೆ? ಎಂದು ಯಾರೋ ಆಕೆಯನ್ನು ಕೇಳಿದರಂತೆ. ಆಕೆ ಹೇಳಿದಳು, ಆ ಪಂಜಿನಿಂದ ನಾನು ಸ್ವರ್ಗಕ್ಕೆ ಕಿಚ್ಚಿಟ್ಟು ಅದನ್ನು ಭಸ್ಮ ಮಾಡಬಯಸುತ್ತೇನೆ. ಇದರಿಂದ ಪರಮಾತ್ಮ ಮತ್ತು ಆತನನ್ನು ಬಯಸುವ ಪ್ರೇಮಿಗಳ ನಡುವೆ ಯಾವ ಕಂದರವೂ ಇರಬಾರದು. ಪರಮಾತ್ಮನನ್ನು ಯಾವುದೇ ಸ್ವರ್ಗ ಅಪವರ್ಗಗಳ ಆಸೆಯಿಂದಾಗಲೀ ಅಥವಾ ನರಕದ ಭಯದಿಂದಾಗಲೀ ಪ್ರೀತಿಸುವುದು ಸಲ್ಲ. ಪರಮಾತ್ಮನಿಗಾಗಿಯೇ ಪರಮಾತ್ಮನನ್ನು ಪ್ರೀತಿಸಬೇಕು."[೨೫] ದೇವರ ಸಾನಿಧ್ಯ ಬಯಸಿ ಮುಕ್ತಿಯನ್ನು ಪಡೆಯಲು ಭಗವಂತನನ್ನು ಪ್ರೀತಿಸಿದರೆ ಮುಕ್ತಿ ದೊರೆಯುವ ಬಗೆಯನ್ನು ಮನುಜನಿಗೆ ತೋರಿಸಿಕೊಟ್ಟಿರುವುದಕ್ಕೆ ಈ ಮೇಲಿನ ವಾಕ್ಯವು ಸ್ಫೂರ್ತಿದಾಯಕವಾಗಿದೆ. ತುಕಾರಾಮರು ಕೂಡ ಮನುಜನಿಗೆ ಮುಕ್ತಿಯನ್ನು ಪಡೆಯುವುದಾದರೆ ನಿನ್ನ ಮನಸ್ಸು ಶುದ್ಧಿಯಾಗಿಸಿ,

ನಿನ್ನ ಆಡಂಬರ ತೊರೆದು ನಿನ್ನನ್ನು ನೀನು ತಿಳಿದವನಾಗಿ ಬಾಳು, ಆಗ ಪರಮಾತ್ಮ ನಿನ್ನನ್ನು ಮೆಚ್ಚುವನು ಎನ್ನುತ್ತಾರೆ.

ಭೂಮಿಯಲ್ಲಿ ಮನುಜ ಸೃಷ್ಟಿಯಾಗಿ ಅವನ ಸಂತತಿ ಅಭಿವೃದ್ಧಿಯಾದಂತೆ ಜೀವನೋಪಾಯಕ್ಕೆಂದು ಕೆಲಸವನ್ನು ಹುಡುಕಿಕೊಂಡ. ಇದು ಮುಂದೆ ಅವನ ಜಾತಿಯಾಗಿ ಮಾರ್ಪಟ್ಟಿತು. ಮನುಜ ತಾನು ಮಾಡಿದ ಕೆಲಸದ ಜೊತೆ ತನ್ನ ಕುಲವನ್ನು ತಾನೇ ಸೃಷ್ಟಿಸಿಕೊಂಡ. ಆದರೆ ಭಗವಂತ ಯಾವತ್ತೂ ನೀನು ಕೀಳು ಜಾತಿ ನೀನು ಮೇಲು ಜಾತಿ ಎಂಬ ಪದದಿಂದ ಯಾರನ್ನು ಗುರುತಿಸಿ ಜಾತಿ ಭೇದಗಳನ್ನು ತಾರತಮ್ಯಗಳನ್ನು ತೋರಲಿಲ್ಲ. ಆದರೆ ನರಮಾನವನಿಗೆ ಭಗವಂತನ ಪ್ರೀತಿಯ ಅರಿವಿಲ್ಲದೆ ತಮ್ಮ ಅಹಂಕಾರದಲ್ಲೇ ತೇಲಾಡುತ್ತಾ ಜಾತಿ ಧರ್ಮಗಳ ಭೇದಭಾವದಲ್ಲಿದ್ದು, ಅವರ ಮನಸ್ಸು ವಿಕೃತವಾದ ವರ್ತನೆಗೆ ಒಳಪಟ್ಟಿತು. ನಾಮದೇವರ ವಾಕ್ಯದಂತೆ ಭಗವಂತ ಹೇಳುವುದೇನೆಂದರೆ ಜನಸಾಮಾನ್ಯನಾಗಿ ಸಂಸಾರ ನಡೆಸುವ ಮನುಷ್ಯ ತನ್ನ ಸಾಂಸಾರಿಕ ಬಂಧನದ ನಂತರ ಮುಕ್ತಿಯನ್ನು ಬಯಸಿದರೆ ಅವನು ತನ್ನಲ್ಲಿರುವ ಅಹಂಕಾರ ಮತ್ತು ಜಾತಿ, ಮೇಲು ಕೀಳೆಂಬ ಭೇದ ಭಾವ ಇವುಗಳನ್ನೆಲ್ಲ ಬಿಟ್ಟು ಅವನಲ್ಲಿ ಮನೆ ಮಾಡಿರುವ ವಿಕೃತಮನಸ್ಸಿನ ಕೆಟ್ಟ ಆಲೋಚನೆಗಳನ್ನು ತೊರೆದು ಸರಳ ಜೀವಿಯಾಗಿ ಬದುಕಿ ಬಾಳಬೇಕು. ಆಗ ಪ್ರತಿಯೊಂದು ಕಡೆ ಭಗವಂತನು ಕಾಣಸಿಗುತ್ತಾನೆ.

ಅಹಂ, ನಾನು, ನನ್ನದು ಎನ್ನುವ ಇವುಗಳನ್ನು ಬಿಟ್ಟು ಮನುಜ ಸರಳವಾಗಿ ಶಾಂತಿ ಸಹನೆಯಿಂದ ಬಾಳಿ ಬದುಕಿದರೆ ಪ್ರಪಂಚದ ಎಲ್ಲ ಜೀವಚರಗಳಲ್ಲಿ ಭಗವಂತನು ಕಾಣಸಿಗುತ್ತಾನೆ.

ಭಕ್ತ ಪ್ರಹ್ಲಾದನು ತನ್ನ ಮನಸ್ಸಿನ ತುಂಬೆಲ್ಲ ಪರಮಾತ್ಮನನ್ನು ತುಂಬಿಕೊಂಡಿದ್ದನು. ಹಾಗಾಗಿ ಅವನು ತನ್ನ ತಂದೆಗೆ ತನ್ನ ಮನದ ದೇವರನ್ನು ಮಾನವ ನಿರ್ಮಿಸಿದ ಪ್ರತಿಯೊಂದು ವಸ್ತುವಿನಲ್ಲೂ ಪರಮಾತ್ಮ ಇದ್ದಾನೆಂದು ಹೇಳುವುದಲ್ಲದೆ ತೋರಿಸಿಕೊಟ್ಟನು. ಕಾರಣ ಭಕ್ತ ಪ್ರಹ್ಲಾದನ ಮನಸ್ಸಿನ ತುಂಬೆಲ್ಲ ನಾನು ಎಂಬ ಅಹಂ ಇರಲಿಲ್ಲ. ಜಾತಿ ಭೇದದ ತಾರತಮ್ಯಗಳಿರಲಿಲ್ಲ. ಅವನಲ್ಲಿದ್ದದ್ದು ಬರಿ ನೀನು ಎನ್ನುವ ಭಗವಂತನ ಪ್ರೀತಿ ಮಾತ್ರ. ಆದ್ದರಿಂದ ಅವನಿಗೆ ಭಗವಂತ ಪ್ರತಿಯೊಂದರಲ್ಲೂ ಕಾಣಿಸಿಕೊಂಡ. ನಾನು ಎಂಬ ಅಹಂಕಾರ ಬಿಟ್ಟು ಜಾತಿ ಭೇದಗಳನ್ನು ಬಿಟ್ಟು ಭಕ್ತಿ ಮಾರ್ಗದಲ್ಲಿ ನಡೆದರೆ ಅಂಥವರಿಗೆ ಭಗವಂತ ಮುಕ್ತಿಯನ್ನು ಕೊಡುತ್ತಾನೆ. ಕ್ಷಣಿಕ ಮಾತ್ರ ಶಾಂತವಾಗಿದ್ದರೆ ಅವನನ್ನು ಸಹನಾಮೂರ್ತಿ ಯೆನ್ನುವುದಿಲ್ಲ. ಅವನು ದೇಹದ ಜೊತೆ ಪ್ರಪಂಚದಲ್ಲಿ ಬಾಳುವಷ್ಟು ದಿನ ಸಹನೆ, ಪ್ರೀತಿಯಿಂದ ಬಾಳಿ ಬದುಕಿದವನು ಮಾತ್ರ ಸಂತನೆಂದು ಕರೆಯಿಸಿಕೊಳ್ಳುತ್ತಾನೆ. ಇತರ ವಸ್ತುವಿನ ಮೇಲೆ ಮತ್ತು ತನ್ನ ದೇಹದ ಮೇಲಿನ ಮೋಹ, ಕೋಪ, ಎಂಬ ಪದಗಳು ಅವನಿಂದ ಸಂಪೂರ್ಣವಾಗಿ ದೂರವಾಗಿರುತ್ತವೆ. ಸದಾ ಶಾಂತಿ, ಸಹನೆ, ಮುಖದಲ್ಲಿ ಮುಗುಳ್ನಗೆ, ಮೌನಿಯಾಗಿರುತ್ತಾನೋ ಅವನೇ ಸಂತ.

ಪ್ರತಿಯೊಬ್ಬ ಸಂತ, ಸಿದ್ಧ, ಶರಣ, ಅವಧೂತ, ಅನುಭಾವಿಗಳೆನಿಸಿಕೊಂಡಿರುವವರೆಲ್ಲರೂ ಹೇಳುವುದೆಂದರೆ ದೇವರು ಒಬ್ಬನೇ. ಆದರೂ ಈ ಮಾನವ ಕುಲದ ಮನುಜರು ತಮ್ಮದೇ ಆದ ಬಿಂಕ ಬಿನ್ನಾಣಗಳಿಂದ ವೈಭೋಗ ಜೀವನದ ಅಹಂಕಾರವೆಂಬ ಕತ್ತಲೆಯಲ್ಲಿ ಮುಳುಗಿ ಮೇಲು ಕೀಳೆಂಬ ಭೇದಭಾವದಿಂದ ಜಾತಿ ಧರ್ಮಗಳು, ಮತ, ಕುಲಗಳ ತಾರತಮ್ಯದಲ್ಲಿ ಹೊರಳಾಡುತ್ತ ಮಾನವೀಯತೆಯ ಪರಿವೇ ಇಲ್ಲದೆ ಮೆರೆಯುತ್ತಿದ್ದಾರೆ. ಮನುಕುಲದ ಮನುಷ್ಯ ಜೀವಿಗೆ ದೇವರೊಬ್ಬನೇ ಎಂಬ ಮಾತು ತಿಳಿದು ತಿಳಿಯದೆ ಜಾತಿ ಧರ್ಮಗಳೆಂಬ ಭೂತದ ಬೆನ್ನಿಗೆ ಅಂಟಿಕೊಂಡರೆ ಭಗವಂತನ ಪ್ರೀತಿ ದೊರಕದೆಂಬ ಅರಿವಿದ್ದರೂ ತಮ್ಮದೇ ಆದ ಅಹಂಕಾರದ ಜೀವನದಲ್ಲಿ ಬದುಕಿ ಬಾಳುತ್ತಿದ್ದಾನೆ.

ಭಗವಂತನು ಮನುಜನ ನಿರ್ಮಲವಾದ ಭಕ್ತಿಯನ್ನು ಮಾತ್ರ ಸ್ವೀಕರಿಸುತ್ತಾನೆ. ಅವನ ಆಡಂಬರದ ಪೂಜೆ ಪುನಸ್ಕಾರಗಳನ್ನಲ್ಲ. ಮನುಜ ಯಾವುದೇ ಧರ್ಮದವನಾದರೂ ಧರ್ಮಗಳು ಸಾರುವುದು ಒಂದೇ ಸಮಾನತೆ, ಮಾನವೀಯತೆ, ನಿನ್ನಲ್ಲಿ ನೀನು ಒಳ್ಳೆಯ ಗುಣಗಳನ್ನು ಒಳ್ಳೆಯ ನಡತೆಯನ್ನು ಮೈಗೂಡಿಸಿಕೊಂಡು ಬಾಳಿ ಬದುಕೆಂದು ತಿಳಿಸುತ್ತವೆ.

ಸೂಫಿ ನಡೆದು ಬಂದ ಧರ್ಮ, ಶರಣ ನಡೆದು ಬಂದ ಧರ್ಮ ಬೇರೆ ಬೇರೆಯದಾಗಿದ್ದರೂ ಅವರ ಗುರು ಒಂದೇ; ಪಡೆದ ಮಾರ್ಗ ಒಂದೇ; ಬೇಡಿದ ಭಗವಂತ ಒಬ್ಬನೇ. ಭಾಷೆ ಬೇರೆ, ಧರ್ಮ ಬೇರೆ ಆದರೂ ಗುರಿ ಒಂದೇ, ಬಯಸಿದ ಬಯಕೆ ಒಂದೇ ಅದೇ ಭಗವಂತನ ಪ್ರೀತಿ ಅವನ ಸಾಮಿಪ್ಯ ಇದೇ ಇವರಿಬ್ಬರಿಗಾದ ಅನುಭೂತಿಯಿಂದ ಮಹಾನ್ ಚೇತನವೆನ್ನುವ ಅನುಭಾವಿಗಳಾದರು.

ಜೈನರು ಮಂದಿರಕ್ಕೆ ಹೋಗಿ ಭಗವಂತ ಎಂಬ ನಾಮದಿಂದ ಪ್ರಾರ್ಥಿಸಿದರೆ, ಕ್ರೈಸ್ತರು ಚರ್ಚ್‌ಗೆ ಹೋಗಿ ಭಗವಂತ ಎಂಬ ನಾಮದಿಂದಲೇ ಪ್ರಾರ್ಥಿಸುವರು. ಈ ಭಗವಂತ ಎಂಬ ನಾಮ ಎಲ್ಲರಲ್ಲೂ ಇರುವಾಗ ದೇವರೊಬ್ಬನೆ ಎಂದು ನಂಬಿ. ಅವನಿಗೆ ಬೇಕಾಗಿರುವ ಒಳ್ಳೆಯ ನಡತೆ ಮಾನವೀಯತೆ ಮನುಜನಲ್ಲಿದ್ದರೆ ಭಗವಂತ ಅವರಿಗೆ ಮುಕ್ತಿಯನ್ನು ಕರುಣಿಸುವನು. ಮನುಜನಾದವನು ಸರ್ವಧರ್ಮ ಸಮನ್ವಯನಾಗಿ ಬದುಕಿ ಬಾಳಬೇಕೆಂಬುದು ಧರ್ಮ. ಇತರರಿಂದ ಗೌರವ, ಮನ್ನಣೆ ಪ್ರೀತಿ ವಿಶ್ವಾಸ ಸಿಗುವುದು ಮಾನವೀಯತೆಯೆಂಬ ಸದ್ಗುಣದ ನಡತೆಯಿಂದಲೇ ಹೊರತು ಅವನ ಧರ್ಮ - ಜಾತಿ ಶ್ರೀಮಂತಿಕೆಯಿಂದಲ್ಲ.

ಒಬ್ಬ ವ್ಯಕ್ತಿ ಎಷ್ಟೇ ಸಾಧನೆಯ ಉತ್ತುಂಗವನ್ನೇರಿದ್ದರೂ ಮೊದಲು ಮಾನವ ದೇಹದಿಂದ ಆತ್ಮ ಬೇರೆಯಾದರೆ ದೇಹದ ಕೆಲಸಕಾರ್ಯಗಳು ನಿಂತುಹೋಗುತ್ತವೆ. ದೇಹವೆಂಬುದು ಕಾರ್ಯನಿರತವಾಗಿರಬೇಕೆಂದರೆ ಆತ್ಮ ಆ ದೇಹದಲ್ಲಿರಬೇಕು. ದೇಹ, ಆತ್ಮ, ಮನಸ್ಸು ಮೂರು ಜೊತೆಯಾಗಿರುವಾಗ ಅಲ್ಲಿ ಅಹಂ ಎನ್ನುವುದು ಸಾಮಾನ್ಯವಾಗಿರುತ್ತದೆ. ಈ ಅಹಂ ಬಿಟ್ಟು ಬಂದಾಗ ಅಲ್ಲಿ ನಿಜ ಸ್ವರೂಪನಾದ ಭಗವಂತನ ದರ್ಶನ ಸಿಗುತ್ತದೆ. ಭಗವಂತ ಆತ್ಮ

ಸ್ವರೂಪಿಯಾಗಿದ್ದಾನೆ. ಮನುಜನಾದವನು ಅಹಂ ಬಿಟ್ಟು ತನ್ನನ್ನು ತಾನು ಅರಿತಾಗ ಅವನಿಗೆ ತನ್ನತನವೆಂಬುದು ತಿಳಿಯುತ್ತದೆ. ಈ ತಿಳಿಯುವುದೇ ತನ್ನ ಆತ್ಮ ಪರಿಚಯ ತನಗಾದಂತೆ.

ಮಾನವನಿಗೆ 'ತಾನು', 'ತನ್ನದು' ಎನ್ನುವುದರ ಬಗ್ಗೆ ಮಮತೆ, ಮೋಹ ಇರುವುದು ಸಹಜ. ಹುಟ್ಟು ಇದ್ದಾಗ ಸಾವು ಇದೆ ಎಂಬುದು ಭೂಮಿಯಲ್ಲಿ ಜೀವಿಸುವ ಪ್ರತಿ ಜೀವಿಗೂ ತಿಳಿದಿರುವ ವಿಷಯವಾಗಿದೆ. ಆದರೆ ಇದರ ಮಧ್ಯದ ವೈಭೋಗದ ಜೀವನ ನಡೆಸುವ ಮಾನವನಿಗೆ ಸಾವಿನ ಬಗ್ಗೆ ಭಯವನ್ನು ಪಡುವುದು ಅಷ್ಟು ಸಮಂಜಸವಲ್ಲದ ಮಾತು. ಆತ್ಮ ಜ್ಞಾನವಾಗಬೇಕೆಂದರೆ ಸಾವಿನ ಬಗ್ಗೆ ಭಯವಿರಕೂಡದು.

ಮನುಜ ಹುಟ್ಟು ಎನ್ನುವುದನ್ನು ಹೇಗೆ ಸಂತೋಷದಿಂದ ಸ್ವೀಕಾರ ಮಾಡುತ್ತಾನೋ ಸಾವನ್ನು ಕೂಡ ಅಷ್ಟೇ ಸಂತೋಷದಿಂದ ಸ್ವೀಕಾರ ಮಾಡಬೇಕು. ಹುಟ್ಟಿನಿಂದ ಪಡೆದಿರುವುದನ್ನು ಸಾವು ಎನ್ನುವುದರಿಂದ ಕಳೆದುಕೊಳ್ಳಬೇಕಾಗಿರುವುದರಿಂದ ಸಾವನ್ನು ಭಯದಿಂದ ನೋಡಿರಬಹುದು. ಸಾವಿಗೆ ಶಾಪ ಹಾಕುವ ಮತ್ತು ಭಯದಿಂದ ನೋಡುವ ಮನುಜನಿಗೆ ಆತ್ಮಜ್ಞಾನದ ಅರಿವಾಗಬೇಕು. ಈ ಅರಿವನ್ನು ಪಡೆಯಲು ಅವನಲ್ಲಿ ಭಯಭೀತಿಗಳಿರಕೂಡದು. ಭಯ, ಅಹಂ, ವ್ಯಾಮೋಹ ಇವೆಲ್ಲವುಗಳಿಂದ ಅವನು ಆಚೆ ಬಂದಾಗ ಅವನಿಗೆ ತನ್ನತನದ ಆತ್ಮದ ಅನುಭೂತಿಯಾಗುತ್ತದೆ.

ಭಗವಂತನೊಂದಿಗಿನ ಪ್ರೀತಿಯನ್ನು ಅರಿತುಕೊಳ್ಳಬಹುದು. ಈ ಭೂಮಿ ಮೇಲಿರುವ ಹಲವಾರು ಧರ್ಮಗಳಲ್ಲಿರುವ ಕೆಲವರು ಭಗವಂತನ ಬಗ್ಗೆ ಭಯಪಡುತ್ತಾರೆ. ಭಯದಿಂದ ಭಜಿಸುತ್ತಾರೆ. ಕೆಲವರು ಭಯರಹಿತವಾಗಿ ಭಜಿಸುತ್ತಾರೆ. ಹಾಗೆ ಕೆಲವರು ಯಾವ ರೀತಿಯಲ್ಲೂ ಪೂಜಿಸುವುದಿಲ್ಲ; ಧ್ಯಾನಿಸುವುದಿಲ್ಲ. ಅವರದೇ ವೈಭೋಗ ಜೀವನದ ನಶೆಯಲ್ಲಿ ಜೀವಿಸುತ್ತಾರೆ. ಆದರೆ ಒಂದಲ್ಲ ಒಂದು ದಿನ ಈ ಮನುಷ್ಯನಿಗೆ ಜೀವನದ ಪಯಣದಲ್ಲಿ ಕಷ್ಟಗಳು ಬಂದಾಗ ಮಾತ್ರ ದೇವರ್‍ ಮೊರೆಹೋಗುತ್ತಾರೆ. ಈ ಭಕ್ತಿಯನ್ನು ಸ್ವಾರ್ಥ ಎನ್ನುತ್ತಾರೆ. ಯಾವತ್ತೂ ನೆನೆಸದ ಭಗವಂತನನ್ನು ಕಷ್ಟ ಬಂದಾಗ ಪೂಜಿಸುವುದು, ಭಜಿಸುವುದರಲ್ಲಿ ಸ್ವಾರ್ಥವಿರುತ್ತದೆ. ಇಂಥವರ ಮನಸ್ಸು ಚಂಚಲವಾಗಿರುತ್ತದೆ. ಆ ಮನಸ್ಸಿನ ತುಂಬ ಕೆಟ್ಟ ಆಲೋಚನೆಗಳು, ದ್ವೇಷ ಅಸೂಯೆಗಳಿರುತ್ತವೆ. ಈ ವಿಕೃತ ಮನಸ್ಸಿನಲ್ಲಿ ಭಗವಂತ ನೆಲೆಸುವುದಾದರೂ ಹೇಗೆ? ಸಾಧ್ಯ

ಯಾರ ಮನಸ್ಸು ನಿರ್ಮಲವಾಗಿರುತ್ತದೆಯೋ ಯಾರ ಭಕ್ತಿ ನಿಸ್ವಾರ್ಥವಾಗಿರುತ್ತದೆಯೋ?, ಅಂಥವರ ಮನಸ್ಸಿನಲ್ಲಿ ದೇವರು ನೆಲೆಸುವುದು ಸಹಜ. ಭೋಗ ಜೀವನದ ಬಯಕೆಗಳಲ್ಲಿ ವೈಭೋಗವನ್ನು ಅನುಭವಿಸುತ್ತಾ ಕ್ಷಣಿಕ ಸುಖದಲ್ಲಿಯೇ ನಿರತನಾಗಿರುವವರು ದೇವರನ್ನು ನೆನೆಸುವುದು ತೀರಾ ಅಪರೂಪ. ರಬಿಯಾ ಅದಕ್ಕೆ ಹೇಳಿದ್ದಾಳೆ ನರಕಕ್ಕೆ ಹೆದರಿ ಪ್ರಾರ್ಥಿಸಿದರೆ ದೇವರು ಅದನ್ನು ಮೆಚ್ಚುವುದಿಲ್ಲ. ಸ್ವಾರ್ಥದಿಂದ ನಮಿಸಿದರೆ ನನ್ನನ್ನು ದಹಿಸಿಬಿಡು ಎಂದು ಕೇಳಿಕೊಳ್ಳುವುದು ಅರ್ಥಗರ್ಭಿತವಾಗಿದೆ. ಭಗವಂತನಿಗೆ ಬೇಕಾಗಿರುವುದು ನಿಸ್ವಾರ್ಥದ ಭಕ್ತಿ ಮಾತ್ರ ಅದನ್ನು ಭಗವಂತನಲ್ಲಿಟ್ಟರೆ ಅವನು ಭಕ್ತರನ್ನು ರಕ್ಷಿಸುವುದು ಖಚಿತ.

ಮನುಷ್ಯರಲ್ಲಿರುವ ಒಂದು ದುರಾಸೆಯ ಭಕ್ತಿ ಎಂದರೆ ಪೂಜಿಸುವಾಗ, ಪ್ರಾರ್ಥಿಸುವಾಗ ಒಂದಲ್ಲ ಒಂದು ಬೇಡಿಕೆಯನ್ನಿಟ್ಟು ಪೂಜಿಸುವುದು. ಅದೇನಾದರೂ ಈಡೇರದಿದ್ದರೆ ಭಗವಂತನ ಮೇಲೆ ಮುನಿಸಿಕೊಳ್ಳುತ್ತಾರೆ. ಸ್ವರ್ಗ ಸುಖದ ಜೀವನವನ್ನು ಬೇಡಿ ಬಯಸಿ ಪ್ರಾರ್ಥಿಸುವುದು ಖಂಡನಾರ್ಹ. ಪರಮಾತ್ಮ ಇಂಥ ಪ್ರೀತಿಯನ್ನು, ಇಂಥ ಭಕ್ತರನ್ನು ದೂರ ಸರಿಸುತ್ತಾನೆ. ಒಬ್ಬ ತಾಯಿ ಮಗನನ್ನು ಮುದ್ದಿಸುವಾಗ ಮಗನಿಂದ ಯಾವ ಅಪೇಕ್ಷೆಯನ್ನು ಪಡುವುದಿಲ್ಲ. ಅವರಿಬ್ಬರ ಮಧ್ಯ ನಿರ್ಮಲವಾದ ನಿಸ್ವಾರ್ಥದ ಪ್ರೀತಿ ಇರುತ್ತದೆ. ಇಂಥ ಪ್ರೀತಿ ಭಗವಂತ ಮತ್ತು ಭಕ್ತನ ಮಧ್ಯ ಇದ್ದರೆ ಪರಮಾತ್ಮನಿಗೆ ಪ್ರಿಯವಾಗುತ್ತದೆ. ಆಗ ಅವನ ಅನುಗ್ರಹ ಸಿಗುತ್ತದೆ.

ಅನುಭಾವಿಗಳಿಗೆ ಅವರ ಹೃದಯದಲ್ಲಿ ಪರಮಾತ್ಮನ ಪ್ರೀತಿ ಬಿಟ್ಟರೆ ಬೇರೆ ಯಾವುದನ್ನು ಅವರು ಅಪೇಕ್ಷಿಸುತ್ತಿರುವುದಿಲ್ಲ. ಅದಕ್ಕೆ ಅವರ ಹೃದಯದ ತುಂಬೆಲ್ಲ ಬರಿ ಭಗವಂತನ ಪ್ರೀತಿಯೊಂದೇ ಇರುತ್ತಿತ್ತು. ದ್ವೇಷ, ಹೊಟ್ಟೆಕಿಚ್ಚಿಗೆ ಅವರಲ್ಲಿ ಸ್ಥಳವಿರುತ್ತಿರಲಿಲ್ಲ. ಹಾಗಾಗಿ ಅನುಭಾವಿಗಳೆಲ್ಲ ಪರಮಾತ್ಮನಲ್ಲಿ ಬೆರೆತು ಅನುಭೂತಿಯಲ್ಲಿ ಮಿಂದು ಕುಣಿಯುವಂಥವರಾಗಿದ್ದರು.

ಜನಸಾಮಾನ್ಯರಲ್ಲಿ ನೂರರಲ್ಲಿ ೯೦ರಷ್ಟು ಜನರು ತಮಗೆ ಭಗವಂತನ ಕರುಣೆ, ದಯೆ ಸಿಗುತ್ತಿಲ್ಲವೆಂದು ಕೋಪ ಮಾಡಿಕೊಳ್ಳುತ್ತಿದ್ದರು. ಎಷ್ಟು ಪರಮಾತ್ಮನನ್ನು ಪೂಜಿಸಿದರೂ, ಪ್ರಾರ್ಥಿಸಿದರೂ ಪ್ರಯೋಜನವಿಲ್ಲವೆಂದು ಬೇಸರಿಸುತ್ತಿದ್ದಾರೆ. ಪ್ರಾರ್ಥಿಸುವ, ಪೂಜಿಸುವ ಜನರ ಮನಸ್ಸಿನಲ್ಲಿ ಕೋಪ, ಸಿಟ್ಟುಗಳಿಗೆ ಜಾಗವಿದೆ. ಅಂದರೆ ಅವರಲ್ಲಿ ಪರಿಪೂರ್ಣವಾದ ಪ್ರೀತಿ ಇಲ್ಲವೆಂದು ಅರ್ಥ ಕೊಡುತ್ತದೆ.

ಇಂಥ ಸ್ವಾರ್ಥ - ಪ್ರೀತಿ ಜನಸಾಮಾನ್ಯನಲ್ಲಿ ತುಂಬಿರುತ್ತದೆ. ಅವನು ನಿಸ್ವಾರ್ಥದಿಂದ ಇರುವುದು ತೀರ ವಿರಳ. ಇಂಥವರಿಗೆ ಪರಮಾತ್ಮ ತನ್ನ ಅನುಗ್ರಹ ಕೊಡುವುದು ಹೇಗೆ? ಯಾಕೆಂದರೆ ಇಲ್ಲಿರುವುದು ಬರಿ ಸ್ವಾರ್ಥದ ಭಕ್ತಿ ಇಂಥದ್ದನ್ನು ಯಾವತ್ತು ಪರಮಾತ್ಮ ಸ್ವೀಕಾರ ಮಾಡುವುದಿಲ್ಲ. ಕೋಪ ಇರುವ ಕಡೆ ಪ್ರೀತಿ ಇರುವುದಿಲ್ಲ. ಇದ್ದರೂ ಅದು ಸ್ವಾರ್ಥದ, ಸುಳ್ಳಿನ ಪ್ರೀತಿ ಎಂದಾಗುತ್ತದೆ.

ತಮ್ಮ ದೇಹ ಮತ್ತು ಮನಸ್ಸಿನ ತುಂಬ ಪರಮಾತ್ಮನ ಪ್ರೀತಿಯನ್ನೇ ತುಂಬಿಕೊಂಡಿರುವವರ ಹೃದಯದಲ್ಲಿ ಪರಮಾತ್ಮನನ್ನು ಬಿಟ್ಟರೆ ಬೇರೆಯವರಿಗೆ ಜಾಗವಿಲ್ಲ. ಪರಮಾತ್ಮನನ್ನು ಪ್ರೀತಿಸುವ ಅವರ ಹೃದಯ ಸಹೃದಯಮಯವಾಗಿರುತ್ತದೆ. ಸೂಫಿಗಳ ಹೃದಯದಲ್ಲಿ ಬರಿ ಪ್ರೀತಿಗೆ ಮಾತ್ರ ಜಾಗವಿರುತ್ತದೆ. ಅಲ್ಲಿ ಯಾವ ಕೆಟ್ಟ ಆಲೋಚನೆಗಳಿಗೆ ಸ್ಥಳವಿರುವುದಿಲ್ಲ. ಹಾಗಾಗಿ ಸೂಫಿಗಳು ನೋಡುವ ನೋಟದಲ್ಲಿ, ಮಾತನಾಡುವ ನುಡಿಗಳಲ್ಲಿ, ಕಾಣುವ ವಸ್ತುಗಳಲ್ಲಿ ಬರೀ ಪ್ರೀತಿ ತುಂಬಿರುತ್ತದೆಯೇ ಹೊರತು ಬೇರೆ ಯಾವುದು ಕಾಣುವುದಿಲ್ಲ.

ಕಸದಿಂದ ರಸವೆನ್ನುವ ಹಾಗೆ ಸೂಫಿಗಳು ಪ್ರತಿಯೊಂದು ವಸ್ತುವಿನಲ್ಲಿ ಸೂಫಿಗಳು ಭಗವಂತನನ್ನು ಕಾಣುತ್ತಾರೆ. ಅವರ ಮೈ ಮನದಲ್ಲೆಲ್ಲ ದೇವರಿರುತ್ತಾನೆ. ಅವರು ಯಾವುದನ್ನು

ಕಸ ಎನ್ನುವುದಾಗಲಿ ಮುಟ್ಟಬಾರದೆನ್ನುವುದಾಗಲಿ ಇರುವುದಿಲ್ಲ. ಎಲ್ಲವನ್ನು ಪ್ರೀತಿಯಿಂದ ನೋಡುತ್ತಾರೆ. ಅದು ಭಗವಂತನ ಸೃಷ್ಟಿ ನಮಗೆ ಕೊಟ್ಟಿರುವ ಕೊಡುಗೆ ಎನ್ನುತ್ತಾರೆ. ಪ್ರಪಂಚದ ಸೃಷ್ಟಿಯಲ್ಲಿ ಭಗವಂತನು ನಮಗಾಗಿ ಸೃಷ್ಟಿಸಿರುವುದನ್ನು ನಾವು ಪೂಜ್ಯ ಭಾವದಿಂದ ಕಾಣಬೇಕು.

ತಮ್ಮ ನಿರ್ಮಲವಾದ ಪ್ರೇಮಯೋಗದಿಂದ ಪರಮಾತ್ಮನಿಗೆ ತೀರ ಹತ್ತಿರವಾದವರಾಗಿ ಪರಮಾತ್ಮನನ್ನು ನಿರ್ಭಯವಾಗಿ ಪ್ರೀತಿಸಿ, ಪೂಜಿಸಿ ಅವನ ಸಾಮಿಪ್ಯವನ್ನು ಪಡೆದು ಪರಿಪೂರ್ಣವಾದ ಅರ್ಥವನ್ನು ಅನುಭಾವಿಗಳಾಗಿ ಕೊಟ್ಟಿದ್ದಾರೆ. ವಿಭಿನ್ನ ಧರ್ಮಗಳ ಜನಸಾಮಾನ್ಯರು ಆಯಾ ಧರ್ಮಲ್ಲಿರುವ ಅನೇಕ ಬಗೆಯ ದೇವರುಗಳಲ್ಲಿ, ತಮಗಿಷ್ಟವಾದ ದೇವರನ್ನು ತಮ್ಮದೇ ನೆಲೆಯಲ್ಲಿ ಪೂಜಿಸುತ್ತಾರೆ. ಇದರಲ್ಲಿ ಕೆಲವರು ಆಡಂಬರಕ್ಕಾಗಿ ಪೂಜಿಸಿದರೆ ಇನ್ನು ಕೆಲವರು ಸ್ವಾರ್ಥ ಮನೋಭಾವದಿಂದ ಪೂಜಿಸುತ್ತಾರೆ. ಯಾವುದೇ ಧರ್ಮವಾಗಲಿ ಜನರು ಪೂಜಿಸುವ, ಪ್ರಾರ್ಥಿಸುವ ದೇವರು ಒಬ್ಬನೇ; ಅವನೇ ಪರಮಾತ್ಮ. ಪೂಜಿಸುವ ಪೂಜೆಯಲ್ಲಿ ಸ್ವಾರ್ಥವಿರಕೂಡದು.

ಕೆಲವರು ನಂಬಿಕೆಯಲ್ಲಿಯೇ ದೇವರಿದ್ದಾನೆ ಎನ್ನುತ್ತಾರೆ. ಕೆಲವರು ಪೂಜಿಸುವುದರಲ್ಲಿ ದೇವರು ಕಾಣುತ್ತಾನೆ ಎಂದು ಹೇಳುತ್ತಾರೆ. ಇವೆರಡು ನಂಬಿಕೆಗೆ ಒಳಪಟ್ಟಿರುವುದರಿಂದ ಇಲ್ಲಿ ಸ್ವಾರ್ಥರಹಿತವಾದುದನ್ನು ಸ್ವೀಕರಿಸಬಹುದು ಭಗವಂತನ ನಿರೀಕ್ಷೆಯೇನೆಂಬುದು ಜನರಿಗೆ ಅರ್ಥವಾದರೆ ಒಳಿತು. ದೇವರನ್ನು ದೇವರೆಂದು ಪ್ರೀತಿಸುವ ಅರಿವು ಬಂದರೆ ಪರಮಾತ್ಮನ ಪ್ರೀತಿ ದೊರೆಯುತ್ತದೆ. ವ್ಯಾಖ್ಯಾನದಲ್ಲಿ ನಾನು ದೇವರನ್ನು ಪ್ರೀತಿಸುತ್ತೇನೆ ಎನ್ನುವ ಮಾತು ಅರ್ಥಗರ್ಭಿತವಾದುದಾಗಿದೆ. ಕೆಲವರಿಗೆ ದೇವರನ್ನು ಕಂಡರೆ ಭಯ. ಅವರು ದೇವರನ್ನು ದೂರದಿಂದ ನಿಂತು ಕೈಮುಗಿಯುತ್ತಾರೆ. ಕಣ್ಮುಚ್ಚಿ ಭಯದಿಂದ ಪ್ರಾರ್ಥಿಸುತ್ತಾರೆ. ತಾವು ಮಾಡುವ ಪೂಜೆಯ ಬಗ್ಗೆ ಶೀಘ್ರದ ಫಲವನ್ನು ಬಯಸುತ್ತಾರೆ. ಫಲ ಬೇಗ ದೊರೆಯದಿದ್ದರೆ ಬೇಸರದಿಂದ ಪೂಜೆ - ಪ್ರಾರ್ಥನೆಯಿಂದ ದೂರ ಸರಿಯುತ್ತಾರೆ. ಹೆಚ್ಚಿನ ಪ್ರತಿಫಲದ ಆಸೆಯಿಂದಲೇ ಪರಮಾತ್ಮನನ್ನು ಪೂಜಿಸುತ್ತಾರೆ.

ದೇವರನ್ನು ಪ್ರೀತಿಸುವುದು ಹೇಗೆ? ಎಂಬ ಪ್ರಶ್ನೆ ಮೂಡುವುದು ಸಹಜ. ಪ್ರೀತಿ ಎನ್ನುವುದು ಪ್ರಪಂಚದಲ್ಲಿ ಜೀವಿಸುವ ಪ್ರತಿಯೊಂದು ಜೀವಿಗೂ ಇರುತ್ತದೆ. ಈ ಪ್ರೀತಿಯೆನ್ನುವ ಕ್ರಿಯೆಯನ್ನು ಭಗವಂತ ಕೊಟ್ಟಿರುವ ಕೊಡುಗೆ. ಈ ಪ್ರೀತಿ ಭಗವಂತನ ಸೃಷ್ಟಿ ಪ್ರೀತಿ ನಿರ್ಮಲವಾಗಿದ್ದು ಇದನ್ನು ಸರಿಯಾಗಿ ಉಪಯೋಗಿಸುವ ಬುದ್ಧಿ ಮನುಜನಿಗಿರಬೇಕು. ಆಗ ಮನುಜ ತಾನು ಸಂತೋಷದಿಂದ ಬಾಳಿ ಭಗವಂತನ ಕೃಪೆಯನ್ನು ಪಡೆಯಬಹುದಾಗಿದೆ.

ಪರಮಾತ್ಮನನ್ನು ಪೂಜಿಸುವ, ಪ್ರಾರ್ಥಿಸುವ ಮನುಜ ಆತ್ಮದ ದೃಷ್ಟಿಯಲ್ಲಿ ಪರಮಾತ್ಮನ ಅನುಗ್ರಹ ಪಡೆದು ಸಾಮೀಪ್ಯವನ್ನು ಬಯಸುವುದಾದರ ಮೊದಲು ಪರಮಾತ್ಮನನ್ನು ಪ್ರೀತಿಸಬೇಕು. ಪರಮಾತ್ಮನನ್ನು ಪ್ರೀತಿಸಿದಷ್ಟು ಅವನಿಗೆ ಹತ್ತಿರವಾಗುವುದು ಸಹಜ. ನಿತ್ಯ ಪ್ರೀತಿಯನ್ನು ಪರಮಾತ್ಮನಿಗೆ

ಕೊಟ್ಟಷ್ಟು ಪರಮಾತ್ಮ ಅವರನ್ನು ಇಷ್ಟಪಡುತ್ತಾನೆ. ಇಲ್ಲಿ ಮುಖ್ಯ ಅಂಶವೆಂದರೆ ಕೊಡುವ ಪ್ರೀತಿಯಲ್ಲಿ ನಾನು ಎಂಬ ಅಹಂ ಇರದೆ ನಿರ್ಮಲವಾದ ನಿಶ್ಚಲವಾದ ಭಕ್ತಿ - ಪ್ರೀತಿ ಇರಬೇಕು.

ಪ್ರೀತಿ ಎನ್ನುವುದು ಹೃದಯ ಮತ್ತು ಮನಸ್ಸುಗಳಿಂದ ಹುಟ್ಟುವಂಥದ್ದು. ಪ್ರತಿದಿನ ದೇವರನ್ನು ಪ್ರೀತಿಸಿ ಪೂಜಿಸಿದಷ್ಟು ಮನುಜನ ಹೃದಯ, ಮನಸ್ಸು ಆವರಿಸಿಕೊಳ್ಳುತ್ತದೆ. ಪರಮಾತ್ಮನ ಧ್ಯಾನವನ್ನೇ ಮಾಡುತ್ತದೆ. ಆಗ ಆ ಮನಸ್ಸಿನಲ್ಲಿ ವಿಭಿನ್ನ ಆಯಾಮಗಳಿಗೆ ಅಂದರೆ ಇತರ ಆಲೋಚನೆಗಳಿಗೆ ಎಡೆಕೊಡುವುದಿಲ್ಲ. ಪರಮಾತ್ಮ ಮತ್ತು ಭಕ್ತನಲ್ಲಿ ಪ್ರೀತಿ ಎನ್ನುವ ಸಂಪರ್ಕ ಹೆಚ್ಚಾದಂತೆ ಪೂಜಿಸುವ ಕ್ರಿಯೆ ಹೆಚ್ಚಾಗುತ್ತದೆ. ಇದರಿಂದ ಪರಮಾತ್ಮ ಮತ್ತು ಭಕ್ತನಲ್ಲಿ ಅವಿನಾಭಾವ ಸಂಬಂಧ ಮೂಡುತ್ತದೆ.

ಪರಮಾತ್ಮ ಮತ್ತು ಮನುಜನ ನಡುವೆ ಪ್ರೇಮಾಂಕುರದ ಅವಿನಾಭಾವ ಸಂಬಂಧ ಸಂಪರ್ಕ ಏರ್ಪಡಲು ಇರುವ ಒಂದು ಅಂಶವೆಂದರೆ ಭಕ್ತಿ. ಈ ಭಕ್ತಿಯಲ್ಲಿ ಭಗವಂತನ ಜ್ಞಾನದ ಶಕ್ತಿಯಿದೆ; ಮನುಜನ ಪ್ರೇಮದ ಬುತ್ತಿಯಿದೆ. ಈ ಪ್ರೇಮದ ಬುತ್ತಿಯನ್ನು ಭಗವಂತನ ಮುಂದೆ ಇಟ್ಟಾಗ ಅದರಲ್ಲಿ ನಿರ್ಮಲವಾದ ನಿಶ್ಚಲವಾದ ಭಕ್ತಿ ಮಾತ್ರ ಇದ್ದರೆ ಪರಮಾತ್ಮ ಅಂಗೀಕರಿಸುತ್ತಾನೆ. 'ನನ್ನದು', 'ನನ್ನಂದಿಲೇ' ಎನ್ನುವ ಅಹಂಕಾರ ಅದರಲ್ಲಿದ್ದರೆ ಭಗವಂತನು ತಿರಸ್ಕರಿಸುತ್ತಾನೆ.

ಮನುಷ್ಯನ ಅಹಂಕಾರವನ್ನು ಹೊಡೆದೋಡಿಸುವ ಶಕ್ತಿ ಪರಮಾತ್ಮನಿಗೆ ಮಾತ್ರವಿದೆ ಹೊರತು ಬೇರೆ ಯಾರಿಗೂ ಇಲ್ಲ. ಪ್ರಪಂಚದ ಸೃಷ್ಟಿಕರ್ತನಾದ ಭಗವಂತನು ಪ್ರತಿಯೊಂದು ವಸ್ತುವಿನ ಮೇಲೆ ಅಧಿಕಾರವನ್ನು ಹೊಂದಿದವನಾಗಿದ್ದಾನೆ. ಮನುಜ ಹುಟ್ಟಿನಿಂದಲೇ ಅಹಂಕಾರಿ ಯಾಗಿರುವುದಿಲ್ಲ.

ಕಾಮ, ಕ್ರೋಧ, ಅಹಂಕಾರ, ವೈಭೋಗ ಇವೆಲ್ಲ ಮಾನವನ ಬೆಳವಣಿಗೆಯ ಜೊತೆಯಲ್ಲಿಯೇ ಬೆಳೆಯುತ್ತವೆ. ಇದನ್ನು ಮೈಗೂಡಿಸಿಕೊಂಡು ನಡೆಯುವಾಗ ತನ್ನನ್ನು ತಾನು ಅರಿಯುವ ಪ್ರಯತ್ನ ಮಾಡುವುದಿಲ್ಲ. ಇವನು ತನ್ನನ್ನು ತಾನು ಅರಿತಾಗ ತನ್ನಲ್ಲಿರುವ ಅಹಂಕಾರವು ಅಹಂಕಾರದಿಂದ ಮುಕ್ತನಾಗಲು ಬಿಡದು. ಅವನ ಮನಸ್ಸು ಚಂಚಲತೆಯನ್ನುಂಟು ಮಾಡುತ್ತದೆ.

ದೇವರ ಪರಮ ಸತ್ಯವನ್ನು ಕಂಡುಕೊಂಡು ಅಹಂಕಾರದ ನಿವಾರಣೆಗಾಗಿ ಪಶ್ಚಾತ್ತಾಪ ಹೊಂದಲು ದೇವರ ಮೊರೆಹೋದರೆ ಆತ್ಮದ ಪರಿಶುದ್ಧತೆಯನ್ನು ಹೊಂದಲು ಸಾಧ್ಯವೆಂದು ಅನುಭಾವಿಗಳ ಅಭಿಪ್ರಾಯ.

ಮನುಷ್ಯ ಜೀವಿ ಮನುಷ್ಯನನ್ನೇ ಸ್ನೇಹ ಸಂಬಂಧಗಳಿಂದ ಅರ್ಥ ಮಾಡಿಕೊಳ್ಳಬಹುದು. ಪ್ರಾಣಿಗಳು ಪ್ರಾಣಿಗಳನ್ನೇ ಸ್ನೇಹದಿಂದ ಅರ್ಥ ಮಾಡಿಕೊಳ್ಳಬಹುದು. ಭೌತಿಕವಾಗಿ ಹೇಳುವುದಾದರೆ ಮನುಷ್ಯ - ಪ್ರಾಣಿಗಳ ಮಧ್ಯ ಕೂಡ ಸ್ನೇಹವಾಗುತ್ತಿದೆ. ಮನುಷ್ಯ ಮಾತನಾಡುತ್ತಾನೆ; ಪ್ರಾಣಿ

ಎನಿಸಿಕೊಂಡಿರುವ ಶ್ವಾನ ಇಲ್ಲಿ ಮಾತನಾಡದು; ಆದರೆ ಮಾತಿಲ್ಲದ ಎರಡು ಜೀವಿಗಳ ಮಧ್ಯ ಅರ್ಥ ಮಾಡಿಕೊಳ್ಳುವುದರಲ್ಲಿ, ಪ್ರೀತಿ ವಿಶ್ವಾಸ ತೋರುವುದರಲ್ಲಿ ನಡೆ ನುಡಿಗಳಲ್ಲಿ ವ್ಯತ್ಯಾಸವಿದೆ. ಮನುಷ್ಯನನ್ನು ಮನುಷ್ಯನೇ ಅರ್ಥ ಮಾಡಿಕೊಳ್ಳುವುದರಲ್ಲಿ ಇಬ್ಬರಲ್ಲಿರುವ ಗುಣಗಳಲ್ಲಿ ಮನಸ್ಸು ಎಂಬ ಸೂಕ್ಷ್ಮ ವಸ್ತುವಿನಲ್ಲಿ ವ್ಯತ್ಯಾಸಗಳನ್ನು ಕಾಣಬಹುದು. ಒಬ್ಬರು ಸರಳ ಸ್ವಭಾವದ ಸಹಾಯಕ ಮನೋಭಾವದವರಾಗಿದ್ದರೆ ಇನ್ನೊಬ್ಬರು ವಿಕೃತ ಮನಸ್ಸಿನ ಸ್ವಭಾವದವರಾಗಿದ್ದು ಸಹಾಯ ಮನೋಭಾವವಿಲ್ಲದವರಾಗಿರುತ್ತಾರೆ. ಇಬ್ಬರಲ್ಲಿ ವ್ಯತ್ಯಾಸಗಳನ್ನು ಅವರವರೇ ಕಂಡು ಅರಿತುಕೊಳ್ಳಬೇಕು.

ಮನುಷ್ಯ ದೇವನಿಗೆ ತುಂಬ ಪ್ರೀತಿಯುಳ್ಳವನಾಗಬಲ್ಲ. ದೇವರ ಸಾಮಿಪ್ಯದಲ್ಲಿರುವಂತವ ನಾಗಬಲ್ಲ. ಒಬ್ಬ ಅನುಭಾವಿ ಎನಿಸಿಕೊಳ್ಳುವವನಿಗೆ ಇದು ಸಾಧ್ಯ ಈ ಅನುಭಾವಿ ಎನಿಸಿಕೊಳ್ಳುವವನು ಮೊದಲು ಜನಸಾಮಾನ್ಯರಲ್ಲಿ ಒಬ್ಬನಾಗಿದ್ದು ಯೋಗ, ಆಧ್ಯಾತ್ಮದ ಸಾಧನೆಯಿಂದ ಲೌಕಿಕ ಬಂಧಮುಕ್ತನಾಗಿ ಅಲೌಕಿಕವಾದ ಜೀವನದ ಅನುಭೂತಿಯಿಂದ ತನ್ನೆಲ್ಲ ಲೌಕಿಕ ಗುಣಗಳಿಂದಾಚೆ ಬಂದು ಸಂಪೂರ್ಣವಾದ ಅಲೌಕಿಕ ಜೀವನದಲ್ಲಿ ತನ್ನನ್ನು ತಾನು ಲೀನಗೊಳಿಸಿಕೊಂಡು ದೈವಸ್ವರೂಪನಾಗಿ ದೈವಮಾನವನಾಗಿ ಆ ಒಂದು ದೈವಸ್ವರೂಪದ ದೇವಮಾನವನ ದೃಷ್ಟಿಯಿಂದ ದೇವರನ್ನು ತಿಳಿದುಕೊಳ್ಳುತ್ತಾನೆ.

ಅಲೌಕಿಕದಲ್ಲಿದ್ದ ಪ್ರತಿಯೊಬ್ಬರ ಜೀವನದ ಜೀವವು ಶಾಂತಿಯಿಂದ, ಸಹನೆಯಿಂದ, ಮೌನವಾಗಿದ್ದು ಅವನ ದೇಹದ ಪ್ರತಿ ಕಣವು ಪ್ರೀತಿಯಿಂದ, ಕರುಣೆಯಿಂದ, ಅನುಕಂಪ ದಿಂದಿರುತ್ತದೆ. ಅವರ ಮನಸ್ಸು ಸದಾ ನಿರ್ಮಲವಾದ ಪ್ರೀತಿಯಿಂದ ನಗುತ್ತಿರುತ್ತದೆ, ಅವನ ದೇಹ ಮನಸ್ಸು ಆತ್ಮದಿಂದ ಕಾರ್ಯನಿರತವಾಗಿರುತ್ತದೆ. ಈ ಆತ್ಮಕ್ಕೆ ದೇಹದ ಯಾವ ಸಂಬಂಧವಿಲ್ಲ. ಈ ಆತ್ಮಕ್ಕೆ ಹೆಣ್ಣುಗಂಡುಗಳೆಂಬ ಭೇದ ಭಾವವಿರುವುದಿಲ್ಲ. ಆತ್ಮಕಾರ್ಯ ನಿರತವಾಗಲು ದೇಹದ ಆಸರೆಬೇಕು ದೇಹಕ್ಕೆ ಆತ್ಮದ ಆಸರೆಬೇಕು ಇವೆರಡು ಇದ್ದಾಗ ಮನಸ್ಸು ತನ್ನ ಕಾರ್ಯವನ್ನು ಮಾಡಬಹುದಾಗಿದೆ. ಆತ್ಮ ಪರಮಾತ್ಮನನ್ನು ಆತ್ಮ ಸ್ವರೂಪಿ, ಜ್ಯೋತಿ ಸ್ವರೂಪಿ ಎಂದು ಅರಿಯುತ್ತದೆ. ಆಧ್ಯಾತ್ಮದ ಮೂಲಕ ದೇಹ ಆತ್ಮ ಇದನ್ನು ಅರಿತುಕೊಳ್ಳುತ್ತದೆ. ಅರಿತಾಗ ಮಾತ್ರ ಮಾನವನ ದೇಹ ಮತ್ತು ಆತ್ಮ ಪ್ರತಿ ಕ್ಷಣವು ಆಧ್ಯಾತ್ಮದ ಮೂಲಕ ದೇಹದಲ್ಲಿರುವ ಲೌಕಿಕವಾದ ಬಯಕೆಗಳನ್ನು ದೂರಮಾಡುತ್ತ ಪರಮಾತ್ಮನಿಗೆ ಪ್ರಿಯವಾಗುತ್ತ ಹೋಗುತ್ತದೆ. ಆತ್ಮ ಸ್ವರೂಪಿ, ಜ್ಯೋತಿ ಸ್ವರೂಪಿಯಾದ ಭಗವಂತನು ತನ್ನ ಸ್ವರೂಪದ ದರ್ಶನವನ್ನು ಪ್ರಕಾಶಮಾನವಾದ ಬೆಳಕಿನ ಕಿರಣದ ಮೂಲಕ ಪ್ರಕಾಶಿಸುತ್ತಾನೆ. ಆ ಬೆಳಕಿನ ಕಿರಣದ ಸ್ಪರ್ಶ, ದರ್ಶನ ಸಾಮಾನ್ಯನಿಗೆ ಕಾಣುವುದು ಅಸಾಧ್ಯವಾದ ಮಾತು. ಈ ಬೆಳಕಿನ ಕಿರಣದಿಂದ ಇದರ ಮೂಲಕ ದೈವಮಾನವನಾಗಿ ಮನುಷ್ಯ ಒಬ್ಬ ಅನುಭಾವಿಯಾಗಿ, ಸಕಲ ವೈಭವದ ಲೌಕಿಕ ಜೀವನದಿಂದ ಆಚೆ ಇದ್ದು ದೇವರನ್ನು ಅರಿತುಕೊಂಡು ತಾನು ದೈವ ಮಾನವನಾಗಿ ಬಾಳುತ್ತಾನೆ.

ಜ್ಯೋತಿ ಸ್ವರೂಪನಾದ ಭಗವಂತನನ್ನು ಕಂಡ ಮನುಷ್ಯ ತಾನೂ ಕೂಡ ಒಬ್ಬ ಜ್ಯೋತಿ ಸ್ವರೂಪಿಯಾಗಿದ್ದೇನೆ. ಪ್ರಾಪಂಚಿಕವಾಗಿ ಬದುಕನ್ನು ಕಾಣಲು ದೇಹವನ್ನು ಹೊತ್ತಿದ್ದೇನೆ. ಇದು ಕ್ಷಣಿಕವಾದದ್ದು. ಆದರೆ ದೈವತ್ವವನ್ನು ಅರಿತ ನಂತರ ನಾನು ಒಬ್ಬ ಜ್ಯೋತಿಯಾಗಿದ್ದೇನೆ ಎಂದು ಹೇಳುತ್ತಾನೆ.

ದೇಹ ಮತ್ತು ಮನಸ್ಸಿನಲ್ಲಿ ಒಂದೇ ಭಾವನೆಗಳಿದ್ದಾಗ ದೇಹ ಮನಸ್ಸಿನ ತುಂಬೆಲ್ಲ ಬರೀ ನಿರ್ಮಲವಾದ ನಿಶ್ಚಲವಾದ ಪ್ರೀತಿ ದೈವತ್ವದ ಗುಣಗಳನ್ನೇ ಕಾಣಬಹುದು. ಅಲ್ಲಿ ಯಾವ ನಕರಾತ್ಮಕವಾದ ಯೋಚನೆಗಳಿಗೆ, ಗುಣಗಳಿಗೆ ಜಾಗವಿರುವುದಿಲ್ಲ. ಈ ಪ್ರೀತಿಯ ಬಗ್ಗೆ ರಬಿಯಾ ಅವರು ಒಂದು ಮಾತನ್ನು ಹೇಳುತ್ತಾರೆ. ಸಂತ ರಮಣಿ ರಬಿಯಾರನ್ನು ಯಾರೋ ಪ್ರಶ್ನೆ ಮಾಡಿದಾಗ ಹೇಳುವ ಮಾತು.

"ನೀನು ದೇವರನ್ನು ಪ್ರೀತಿಸುವೆಯಾ"? ಹೌದು ಪ್ರೀಸುತ್ತೇನೆ ಹಾಗಾದರೆ ಸೈತಾನನನ್ನು ದ್ವೇಷಿಸುವೆಯಾ? ಅದಕ್ಕೆ ಅವಳು ಹೀಗೆ ಉತ್ತರ ಕೊಟ್ಟಳಂತೆ 'ನನ್ನ ಹೃದಯದಲ್ಲಿ ಪ್ರೇಮ ಎಷ್ಟೊಂದು ತುಂಬಿ ತುಳುಕಾಡುತ್ತಿದೆಯೆಂದರೆ ಅದರಲ್ಲಿ ಇತರರನ್ನು ದ್ವೇಷಿಸಲು ಎಡೆಯೇ ಇಲ್ಲ."[೨೬]

ಒಬ್ಬ ವ್ಯಕ್ತಿ ತಾನು ಸಾಮಾನ್ಯ ಮನುಷ್ಯನಿಂದ ಮುಕ್ತಿಯನ್ನು ಪಡೆದು ಒಬ್ಬ ಅನುಭಾವಿಯಾದಾಗ ಅವನ ದೇಹ ಮತ್ತು ಮನಸ್ಸಿನಲ್ಲಿ ಪರಮಾತ್ಮನ ಪ್ರೀತಿಯೊಂದೇ ಇರುತ್ತದೆ ಈ ರೀತಿ ಪ್ರೀತಿ ಎನ್ನುವ ಈ ವಸ್ತು ಇಲ್ಲಿ ಪರಮಾತ್ಮ ಪ್ರೀತಿ ಎಂದರೆ ಪರಮಾತ್ಮನ ಪ್ರೀತಿ ತುಂಬಿದ ಮನುಷ್ಯನಲ್ಲಿ ದೈವತ್ವವನ್ನು ಅರಿತ ಭಗವಂತನು, ತನ್ನನ್ನು ಅರಿತುಕೊಳ್ಳಪಡಿಸುತ್ತಾನೆ. ದೇವರನ್ನು ಕಾಣಲು ದೇವರಿಂದ ಮಾತ್ರ ಎನ್ನುವ ಮಾತು ಅರ್ಥಗರ್ಭಿತವಾಗಿದ್ದು ಜ್ಯೋತಿಯಾಗಿದ್ದೇನೆ ಎನ್ನುವ ಮಾತು ಕೂಡ ಪರಿಪೂರ್ಣತೆಯನ್ನು ನೀಡುವಂತದ್ದಾಗಿದೆ.

ಪ್ರಸ್ತುತವಾಗಿ ಪ್ರಪಂಚದಲ್ಲಿ ನಡೆಯುವ ಪ್ರತಿಯೊಂದು ಕಾರ್ಯಕ್ರಮಗಳು ಸ್ವಂತದ ಬಯಕೆಯನ್ನು ಈಡೇರಿಸಿಕೊಳ್ಳಲು ಎನ್ನುವುದರಲ್ಲಿ ಸ್ವಲ್ಪವು ಸಂದೇಹವಿಲ್ಲ ಎನ್ನಬಹುದು. ಧಾರ್ಮಿಕವಾಗಿ ಮಾಡುವ ಪೂಜೆಯಾಗಿರಬಹುದು. ಸಾಮಾಜಿಕವಾಗಿ ಮಾಡುವ ಸೇವೆಯಾಗಿರ ಬಹುದು. ಮಂದಿರಗಳ ನಿರ್ಮಾಣವಾಗಿರಬಹುದು. ಸಾಂಸ್ಕೃತಿಕ ಕಾರ್ಯವಾಗಿರಬಹುದು? ಈ ಎಲ್ಲದರಲ್ಲಿಯು ಸ್ವಾರ್ಥವನ್ನು ಕಾಣಬಹುದು.

ಮನುಷ್ಯ ದೇವಸ್ಥಾನಗಳಿಗೆ ಅಲೆಯುವುದು ಯಜ್ಞಯಾಗಾದಿ, ಪೂಜೆ ಕಾರ್ಯಗಳನ್ನು ಮಾಡಿಸುವುದು ಅನ್ನದಾಸೋಹ ಮಾಡಿಸುವುದರಲ್ಲಿ ಎರಡು ತರದ ಸ್ವಾರ್ಥವನ್ನು ಕಾಣಬಹುದಾಗಿದೆ. ಒಂದು ಮಾಡಿದ ಪಾಪ ವಿಮೋಚನೆ ಇನ್ನೊಂದು ಬೇಡಿದ ಬಯಕೆಗಳ ಈಡೇರಿಕೆ. ಇವೆರಡರ ಹೊರತು ಮನುಷ್ಯನ ಮನಸ್ಸಿನಲ್ಲಿ ಬದಲಾವಣೆಗಳು ಅದು ನಿಸ್ವಾರ್ಥದ ಪರಿಶುದ್ಧ ಕಾರ್ಯಗಳನ್ನು ಕಾಣುವುದು ತುಂಬ ವಿರಳ. ಮನುಜ ತನ್ನ ಬಯಕೆಗಳ ಈಡೇರಿಕೆಗಾಗಿ

ಪರಮಾತ್ಮನಲ್ಲಿ ಮೊರೆಹೋಗುತ್ತಾನೆ ಅದು ತಕ್ಷಣದ ಸಮಯದಲ್ಲಿ ಈಡೇರಬೇಕು. ಈಡೇರದಿದ್ದರೆ ಪರಮಾತ್ಮನನ್ನೇ ಮರೆತು ಶಾಪದ ಮಳೆಯನ್ನು ಸುರಿಸುವನು ಇಂಥ ಸ್ವಾರ್ಥದ ಭಕ್ತಿಯಿಂದ ಪ್ರಯೋಜನವಿಲ್ಲವೆಂದು ತಿಳಿದು ಮನುಜ ಮತ್ತಷ್ಟು ಸ್ವಾರ್ಥಿಯಾಗುತ್ತಿದ್ದಾನೆ.

ಮನುಷ್ಯ ಪ್ರತಿ ದಿನ ದುಡಿಯುವುದು ಹಣಕ್ಕಾಗಿ ಒಂದು ದಿನದ ಕೆಲಸಕ್ಕೆ ಇಷ್ಟು ಎಂದು ಹಣವನ್ನು ಪಡೆಯಲು ದುಡಿಯುತ್ತಾನೆ. ಹಾಗೆ ತನ್ನ ಸ್ವಂತದ ಬಯಕೆಗಳನ್ನು ಪೂರ್ಣಗೊಳಿಸಿ ಕೊಳ್ಳಲು ಕಾಮನೆಗಳನ್ನು ಈಡೇರಿಸಿಕೊಳ್ಳಲು ಭಗವಂತ ನನ್ನ ಬೇಡಿಕೆ ಈಡೇರಿಸು ಎನ್ನುವ ಪೂಜೆಯ ಭಕ್ತಿ ಪರಮಾತ್ಮನಿಗೆ ಸಲ್ಲದು. ನಿಜವಾದ ಭಕ್ತಿಯಿದ್ದ ಮನುಜ ತನ್ನ ಮನದ ತುಂಬೆಲ್ಲ ನಿಸ್ವಾರ್ಥದ ಪ್ರೀತಿಯನ್ನು ಮಾತ್ರ ತುಂಬಿಕೊಂಡಿರುತ್ತಾನೆ ಹೊರತು ಅಲ್ಲಿ ಅಪೇಕ್ಷೆ ಇರುವುದಿಲ್ಲ.

ಮನುಜನಿಗೆ ಪ್ರಸ್ತುತವಾಗಿ ಜೀವಿಸಲು ಬರೀ ಸುಖವಿದ್ದರೆ ಸಾಕು ಬಡತನವನ್ನು ಒಪ್ಪಿಕೊಳ್ಳನು. ಬಡತನದಿಂದ ಬಳಲುವ ನನ್ನನ್ನು ಬಿಡಿಸಿ ಸಿರಿತನವೆಂಬ ವೈಭೋಗದ ಜೀವನವನ್ನು ಕೊಟ್ಟು ನನ್ನ ಬಯಕೆಯನ್ನು ಈಡೇರಿಸೆಂದು ಬೇಡಿಕೊಳ್ಳುವುದರಲ್ಲಿ ಎಂಥ ಸ್ವಾರ್ಥವಿದೆ. ಈ ಸ್ವಾರ್ಥದ ಭಕ್ತಿಯನ್ನು ಭಗವಂತ ಹೇಗೆ ತಾನೆ ಒಪ್ಪಿಕೊಂಡಾನು. ಮನುಜ ತನ್ನ ಬದುಕಿನ ಪ್ರತಿಯೊಂದು ಅಂಶಗಳಲ್ಲಿ ಅವಶ್ಯಕತೆಗಳಲ್ಲಿ ಸ್ವಾರ್ಥ ತುಂಬಿಕೊಂಡಿದ್ದಾನೆ.

ಪ್ರಪಂಚದಲ್ಲಿ ಜೀವಿಸುವ ಪ್ರತಿಯೊಂದು ಜೀವಿಗೆ ಒಂದು ಜೀವನದ ಪಯಣ ಉಂಟು. ಇದರಲ್ಲಿ ವಿಶೇಷವಾಗಿ ಮನುಷ್ಯನ ಬದುಕು. ಈ ಬದುಕೆಂಬ ಪಯಣ ಪ್ರಾರಂಭಿಸುವುದು ಹುಟ್ಟು, ಬಾಲ್ಯ, ಯೌವ್ವನದಿಂದ. ಮದುವೆ ಮಕ್ಕಳೆಂಬ ಸಂಸಾರದ ಸಾಗರದಲ್ಲಿ ಈಜಾಡುತ್ತ ನಡೆಸಿಕೊಂಡು ಮುನ್ನಡೆಯುವ ಜೀವನ. ಇಂಥ ಜೀವನದಲ್ಲಿ ಸುಖ - ಭೋಗಕ್ಕೆ ಮನುಷ್ಯ ಹೆಚ್ಚಿನ ಆದ್ಯತೆಯನ್ನು ಕೊಡುತ್ತಾನೆ. ಈ ಪ್ರಪಂಚದಲ್ಲಿ ಸಿಗುವ ಪ್ರತಿ ಸುಖವನ್ನು ಅನುಭವಿಸುವ ಆಸೆ ಮನುಷ್ಯನಲ್ಲಿ ಹೆಚ್ಚಿರುತ್ತದೆ.

ಭಗವಾನ್ ಬುದ್ಧರವರು ಹೇಳಿದಂತೆ ಆಸೆಯೇ ದುಃಖಕ್ಕೆ ಮೂಲ. ಇದು ತಿಳಿದೂ ಮನುಜ ತನ್ನ ಆಸೆಯನ್ನು ತೊರೆಯುವುದಿಲ್ಲ. ಪ್ರತಿ ಕ್ಷಣ ತನ್ನ ಆಸೆಯನ್ನು ಹೆಚ್ಚಿಸಿಕೊಳ್ಳುತ್ತಾನೆ ಹೊರತು ಕುಗ್ಗಿಸುವುದಿಲ್ಲ ಆಸೆ ಬಯಕೆಗಳಿಂದ ಮನುಷ್ಯನಿಗೆ ತೊಂದರೆ ಸಮಸ್ಯೆಗಳೆನಿಸಿದರೂ ಅವುಗಳನ್ನು ಬೆಂಬಿಡದೆ ಅದರಿಂದೆಯೇ ಹೊರಟು ಹೋಗುತ್ತಾನೆ. ತನ್ನ ಬಯಕೆಗಳು ಕೈಗೆಟುಕದಿದ್ದಾಗ ಆಸೆಗಳ ಪೂರೈಕೆಗಾಗಿ ದೇವರಲ್ಲಿ ಮೊರೆ ಹೋಗುತ್ತಾನೆ. ಸ್ವಾರ್ಥದ ಭಕ್ತಿಯಿಂದ ದೇವರನ್ನು ಪೂಜಿಸುತ್ತಾನೆ.

ಬಯಕೆ ಈಡೇರದಿದ್ದರೆ ದೇವರನ್ನು ಶಪಿಸುತ್ತಾನೆ. ಇಂಥ ಮನುಜನನ್ನು ನೋಡಿ ದೇವರು ಮೌನಿಯಾಗುತ್ತಾನೆ. ಇದನ್ನು ಅರಿತರೂ ಮನುಜ ಮೂರ್ಖನಂತೆ ವರ್ತಿಸುತ್ತಾನೆ.

ಈ ಲೋಕಕ್ಕೆ ಸಂಬಂಧಿಸಿದ ಸುಖಗಳನ್ನು ಅನುಭವಿಸಲು ಮನುಷ್ಯ ಎಷ್ಟೊಂದು ಹಾತೊರೆಯುತ್ತಾನೆ. ಆದರೆ ಇದರಲ್ಲಿ ಕಾಲು ಭಾಗದಷ್ಟಾದರೂ ದೇವರಿಗಾಗಿ ಹಾತೊರೆಯುವುದಿಲ್ಲ. ಈ ಎಲ್ಲ ಬಯಕೆಗಳಲ್ಲಿ ಸಾವು - ನೋವು - ದುಃಖಗಳಿವೆ ಎಂದು ತಿಳಿದರೂ ಮನುಜ ಇದರ ಆಸೆಯನ್ನು ತೊರೆಯದೆ ಬೇತಾಳನಂತೆ ಅದರ ಹಿಂದೆಯೇ ಓಡುತ್ತಾನೆ. ದುಃಖ ದುಮ್ಮಾನಗಳ ಜೊತೆಯಲ್ಲಿಯೇ ಸುಖ - ಭೋಗದ ಬಯಕೆಯನ್ನು ಈಡೇರಿಸಿಕೊಳ್ಳಲು ಹಂಬಲಿಸುವ ಮನುಜನನ್ನು ನೋಡಿ ದೇವರು ಒಮ್ಮೆ ನಕ್ಕಿರಬಹುದೆಂಬ ಪ್ರಶ್ನೆ ಗ್ರಹಿಕೆಗೆ ಬರುತ್ತದೆ.

ಪ್ರಪಂಚದ ಸುಖ - ಭೋಗಕ್ಕಾಗಿ ಪರದಾಡುವ ಮನದ ಬಯಕೆ, ಅದನ್ನು ಪಡೆಯಲೇ ಬೇಕೆಂಬ ಛಲ ಮನುಜನ ಆಸೆಗಳಿಗೆ ಇಲ್ಲಿ ಕೊನೆ ಎಂಬುದು ಇಲ್ಲ. ಈ ಕ್ಷಣಿಕ ಸುಖದಲ್ಲಿ ಏನಾದರು ಅರ್ಥವಿದೆ ಎಂದು ಗಮನಿಸಿದರೆ ಅದರಲ್ಲಿ ಸಿಗುವುದು ಬರಿ ದುಃಖ ನೋವುಗಳೇ ಹೊರತು ಸುಖದ ಸುಪ್ಪತ್ತಿಗೆಗೆ ಅಲ್ಲಿ ಕ್ಷಣಿಕದ ಜಾಗವಿದೆ. ನೆಮ್ಮದಿ ಶಾಂತಿಯ ಮಾತೆ ಅಲ್ಲಿಲ್ಲ. ಪ್ರಾಪಂಚಿಕ ಸುಖ ಭೋಗಕ್ಕೆ ಮರುಳಾದ ಮನುಜನ ಮನಸ್ಸನ್ನು ನಿಯಂತ್ರಣಕ್ಕೆ ತರಲು ಅಷ್ಟು ಸುಲಭವಲ್ಲ. ಮನುಜ ತನ್ನ ತನವನ್ನು ತಾನು ಅರಿತಾಗ ಮಾತ್ರ ಅದರ ನಿಯಂತ್ರಣ ಸಾಧ್ಯ.

ಸಂಸಾರ ಬಂಧನಗಳಲ್ಲಿ ಸಿಗದ ಸುಖ - ಭೋಗ ಇನ್ನೊಂದು ಬಂಧನದಲ್ಲಿ ಸಿಗುತ್ತದೆಂದು ಈ ಮನುಜನಿಗೇಕೆ ಅರ್ಥವಾಗುವುದಿಲ್ಲವೆಂಬುದೊಂದು ಪ್ರಶ್ನೆ. ಇದು ಅರ್ಥವಾಗದು ಯಾಕೆಂದರೆ ಸಾಂಸಾರಿಕ ಜೀವನ ತೊರೆದು ಸುಖವಿಲ್ಲದ ಜೀವನ ನಡೆಸುವ ಇಚ್ಛೆ ಮನುಜನಲ್ಲಿಲ್ಲ. ಅವನು ತನ್ನ ಸರ್ವಾಂಗವನ್ನು ಐಹಿಕ ಭೋಗದೊಂದಿಗೆ ವಿಲೀನವಾಗಿಸಿಕೊಂಡಿರುತ್ತಾನೆ. ಈ ಜೀವನದಿಂದ ಮನುಜನಿಗೆ ಸಂಸಾರಿಕವಾಗಿ ತನ್ನ ಕುಟುಂಬದೊಂದಿಗೆ ನಡೆಸುವ ಬದುಕೆಂಬ ಪಯಣದಲ್ಲಿ ಏನಾದರು ಆಘಾತವುಂಟಾದರೆ ಅವನು ತನ್ನನ್ನು ತಾನು ಏನೆಂದು ಅರಿಯುವ ಸಮಯ ಬಂದು ಜೀವನದಲ್ಲಿ ಏಳುಬೀಳುಗಳನ್ನು ಕಂಡು ಸಂಸಾರ ಸಾಗಿಸಲು ಉಸಿರುಕಟ್ಟಿದ ವಾತಾವರಣ ಉಂಟಾದಾಗ ಅವನು ವಿರಾಗಿಯಾಗಿ ಸಂಸಾರ ಬಂಧನದಿಂದ ದೂರವಾಗುತ್ತಾನೆ.

ಈ ಬಂಧನದಿಂದ ಮುಕ್ತಿಯನ್ನು ಪಡೆಯಲು ಇಚ್ಛಿಸುತ್ತಾನೆ. ಮನುಷ್ಯನಾದವನು ಐಹಿಕ ಸುಖ ಭೋಗಗಳಲ್ಲಿ ಅರ್ಥವನ್ನು ಕಂಡುಕೊಳ್ಳುವುದರಲ್ಲಿ ಅವನು ಅಂಧನಾಗಿರುತ್ತಾನೆ. ಇದರ ಅರಿವು ಆಗಬೇಕಾದರೆ ಅವನು ತನ್ನ ಬದುಕಿನಲ್ಲಿ ಅನೇಕ ಸಮಸ್ಯೆಗಳನ್ನು ಕಾಣುತ್ತಾನೆ. ಅದನ್ನು ಮೆಟ್ಟಿ ನಿಂತು ಜೀವನವನ್ನು ಸಾಗಿಸುತ್ತಾನೆ. ಐಹಿಕ ಸುಖದ ಸುತ್ತ ಸುಳಿ ಇದೆ ಎಂದು ಅವನ ಅರಿವಿಗೆ ತಕ್ಷಣಕ್ಕೆ ಬರದಿದ್ದರೂ ಬದುಕಿನ ಅನುಭವದಿಂದ ಒಂದು ದಿನ ತಿಳಿಯುತ್ತದೆ.

ಹುಟ್ಟು, ಬಾಲ್ಯ, ಯೌವನ, ವೃದ್ಧಾಪ್ಯ, ಮದುವೆ, ಮಕ್ಕಳು, ಸಂಸಾರ, ಸಾವು, ನೋವು ಇವುಗಳಿಂದ ಮನಸ್ಸಿಗೆ ಸೂಕ್ಷ್ಮ ಮನಸ್ಸಿಗೆ ಆಘಾತವುಂಟಾಗಿ ಚೇತರಿಸಿಕೊಳ್ಳಲು ಶಕ್ತಿ ಇಲ್ಲದಂತಾಗುತ್ತದೆ. ಜೀವನದ ಬಗ್ಗೆ ಮನುಷ್ಯ ಜನ್ಮ ಸಂಬಂಧಗಳ ಬಗ್ಗೆ ಜಿಗುಪ್ಸೆ ಬರುತ್ತದೆ.

ನೋವಿನ ಆಘಾತಕ್ಕೊಳಾದ ಮನಸ್ಸು ದೇಹ ಎಲ್ಲದರಿಂದ ಮುಕ್ತಿಯನ್ನು ಪಡೆಯಲಿಚ್ಚಿಸುತ್ತದೆ. ಆ ಹಂತವು ಮನುಷ್ಯನನ್ನು ವಿರಾಗಿಯನ್ನಾಗಿ ಮಾಡಿ ಐಹಿಕ ಸುಖಗಳಲ್ಲಿ ಯಾವ ಅರ್ಥವಿಲ್ಲ ಈ ಎಲ್ಲ ಬಂಧನಗಳಿಂದ ಮುಕ್ತಿ ಬೇಕೆನಿಸುವ ಸಂದರ್ಭ, ಇಚ್ಛೆ ಮನುಷ್ಯನ ಮನಸ್ಸಿಗೆ ಬರುತ್ತದೆ.

ಸುಖಭೋಗಗಳಲ್ಲಿ ಅರ್ಥವಿಲ್ಲ. ಮತ್ತು ಈ ಸಾಂಸಾರಿಕ ಬಂಧನಗಳಿಂದ ಹೇಗೆ ಮುಕ್ತಿ ಪಡೆಯುವ ಬಯಕೆ ಬರುತ್ತದೆನ್ನುವುದಕ್ಕೆ ಒಂದು ಸಂದರ್ಭವಿದೆ.

ದಿ. ರಾಮಕೃಷ್ಣ ಪರಮಹಂಸರ ವಿಧವಾ ಪತ್ನಿ ಮಾತೆ ಶಾರದಾಮಣಿದೇವಿ ಅವರು ನಿಧನರಾದ ಬಳಿಕ ಶಾರದಾನಂದರು ಐಹಿಕ ಭೋಗ, ಸುಖ ಅಷ್ಟೇ ಅಲ್ಲ, ತಮ್ಮ ಸುತ್ತಮುತ್ತಲಿನ ಪ್ರಸ್ತುತ ಪ್ರಪಂಚವನ್ನೂ ಮರೆತು ಕ್ರಮೇಣ ದಿನದ ಬಹುಭಾಗವನ್ನು ಧ್ಯಾನ, ಮೌನ ಹಾಗೂ ಆಧ್ಯಾತ್ಮಿಕ ಚಿಂತನೆಯಲ್ಲಿಯೇ ಕಳೆಯತೊಡಗಿದರು.

ಪ್ರಪಂಚದಲ್ಲಿನ ಸುಖ ಭೋಗವು, ಹುಟ್ಟು ಸಾವು, ನೋವಿನ ಜೀವನದಲ್ಲಿ ಅರ್ಥವನ್ನು ಕಳೆದುಕೊಂಡು ಕೌಟುಂಬಿಕ ಬಂಧನದಿಂದ ಮುಕ್ತಿ ಪಡೆಯುವುದರಲ್ಲಿ ಅರ್ಥವು ಕಾಣಸಿಗುತ್ತದೆ.

ಭಗವಂತನ ಸೃಷ್ಟಿಯಾದ ಈ ಪ್ರಪಂಚವನ್ನು ಅದರಲ್ಲಿರುವ ಪ್ರೀತಿಯೊಂದು ಜೀವಿಯನ್ನು ಸೃಷ್ಟಿಸಿರುವುದು ಪರಮಾತ್ಮ. ಆತನ ಸೃಷ್ಟಿಯಿಂದಲೇ ಪ್ರಾಣಿ, ಪಕ್ಷಿ, ಮರ, ಗಿಡ, ಮನುಜ ಪ್ರತಿಯೊಂದು ಪರಮಾತ್ಮನ ಸೃಷ್ಟಿಯಿಂದಲೇ ಎನ್ನುವುದು ನಿಜ. ಅದನ್ನು ಸೃಷ್ಟಿಸಿ ಮತ್ತು ಅವುಗಳನ್ನು ರಕ್ಷಿಸುವ ಜವಾಬ್ದಾರಿ ಕೂಡ ಪರಮಾತ್ಮನಿಗೆ ಸೇರಿರುವುದಾಗಿದೆ.

ಸೃಷ್ಟಿಯ ಪ್ರತಿವಸ್ತುವಿನಲ್ಲೂ ಪರಮಾತ್ಮನಿದ್ದಾನೆ ಎನ್ನುವ ನಂಬಿಕೆಯಿದೆ. ಜನಸಾಮಾನ್ಯರಲ್ಲಿ ಕೆಲವರ ನಂಬಿಕೆಯೂ ಆಗಿದೆ. ಅರಣ್ಯ, ಗಿಡಮರಗಳಲ್ಲೂ ಪರಮಾತ್ಮನನ್ನು ಕಾಣಬಹುದಾಗಿದೆ. ಇದು ನಿಜವೆಂದು ನಂಬಿಕೆಯಿದೆ. ಇದರ ಸೃಷ್ಟಿ ಕರ್ತನು ಪರಮಾತ್ಮನಾಗಿರುವಾಗ ಅಲ್ಲಿ ಇದ್ದಾನೆಂದು ನಂಬುವುದ ನಂಬಿಕೆಯಾಗಿದೆ. ಪ್ರಪಂಚದ ಪ್ರತಿ ನಿಸರ್ಗದಲ್ಲಿಯೂ ಭಗವಂತನಿದ್ದಾನೆನ್ನುವುದು ನಂಬಿಕೆಯ ವಿಷಯ ಪರಮಾತ್ಮ ತಾನು ಸೃಷ್ಟಿಸಿದ ಪ್ರತಿ ವಸ್ತುವಿನಲ್ಲಿ ತಾನು ನೆಲೆಸುವ ಅಧಿಕಾರವನ್ನು ಹೊಂದಿದ್ದಾನೆ. ಮನುಜನ ರಕ್ಷಣೆಯು ಕೂಡ ಪರಮಾತ್ಮನಿಗೆ ಸೇರಿರುವ ವಿಷಯವಾಗಿದೆ. ಪರಮಾತ್ಮನ ಅಧೀನದಲ್ಲಿದ್ದರೂ ಮನುಜ ತಾನು ತನ್ನನ್ನು ಮರೆತು. ಕೆಲವು ಕ್ಷಣ ಭಗವಂತನನ್ನು ಮರೆತು ಮಾಡಬಾರದ ಅನಾಹುತುಗಳನ್ನು ಮಾಡುತ್ತಾನೆ. ಮನುಜ ಮನುಜನೊಂದಿಗೆ ದ್ವೇಷಗಳನ್ನು ಬೆಳೆಸಿಕೊಂಡಿರುತ್ತಾನೆ. ಕುಲ, ಜಾತಿ, ಮೇಲು, ಕೀಳು ಎಂಬ ಮೋಹದಲ್ಲಿ ಮುಳುಗಿ ಅಹಂಕಾರದ ಅಂಧಕಾರದಲ್ಲಿ ಬಿದ್ದು ಬೆಳಕಿದ್ದರೂ ಅದನ್ನು ನೋಡದೆ ಕತ್ತಲನ್ನೇ ಬೆನ್ನಟ್ಟಿ ಹೋಗುವ ಮನುಜನನ್ನು ಕಂಡರೆ ಪರಮಾತ್ಮನು ಏನನ್ನಬೇಕು. ಕನಕದಾಸರು ತಮ್ಮ ಕಾವ್ಯದಲ್ಲಿ ಇದನ್ನು ಹೀಗೆ ವಿವರಿಸಿದ್ದಾರೆ.

"ತಲ್ಲಣಿಸದಿರು ಕಂಡ್ಯ ತಾಳು ಮನವೇ
ಬಲ್ಲದನು ಕಾಗಿನೆಲೆಯಾದಿಕೇಶವರಾಯ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ"೨೮

ಮನುಜನ ಮನಸ್ಸಿನ ತಲ್ಲಣ ಯಾವಾಗಲು ಒಂದೊಂದು ರೀತಿಯಲ್ಲಿ ತೇಲಾಡುತ್ತಿರುತ್ತದೆ ಲೌಕಿಕ ಭಾವನೆಗಳು ಅದರಲ್ಲಿನ ಮಿಡಿತಗಳನ್ನು ಮನುಜನಲ್ಲಿ ಕಂಡ ಪರಮಾತ್ಮನು ಅದರಿಂದ ರಕ್ಷಣೆಯನ್ನು ಕೊಡುತ್ತಾ ಸಹನೆ ಶಾಂತಿಯಂಬ ವಸ್ತುವನ್ನು ಇವರ ಜೊತೆಗಿಟ್ಟರೂ ಅದನ್ನು ಉಪಯೋಗಿಸದೆ ಮನುಜನು ನಾನು ಎಂಬ ಪದದ ಜೊತೆ ತನ್ನನ್ನೇ ಸೇರಿಸಿಕೊಳ್ಳುತ್ತಾನೆ. ಇದರ ಅರಿವಾದಾಗ ಪರಮಾತ್ಮ ಈ ತನು ಮನವೆಲ್ಲ ನಿನ್ನದು ರಕ್ಷಿಸುವ ಹೊಣೆ ನಿನ್ನದೆಂದು ಶರಣಾಗುತ್ತಾನೆ.

ಮನುಜನ ದೇಹದಲ್ಲಿರುವ ಒಳ ಮನಸ್ಸೆಂಬುದು ಚಾಂಚಲ್ಯಯಾಗಿರುವಂಥದ್ದು. ಮನುಜ ಏನೇ ಕೆಲಸ ಕಾರ್ಯಗಳು ಮಾಡಿದರೆ ಅವನ ಮನಸ್ಸು ಒಪ್ಪಿಕೊಳ್ಳುವಂತಿರಬೇಕು. ಒಮ್ಮೆ ಮನಸ್ಸು ಒಪ್ಪಿಗೆ ಕೊಟ್ಟರೆ ಸ್ವಲ್ಪ ಹೊತ್ತಿನ ನಂತರ ಕೊಡದು. ಈ ಮನಸ್ಸಿನಲ್ಲಿ ಅನೇಕ ಆಲೋಚನೆಗಳು ಮನೆ ಮಾಡಿರುತ್ತವೆ. ಒಮ್ಮೆ ವಿಕೃತವಾಗಿದ್ದರೆ ಒಮ್ಮೆ ಸಹನೆಯಿಂದ ಕೆಲಸ ಮಾಡುತ್ತದೆ. ವಿಕೃತ ಮನಸ್ಸಿನಲ್ಲಿರುವ ಆಲೋಚನೆಗಳು ದೇಹ ಸುಖದ ಕೆಲಸಗಳ, ವೈಭೋಗ ಜೀವನ, ದೇವರ ನಂಬಿಕೆಯಲ್ಲಿ ಅಪನಂಬಿಕೆ, ಇಂಥ ಆಲೋಚನೆಯಲ್ಲೇ ಸದಾ ಮುಳುಗಿರುವ ಮನಸ್ಸು ಲೌಕಿಕವಾಗಿರುವಂಥ ಸುಖವನ್ನು ಬಿಟ್ಟು ಪರಮಾತ್ಮನ ಸೇವೆಗಾಗಿ ವಾಲುವುದು ಸ್ವಲ್ಪ ಕಷ್ಟದ ವಿಷಯವಾಗಿ ಕಾಣುತ್ತದೆ.

ಮನಸ್ಸು ಕೌಟುಂಬಿಕ ಜೀವನ ಅದರೊಂದಿಗಿನ ಸುಖವನ್ನು ಬಯಸುವಾಗ ಅಲೌಕಿಕವಾಗಿ ಬದುಕುವ ದೇಹ ಸಂಬಂಧದ ಸುಖಗಳೊಂದಿಗೆ ಬದುಕ ಬಯಸುವ ಮನಸ್ಸು ಇದರಿಂದ ಆಚೆಗಿನ ಬದುಕನ್ನು ನೋಡುವ ಬಗೆ ಹೇಗೆ?. ಈ ಬದುಕನ್ನು ಮರೆತು ಮುನ್ನಡೆಯುವ ದಾರಿ ಯಾವುದೆಂಬುದು ಯೋಚಿಸುವ ಮನಸ್ಸು ಪರಮಾತ್ಮನ ಪ್ರೀತಿಯನ್ನು ಕಂಡುಕೊಳ್ಳುವ ಅದನ್ನು ಪಡೆಯುವ ರೀತಿಯನ್ನು ಅರಿತರೆ ಅದರಲ್ಲಿರುವ ಸುಖ ಮತ್ತೊಂದಿಲ್ಲ.

ಮನುಜ ಎಷ್ಟೇ ದುರ್ಬಲನಾಗಿದ್ದರೂ ಅವನು ಮನಸ್ಸು ಮಾಡಿದರೆ ಸಾಧನೆಯ ಮೆಟ್ಟಿಲನ್ನು ಹತ್ತಿ ಪರಮಾತ್ಮನ ಪಾದ ಸ್ಪರ್ಶಮಾಡಬಹುದು.

ಮನಸಿದ್ದರೆ ಮಾರ್ಗ ಎಂಬ ಗಾದೆ ಮಾತಿನಂತೆ ಮನುಷ್ಯ ಮನಸ್ಸು ಮಾಡಬೇಕು. ಅವನಿಂದ ಆಗದಿರುವ ಕೆಲಸಗಳನ್ನು ಮಾಡೇ ಮಾಡುತ್ತೇನೆನ್ನುವ ನಂಬಿಕೆ ಅವನು ತನ್ನಲ್ಲಿ ತಾನು ಅಂದುಕೊಂಡಾಗ ಮಾತ್ರ ಪರಮಾತ್ಮನನ್ನು ಕಾಣುವ ಯೋಗವನ್ನು ಪಡೆಯುತ್ತಾನೆ. ದೈಹಿಕ ಸುಖವನ್ನು ಬಯಸುವ ಅದರ ಜಾಲದಲ್ಲಿ ಸಿಕ್ಕಿ ಒದ್ದಾಡುತ್ತಿರುವ ಮನುಷ್ಯ ತನ್ನ ಮನಸ್ಸನ್ನು ಶುದ್ಧ ಮಾಡಿಕೊಂಡು ಸಹನೆಯಿಂದ ಪರಮಾತ್ಮನ ಸೇವೆ ಮಾಡುತ್ತ ಭಗವಂತನ

ಸ್ಮರಣೆಯಲ್ಲಿದ್ದು ಪ್ರತಿ ದಿನ ವಂದಿಸುತ್ತ. ತನ್ನದೇಹದಲ್ಲೊಂದು ಆತ್ಮ ಇದೆ. ಪರಮಾತ್ಮನೂ ಆತ್ಮ ಸ್ವರೂಪಿಯಾಗಿದ್ದಾನೆ. ಈ ಆತ್ಮವನ್ನು ಪರಿಶುದ್ಧ ಮಾಡಿಕೊಂಡು ಮನಸ್ಸಿನ ತುಂಬ ಪರಮಾತ್ಮನ ಪ್ರೀತಿಯನ್ನು ತುಂಬಿಕೊಂಡು ಭಗವಂತನ ಕೀರ್ತನೆಯನ್ನು ಕೇಳುವುದರಿಂದ ಮನುಷ್ಯನಲ್ಲಿರುವ ಮನಸ್ಸು ಪರಮಾತ್ಮನ ಪ್ರೀತಿಗೆ ತನ್ನನ್ನು ಅರ್ಪಿಸಿಕೊಳ್ಳುತ್ತದೆ. ಆಗ ಮನುಷ್ಯನ ವಿಕೃತ ಮನಸ್ಸು ಬಯಸುವ ಲೌಕಿಕ ಸುಖದಿಂದ ಪರಮಾತ್ಮನ ಪ್ರೀತಿಯ ಕಡೆಗೆ ವಾಲುವುದು.

ಮನುಷ್ಯನ ಪ್ರತಿನಿತ್ಯದ ಕೆಲಸಕಾರ್ಯಗಳು ಅವನ ಮನಸ್ಸಿನ ಮೇಲೆ ಅವಲಂಬಿತವಾಗಿದೆ. ಮನುಷ್ಯ ತನ್ನ ಲೌಕಿಕದ ಜೀವನದಿಂದ ದೂರಸರಿಯುವ ಬಯಕೆಯನ್ನು ಮಾಡಿದರೆ ಅದು ಅವನ ಮನಸ್ಸಿನಿಂದ ಮಾತ್ರ ಸಾಧ್ಯ ಮನುಷ್ಯ ತನ್ನ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡಾಗ ಭಗವಂತನ ಕಡೆವಾಲಿದಾಗ ಲೌಕಿಕ ಬಂಧನದಿಂದ ಮುಕ್ತಿ ಸಿಕ್ಕು ಪರಮಾತ್ಮನ ಪ್ರೀತಿಗೆ ಪಾತ್ರನಾಗಬಹುದಾಗಿದೆ.

ಭಗವಂತ ಸೃಷ್ಟಿಸಿದ ಈ ಭೂಮಿಯಲ್ಲಿ ಅನೇಕ ಜೀವಿಗಳು ಜೀವಿಸುತ್ತಿವೆ. ಇವೆಲ್ಲದರಲ್ಲಿ ಮನುಜನಿಗೆ ವಿಶೇಷವಾದ ಜೀವನವನ್ನು ಪರಮಾತ್ಮಕೊಟ್ಟಿದ್ದಾನೆ. ಇದನ್ನು ಮನುಜ ವ್ಯರ್ಥವಾದ ರೀತಿಯಲ್ಲಿ ಬೆಳಸಿಕೊಳ್ಳುತ್ತಿದ್ದಾನೆ.

ಮನುಜನಾದವನು ದೇಹದ ಬಾಹ್ಯಸೌಂದರ್ಯಕ್ಕೆ ಬಲಿಯಾಗಿದ್ದಾನೆ. ಅವನ ದೇಹದ ಒಳಮನಸ್ಸಿನ ಸೌಂದರ್ಯವನ್ನು ವೀಕ್ಷಿಸುವ ಬುದ್ಧಿಯನ್ನು ಇದ್ದು ಕಳೆದುಕೊಂಡಿದ್ದಾನೆ. ಮನುಷ್ಯ ಪ್ರಪಂಚ ಮತ್ತು ಅದರ ಸೃಷ್ಟಿ ಇದರಲ್ಲಿ ಆಗು ಹೋಗುಗಳನ್ನು ತನ್ನಲ್ಲಿರುವ ಆತ್ಮ, ಮನಸ್ಸನ್ನು ದೇಹದ ಬಾಹ್ಯ ಸೌಂದರ್ಯದೊಂದಿಗೆ ವೀಕ್ಷಿಸುತ್ತಿದ್ದಾನೆಯೇ ಹೊರತು ಒಳಗಿನ ಮನಸ್ಸಿನಿಂದ, ಅಂತರಾತ್ಮದಿಂದಲ್ಲ. ಇದರಿಂದ ಅವನಲ್ಲಿ ಅಹಂ, ನಾನು, ನನ್ನದು, ಎಲ್ಲ ನನ್ನಿಂದಲೇ ಎಂಬ ಅಂಧಕಾರದಲ್ಲಿದ್ದು ವೈಭವ ಜೀವನದಲ್ಲಿ ತೇಲುತ್ತಿದ್ದಾನೆ.

ಭಗವಂತ ಕೊಟ್ಟಿರುವ ಈ ಜೀವನ ಈ ಭೂಮಿ ಮೇಲೆ ಶಾಶ್ವತವಾದುದಲ್ಲ. ಇಲ್ಲಿ ಜೀವಿಸುವವರೆಗೆ ಆತ್ಮ ನಿವೇದನೆ ಮಾಡಿಕೊಂಡು ಸಹನೆ ಶಾಂತಿಯಿಂದ ಬಾಳಿ ಬದುಕಬೇಕೆಂಬುದು ಮನುಜನು ಅರಿತು ಅರಿಯದವನಾಗಿದ್ದಾನೆ. ವ್ಯಾಮೋಹ, ಮದ, ಅಹಂಗಳಿಂದ ಮಂದನಾಗಿ ಹುಸಿ ಭಕ್ತಿ, ಹುಸಿ ನಗುವಿನ ನಾಟಕದಲ್ಲಿ ಜೀವಿಸುತ್ತಿದ್ದಾನೆ.

ತಾನು ಜೀವಿಸುವ ಪ್ರದೇಶದ ಸುತ್ತಮುತ್ತ ತನ್ನಂತೆಯೆ ಇತರರು ಇದ್ದಾರೆ. ಅವರು ತನ್ನಂತೆಯೆ ಮನುಷ್ಯ ಜೀವಿಗಳು ಅವರೊಂದಿಗೆ ತನ್ನ ಸಂಬಂಧವನ್ನು ಹೇಗೆ ಇಟ್ಟುಕೊಂಡು ಬಾಳಬೇಕೆಂಬ ಯೋಚನೆಯು ಮಾಡದೆ ಪ್ರತಿಯೊಬ್ಬ ಮನುಜನು ಬಾಳಿ ಬದುಕುತ್ತಿದ್ದಾನೆ. ವೈಭವಯುತ ಜೀವನವನ್ನು ಬಯಸಿ ಬಾಳುತ್ತಿದ್ದಾನೆ. ಆತ್ಮದ ದೃಷ್ಟಿಯಲ್ಲಿ ಸಮಾಜವನ್ನು ನೋಡಲು ಬಯಸುತ್ತಿಲ್ಲ.

ಪ್ರಪಂಚದ ಸೃಷ್ಟಿಯಲ್ಲಿ ಮಾನವನ ಜನ್ಮವನ್ನು ವಿಶೇಷವಾಗಿ ಸೃಷ್ಟಿಸಿದ್ದಾನೆ. ಪರಮಾತ್ಮ ಅದನ್ನು ಆತ್ಮದ ದೃಷ್ಟಿಯಿಂದ ದೂರವಿಟ್ಟು ದೇಹ ಸೌಂದರ್ಯದ ದೃಷ್ಟಿಯಿಂದ ಇದನ್ನು ಹಾಳು ಮಾಡಿಕೊಳ್ಳುತ್ತಿದ್ದಾರೆ. ಅದಕ್ಕೆ ಪುರಂದರದಾಸರು ಹೀಗೆ ಹೇಳಿದ್ದಾರೆ. ಮಾನವ ಜನ್ಮ ದೊಡ್ಡದು, ಇದ ಹಾನಿ ಮಾಡಲುಬೇಡಿ ಹುಚ್ಚಪ್ಪಗಳಿರಾ.

ಭಗವಂತ ಮನುಷ್ಯ ಜನ್ಮಕ್ಕೆ ನೀಡಿರುವ ವಿಶೇಷವಾದ ಜೀವನವನ್ನು ಮನುಷ್ಯ ಆತ್ಮ ನಿವೇದನೆಯನ್ನು ಮಾಡಿಕೊಂಡು ಅವನಲ್ಲಿರುವ ಅರಿಷಡ್ವರ್ಗಗಳನ್ನು ಬದಿಗಿರಿಸಿ ಆತ್ಮದ ದೃಷ್ಟಿಯಲ್ಲಿ ವಿಶ್ವವನ್ನು ವಿಶ್ವದ ಸೃಷ್ಟಿಯನ್ನು ನೋಡುತ್ತ ಜ್ಞಾನವನ್ನು ಪಡೆದುಕೊಂಡು ಪರಮಾತ್ಮನ ಪ್ರೀತಿಗೆ ಸಾಮಿಪ್ಯಕ್ಕೆ ಪಾತ್ರನಾಗುವ ಸಾಧನೆಯನ್ನು ಸಿದ್ಧಿಸಿಕೊಳ್ಳಬೇಕು. ದೇಹ ಸೌಂದರ್ಯಕ್ಕೆ ಹೆಚ್ಚಿನ ಒಲವನ್ನು ತೋರುವ ಬದಲು ಆತ್ಮ ಜ್ಞಾನಕ್ಕೆ ತೋರಬೇಕು.

ದೇಹವೆಂಬ ದೇಗುಲದಲ್ಲಿರುವ ಮನಸ್ಸು ಮತ್ತು ಆತ್ಮಗಳು ಜ್ಞಾನವೆಂಬ ಅರಿವಿನ ಜೊತೆ ಸೇರಿದಾಗ ಪರಮಾತ್ಮನ ಸಾನಿಧ್ಯದಲ್ಲಿ ಸರಳವಾದ ಸಾಮೀಪ್ಯ ಪಡೆಯಲು ಅನುವಿರುತ್ತದೆ. ಪರಮಾತ್ಮ ಬಯಸಿದಂತೆ ಮನುಜ ತನ ಜ್ಞಾನ ಬಲದಿಂದ ತನ್ನ ದೇಹದ ಒಳಮೈಯನ್ನು ಶುದ್ಧೀಕರಿಸಿಕೊಳ್ಳುವುದು ಅವಶ್ಯ.

**ಕೊನೆ ಟಿಪ್ಪಣಿಗಳು**

೧. ರಹಮತ್ ತರೀಕೆರೆ(ಸಂ), **ಧರ್ಮ ವಿಶ್ವಕೋಶ,** ಪುಟ ೨,

೨. ಎನ್.ಎಂ. ಗಿರಿಜಾಪತಿ, **ವಚನ ರತ್ನತ್ರಯರು,** ಪುಟ ೩೪

೩. ಚಿತ್ಕಲಾ ರವಿ, **ಅನುಭಾವ ಜ್ಯೋತಿಗಳು,** ಪುಟ ೩೨

೪. ಡಾ. ಎಚ್. ತಿಪ್ಪೇರುದ್ರಸ್ವಾಮಿ, **ಶರಣರ ಅನುಭಾವ ಸಾಹಿತ್ಯ,** ಪುಟ ೧೧೭.

೫. ಅದೇ, ಪುಟ ೧೧೦.

೬. ಡಾ. ಚನ್ನಕ್ಕ ಪಾವಟೆ; **ವಚನ ಸಂಗಮ,** ಪುಟ ೧೪೦.

೭. ನಾರಾಯಣ ಶಾಸ್ತ್ರಿ, **ಸಾಧುಸಂತರು,** ಪುಟ ೭.

೮. ಅದೇ, ಪುಟ ೩೭, ೩೮.

೯. ಅದೇ, ಪುಟ ೮೨, ೮೩.

೧೦. ಅದೇ, ಪುಟ ೧೨೦.

೧೧. ಅದೇ, ಪುಟ ೧೫೪, ೧೫೫.

೧೨. ಷಣ್ಮುಖಯ್ಯ ಅಕ್ಕೂರ ಮಠ, **ಸೂಫಿ ಮತ್ತು ಶರಣರ ಅನುಭಾವ ಪಥ,** ಪುಟ ೨೩.

೧೩. ಅದೇ, ಪುಟ ೨೪.

೧೪. ಅದೇ, ಪುಟ ೨೪.

೧೫. ಅದೇ, ಪುಟ ೨೪.

೧೬. ಅದೇ, ಪುಟ ೨೫.

೧೭. ನಾರಾಯಣ ಶಾಸ್ತ್ರಿ, **ಸಾಧು ಸಂತರು,** ಪುಟ ೭೯.

೧೮. ಅದೇ, ಪುಟ ೧೨೫.

೧೯. ಡಾ. ಕೆ. ಗೋಕುಲನಾಥ, **ಶ್ರೀ ವ್ಯಾಸರಾಯರು,** ಪುಟ ೨೮.

೨೦. ನಾರಾಯಣ ಶಾಸ್ತ್ರಿ, **ಸಾಧು ಸಂತರು,** ಪುಟ ೧೦೦.

೨೧. ರಹಮತ್ ತರೀಕೆರೆ(ಸಂ), **ಧರ್ಮ ವಿಶ್ವಕೋಶ,** ಪುಟ ೭.

೨೨. ಯು.ಆರ್. ಅನಂತಮೂರ್ತಿ, ವೀರಶೈವ ಧರ್ಮ ದರ್ಶನ, ಸಂಪುಟ - ೧, ಪುಟ ೪೧೮.

೨೩. ಅದೇ, ಪುಟ ೪೨೩.

೨೪. ಮ.ಸು. ಕೃಷ್ಣಮೂರ್ತಿ, **ಸೂಫಿ ಪ್ರೇಮ ಕಾವ್ಯ,** ಪುಟ ೧.

೨೫. ಅದೇ, ಪುಟ ೧.

೨೬. ಅದೇ, ಪುಟ ಬಿನ್ನಹ.

೨೭. ಶ್ರೀ ಎಸ್.ವ್ಹಿ. ಪಾಟೀಲ್ ಗುಂಡೂರು, **ಶ್ರೀ ಕನಕದಾಸರು,** ಪುಟ ೧೩.



ಅಧ್ಯಾಯ : ಮೂರು

# ಕನ್ನಡ ಸಾಹಿತ್ಯದಲ್ಲಿ ಅನುಭಾವ ಪರಂಪರೆ

"ಮನುಷ್ಯ ಕುಲಂ ತಾನೊಂದೆ ವಲಂ" ಎಂಬ ವಿಶಾಲ ಮನೋಭಾವವನ್ನು ಪ್ರಕಟಿಸಿದ ಕನ್ನಡ ಸಾಹಿತ್ಯ ಎಲ್ಲಾ ಧರ್ಮಗಳನ್ನು, ಪಂಥಗಳನ್ನು ಸಮಾನವಾಗಿ ಕಂಡಿದೆ. ಪ್ರಾಚೀನ ಕಾಲದಿದಲೂ ಕನ್ನಡ ಸಾಹಿತ್ಯದ ಮೇಲೆ ಧರ್ಮ ತನ್ನದೇಯಾದ ಪ್ರಭಾವವನ್ನು - ಪ್ರೇರಣೆಯನ್ನು ಬೀರಿದೆ. ಶರಣರು, ಸೂಫಿಗಳು ಹೀಗೆ ಇನ್ನಿತರ ಕವಿವರ್ಯರು, ಮಹಾಮಹಿಮರು ಆಧ್ಯಾತ್ಮಿಕ ಜೀವನದ ಬಗೆಗಿನ ಸಾಹಿತ್ಯಗಳನ್ನು ರಚಿಸಿದರು. ಆ ಮೂಲಕ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ಅನುಭಾವ ಪರಂಪರೆಯ ಮೂಲಕ ಜನಸಾಮಾನ್ಯರ, ಭಕ್ತರ ಜೀವನ - ಪಾನಗೊಳಿಸಿದರು ಎಂದು ಹೇಳಿದರೆ ತಪ್ಪಾಗಲಾರದು. ವಚನ ಸಾಹಿತ್ಯ ಜನಸಾಮಾನ್ಯರ ಅಂಕುಡೊಂಕುಗಳನ್ನು ನೇರವಾಗಿ ವಿಡಂಬಿಸಿ ಸರಿದಾರಿಗೆ ತರುವ ಪ್ರಯತ್ನ ಮಾಡಿರುವುದನ್ನು ಕಾಣಬಹುದು. ಸೂಫಿ ಸಂತರು ಮಹಾನ್ ಪುರುಷರ ಜೀವನವನ್ನಾಧರಿಸಿದ ಕಾವ್ಯಗಳನ್ನು ರಚಿಸಿ ಭಕ್ತರನ್ನು ಸರಿದಾರಿಗೆ, ಆಧ್ಯಾತ್ಮದೆಡೆಗೆ ಸೆಳೆಯುವಲ್ಲಿ ಪ್ರಭಾವ ಬೀರಿದರು. ಜೈನ ಸಾಹಿತ್ಯ ಆರಂಭದಿಂದಲೂ ಅಹಿಂಸಾತ್ಮಕ ಜೀವನದೆಡೆಗೆ ಜನರನ್ನು ಒಲಿಸುವಲ್ಲಿ ಯಶಸ್ವಿಯಾಗಿರುವುದು ಕಂಡು ಬಂದಿದೆ. ಹೀಗೆ ಕನ್ನಡ ಸಾಹಿತ್ಯದಲ್ಲಿ ಅನುಭಾವ ಪರಂಪರೆ ನಿರಂತರವಾಗಿರುವುದನ್ನು ಕಾಣಬಹುದಾಗಿದೆ.

ಅಕ್ಕಮಹಾದೇವಿ, ಅಲ್ಲಮಪ್ರಭು, ಅಮುಗೆರಾಯಮ್ಮ, ಅಯ್ದಕ್ಕಿ ಲಕ್ಕಮ್ಮ, ಬಸವಣ್ಣ ಮುಂತಾದ ಶರಣರ ವಚನಗಳಲ್ಲಿ ನೇರ ನುಡಿ, ದಿಟ್ಟ ನಡೆ, ಡಾಂಭಿಕತೆಯಿಲ್ಲದ ಭಕ್ತಿಯನ್ನು ಕಾಣಬಹುದಾಗಿದೆ. ಶರಣರು ತಮ್ಮ ಜೀವನವನ್ನು ನಡೆಸಲು ಅನೇಕ ಕಾಯಕಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಇವರೆಲ್ಲ ಒಂದೇ ಕಾಯಕದಲ್ಲಿ ತಮ್ಮ ಜೀವನವನ್ನು ತೊಡಗಿಸಿಕೊಂಡವರಲ್ಲ. ಕೆಲವರು ಲೌಕಿಕ ಬದುಕಿನಿಂದ ತಮ್ಮ ಜೀವನದಲ್ಲಿ ವೈರಾಗ್ಯವನ್ನು ಕಂಡು ಅದನ್ನು ತೊರೆದು ಆಧ್ಯಾತ್ಮದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಈ ಆಧ್ಯಾತ್ಮದ ಮಾರ್ಗ ಅವರನ್ನು ಲೌಕಿಕ ಬದುಕಿನಿಂದ ಮುಕ್ತಿಯನ್ನು ಕೊಡುತ್ತದೆ. ಆದರೆ ಶರಣರಲ್ಲಿ ಈ ವಿಷಯ ನಿರಾಶಾದಾಯಕವಾಗಿದೆ. ಇವರು ಸಾಧನೆಯ ಸಿದ್ಧಿಯನ್ನು ಏರಿದರೂ ಲೌಕಿಕ ಬದುಕು ಶರಣರಿಂದ ದೂರ ಸರಿಯಲಿಲ್ಲ. ಆಗ

ಶರಣರಲ್ಲಿದ್ದ ಒಂದು ಅಂಶವೆಂದರೆ ಇವರು ತಮ್ಮನ್ನು ಸಾಂಸಾರಿಕ ಜೀವನ ಬಿಡಲಿಲ್ಲವೆಂದು ಬೇಸರಗೊಳ್ಳದೆ ಅವರು ಈ ಸಾಂಸಾರಿಕ ಜೀವನವನ್ನೇ ಒಂದು ಆಧ್ಯಾತ್ಮಿಕತೆಯಿಂದ ಕೂಡಿದ ಸಿದ್ಧಿಯ ಸಾಧನೆಯನ್ನು ಪಡೆಯಲು ಮಾರ್ಗವನ್ನಾಗಿ ಬಳಸಿಕೊಂಡರು.

"ಶರಣರಲ್ಲಿ ನಾನಾ ಮನೋಧರ್ಮದವರನ್ನು ಕಾಣುತ್ತೇವೆ. ಅವರ ಸಾಧನೆಯ ಮಾರ್ಗದಲ್ಲಿಯೂ ವೈವಿಧ್ಯವಿದೆ. ಆದರೆ ಎಲ್ಲರೂ ಭಕ್ತಿಯನ್ನು ಏಕರೀತಿಯಲ್ಲಿ ಪುರಸ್ಕರಿಸುವುದು ಕಂಡುಬರುತ್ತದೆ. "ಭಕ್ತಿ ಶಿವನ ನಡುಗಿಸಿತ್ತು, ನುಡಿಸಿತ್ತು; ಭಕ್ತಿ ಶಿವನನುಣಿಸಿ, ಬಡಿಸಿ, ತೊಡಿಸಿತ್ತು ಭಕ್ತಿ ಶಿವನ ಹಾಡಿಸಿ ಕುಣಿದಾಡಿಸಿತ್ತು. ಭಕ್ತಿಯಿಲ್ಲದೆ ವಿರಕ್ತಿಯಿಲ್ಲ, ಜ್ಞಾನವಿಲ್ಲ; ಇದು ಕಾರಣ ಭಕ್ತಿಯೇ ಮುಕ್ತಿ ಜನನಿ" ಎಂಬುದು ಶರಣರ ಮಾತು ಇಲ್ಲಿ ಭಕ್ತಿಯು ವಿರಕ್ತಿ, ಜ್ಞಾನ, ಧ್ಯಾನ, ಕರ್ಮ ಎಲ್ಲ ಮಾರ್ಗಗಳನ್ನು ಸಮನ್ವಯಗೊಳಿಸುವ ವಿಶಾಲವಾದ ಅರ್ಥವ್ಯಾಪ್ತಿಯನ್ನು ಪಡೆಯಿತು."[೧]

ಶರಣರಲ್ಲಿ ಎಲ್ಲರೂ ಒಂದೇ ಮನಸ್ಸು, ಒಂದೇ ಗುಣ, ಒಂದೇ ನಡೆನುಡಿಯವರಾಗಿರುವುದಿಲ್ಲ. ಇವರಲ್ಲಿ ವೈವಿಧ್ಯತೆ ಕಂಡುಬರುತ್ತದೆ. ಇವರು ಕೈಗೊಳ್ಳುವ ಸಾಧನೆಯ ಮಾರ್ಗದಲ್ಲಿಯೂ ಕೂಡ ವಿವಿಧತೆಯನ್ನು ಕಾಣುತ್ತೇವೆ. ವಿವಿಧತೆಯಲ್ಲಿ ಏಕತೆಯಿದೆ ಎಂದು ಶರಣರು ತೋರಿಸಿದ್ದಾರೆ. ಇವರೆಲ್ಲರ ಭಕ್ತಿಯು ಶಿವನಲ್ಲಿ ಮೊರೆಹೋಗುವುದಾಗಿತ್ತು. ಇವರ ಭಕ್ತಿ ಶಿವನನ್ನು ಬೆರಗುಗೊಳಿಸಿತ್ತು. ಶರಣರ ಭಕ್ತಿ ಶಿವನನ್ನು ನಾಚಿಸುವಂತೆ ಮಾಡಿತ್ತು. ಶರಣರ ಭಕ್ತಿಯ ಪರಾಕಾಷ್ಠೆಗೆ ಶಿವನು ಎದ್ದು ನಾಟ್ಯ ಮಾಡುವಂಥ ಸಂದರ್ಭ ಉಂಟಾಗಿತ್ತು. ಶರಣರಲ್ಲಿರುವ ಒಂದೇ ಒಂದು ಧ್ಯೇಯ ಎಂದರೆ ಭಕ್ತಿಯಿಲ್ಲದೆ ಯಾವುದೂ ಇಲ್ಲ; ಎಲ್ಲವೂ ಭಕ್ತಿಯಲ್ಲೇ ಅಡಗಿದೆ. ಜೀವನ, ಜ್ಞಾನ, ವಿರಕ್ತಿ ಇವೆಲ್ಲವೂ ಭಕ್ತಿಯಲ್ಲಿವೆ. ದೇಹಕ್ಕಿರುವ ಆಸೆ, ಜೀವನದ ಮುಕ್ತಿಯನ್ನು ಕೂಡ ಪಡೆಯುವುದು ಈ ಶಿವನ ಭಕ್ತಿಯಲ್ಲಿದೆ. ಇಲ್ಲಿ ಒಂದು ಅಂಶವನ್ನು ಗಮನಿಸಬೇಕು. ಕ್ರೈಸ್ತ ಧರ್ಮದಲ್ಲಿ ಮೂಲ ಧರ್ಮದವರ ಜೊತೆ ಅನ್ಯಮತೀಯರು ಬಂದು ಸೇರ್ಪಡೆಯಾಗಿದ್ದು, ಇವರೆಲ್ಲರನ್ನು ಕ್ರೈಸ್ತರೆಂದೇ ಕರೆಯುತ್ತಾರೆ. ಮಿಶ್ರತೆಯಿಂದ ಕೂಡಿದ ಈ ಧರ್ಮದಲ್ಲಿಯ ಕ್ರೈಸ್ತರು ಒಂದೇ ಗುಣ - ನಡೆತೆಯಿಂದ ಇಲ್ಲದಿದ್ದರೂ ಇವರಲ್ಲಿ ಹಲವಾರು ರೀತಿಯ ನಡೆ-ನುಡಿಗಳನ್ನು ಕಂಡರು ಏಕತೆಯಿಂದ ಕೂಡಿದ ಮಾನವೀಯ ಮನೋಧರ್ಮವನ್ನು ಕಾಣುತ್ತೇವೆ. ಇವರಲ್ಲಿ ಹಲವರು ತಾಯಿ ಮೇರಿಮಾತೆಯನ್ನು ಪೂಜಿಸಿದರೆ ಕೆಲವರು ಮಗನನ್ನು ಪೂಜಿಸುತ್ತಾರೆ. ಆದರೆ ಧರ್ಮ ಮಾತ್ರ ಕ್ರೈಸ್ತ; ಇದೆಲ್ಲದರ ಆಚೆ ಇವರೆಲ್ಲರೂ ನೆನೆಯುವ ಪ್ರತಿ ಕ್ಷಣದ ನಾಮ ಓ ಗಾಡ್ ಜೀಸಸ್. ಇವರೆಲ್ಲರೂ ತಮ್ಮ ತಮ್ಮ ಕಷ್ಟ ಪರಿಹಾರಕ್ಕಾಗಿ ಪಾರ್ಥನೆ ಮಾಡುವುದು ಯೇಸುವಿನ ನಾಮದಲ್ಲೇ. ಇಂದ ನೇಮ್ ಆಫ್ ದಿ ಜೀಸಸ್ ಎಂದೇ ತಮ್ಮ ಪ್ರಾರ್ಥನೆಯನ್ನು ಪ್ರಾರಂಭಿಸುತ್ತಾರೆ. ಇವರೆಲ್ಲರೂ ಮಾಡುವ ಪ್ರಾರ್ಥನೆಯ ಸ್ಥಳವನ್ನು ಚರ್ಚೆ ಎಂದೇ ಕರೆಯುತ್ತಾರೆ. ಇವರು ನೆನೆಯುವ ಭಗವಂತ ಮಾಡುವ ಕಾರ್ಯ ವಿಚಾರ ವಿನಿಮಯದ ಸಭೆಗಳು ಎಲ್ಲ ಕಾರ್ಯಕ್ರಮಗಳು ಒಂದೇ ರೀತಿಯಿಂದ ಕೂಡಿದವುಗಳಾಗಿರುತ್ತವೆ.

ಶರಣರು ತಮ್ಮ ನಿರ್ಮಲವಾದ ಭಕ್ತಿ ನಿಷ್ಠೆಯಿಂದ ದೇವರನ್ನು ಪ್ರೀತಿಯಿಂದ ಹೇಗೆ ಒಲಿಸಿಕೊಂಡಿದ್ದಾರೆ? ಭಗವಂತನು ಇವರ ಪ್ರೀತಿಯನ್ನು ಹೇಗೆ ಮೆಚ್ಚಿಕೊಂಡಿದ್ದಾನೆ? ಸಾಧಕ ತಾನು ಸಾಧಿಸಿದ ಸಾಧನೆಯ ಮಾರ್ಗವನ್ನು ತನ್ನಲ್ಲಿರುವ ತಾನು ತನ್ನದೇ ತನ್ನಿಂದಲೇ ಎಂಬ ಅಹಂಕಾರವನ್ನು ತ್ಯಜಿಸಿ ವಿಶಾಲ ಹೃದಯದಿಂದ ನಿಶ್ಕಲ್ಮಷ ಮನಸ್ಸಿನಿಂದ ಹೇಗೆ ಸಿದ್ಧಿಯನ್ನು ಪಡೆದು ಅನುಭಾವಿಯಾಗಿದ್ದಾನೆ ಎಂಬುದನ್ನು ಗಮನಿಸೋಣ.

**ಅಕ್ಕಮಹಾದೇವಿಯು ವಚನದಲ್ಲಿ ಹೀಗೆ ಹೇಳಿದ್ದಾಳೆ :**

"ಎನ್ನ ಮಾಯದ ಮದವ ಮುರಿಯಯ್ಯಾ
ಎನ್ನ ಕಾಯದ ಕತ್ತಲೆಯ ಕಳೆಯಯ್ಯಾ
ಎನ್ನ ಜೀವನ ಜಂಜಡವ ಮಾಣಿಸಯ್ಯಾ
ಎನ್ನ ದೇವ ಚನ್ನಮಲ್ಲಿಕಾರ್ಜುನದೇವಯ್ಯಾ
ಎನ್ನ ಸುತ್ತಿದ ಪ್ರಪಂಚದ ಬಿಡಿಸು ನಿಮ್ಮ ಧರ್ಮ"[೨]

ಸಾಧಕ ಆಧ್ಯಾತ್ಮದಲ್ಲಿ ತನ್ನನ್ನು ತೊಡಗಿಸಿಕೊಳ್ಳುವ ಮುನ್ನ ಅಥವಾ ಸಾಧಕನಾಗುವ ಮೊದಲು ಸರಳವಾದ ವ್ಯಕ್ತಿಯಾಗಿರುತ್ತಾನೆ. ಅವನ ಮನಸ್ಸು ಕೂಡ ಅಷ್ಟೇ ಸರಳ ಹಾಗು ಚಂಚಲವಾಗಿರುತ್ತದೆ. ಆ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು ಸಾಧನೆಗೈಯಬೇಕಾದರೆ, ಸಾಧನೆಯ ಗುರಿಯನ್ನು ಮುಟ್ಟಬೇಕಾದರೆ ಮನಸ್ಸಿನ ಹಿಡಿತ ಮುಖ್ಯ. ಹಾಗೆ ವ್ಯಕ್ತಿಯ ಅಂಗದಲ್ಲಿರುವ ಅನೇಕ ಆಸೆ, ಅಹಂ ಇವೆಲ್ಲವನ್ನು ಹಿಡಿತದಲ್ಲಿಟ್ಟು ಅದನ್ನು ಸಂಪೂರ್ಣವಾಗಿ ವ್ಯಕ್ತಿ ದೇಹದಿಂದ ತೊರೆಯಬೇಕು. ಆಗ ಸಾಧನೆಯ ಮಾರ್ಗದಲ್ಲಿ ನಡೆಯಲು ಅನುಕೂಲವಾಗುತ್ತದೆ. ಇವೆಲ್ಲವನ್ನು ತೊರೆಯಲು ವ್ಯಕ್ತಿ ಮಾನಸಿಕವಾಗಿ ತಯಾರಿಯಾಗಿರಬೇಕು. ಆ ಶಕ್ತಿ ಅವನಲ್ಲಿ ಕಡಿಮೆ ಇರುವುದರಿಂದ ತನ್ನ ಸಾಧನೆಗೆ ಯಾವ ಅಡೆ-ತಡೆಗಳು ಬಾರದಿರಲು ಭಗವಂತನಿಗೆ ಮೊರೆಹೋಗುತ್ತಾನೆ. ನಾನು ನನ್ನದೆಂಬ ಅಹಂಕಾರವನ್ನು ದೂರವಾಗಿಸಿ ಅಂಧಕಾರದಲ್ಲಿರುವ ನನ್ನನ್ನು ಬೆಳಕಿನೆಡೆಗೆ ಕೈ ಹಿಡಿದು ನಡೆಸು. ಜೀವನದಲ್ಲಿಯ ತೊಡಕುಗಳನ್ನು ದೂರವಾಗಿಸು. ಅದರಿಂದ ನನ್ನನ್ನು ಬಿಡಿಸು ಎಂದು ದೇವರಲ್ಲಿ ಪ್ರಾರ್ಥಿಸುವ ಪ್ರತಿ ಸಾಧಕನಿಗೆ ದೇವರ ಕೃಪೆ ದೊರೆತ ನಂತರವೇ ಸಾಧಕನು ತನ್ನ ಮುಂದಿನ ಸಾಧನೆಯ ದಾರಿಯಲ್ಲಿ ನಡೆದು ಸಿದ್ಧಿಯನ್ನು ಪಡೆದು ಅನುಭಾವಿಯಾಗುತ್ತಾನೆ. ಇದನ್ನೇ ಶರಣರು ತಮ್ಮ ವಚನಗಳಲ್ಲಿ ಒಡಮೂಡಿಸಿದ್ದಾರೆ.

ಕರ್ಮದ ಫಲವನ್ನು ಕಳೆದುಕೊಳ್ಳಲು ವ್ಯಕ್ತಿ ಮಾಡುವ ತಾತ್ಕಾಲಿಕವಾದ ಪರಿಹಾರವನ್ನು ಮಾಡಿದರೆ ಫಲವಿಲ್ಲ ಮಾಡಿದರೆ ಶಾಶ್ವತವಾಗಿರುವಂಥದನ್ನೇ ಮಾಡಬೇಕು. ಮನುಷ್ಯ, ಪಶು, ಪಕ್ಷಿ, ಪ್ರಾಣಿ ಇವುಗಳ ದೇಹವನ್ನು ತಂಪಾಗಿಸಿ ನೀರಿನ ದಾಹವನ್ನು ತೀರಿಸಿಕೊಳ್ಳಲು ಕೆರೆಯನ್ನು ಕಟ್ಟಿದರೆ ಉಪಯೋಗವಿಲ್ಲ. ಯಾಕೆಂದರೆ ಇದು ಮಳೆಯಿಲ್ಲದಿದ್ದರೆ ಉಪಯೋಗಕ್ಕೆ ಬಾರದು.

ಇದರಂತೆ ನಿನ್ನ ಕರ್ಮದ ಫಲವು ಹಾಗೆ ಉಳಿಯುವುದು. ಇದನ್ನು ಪರಿಹರಿಸಿಕೊಳ್ಳಲು ಸದಾ ತಂಪನ್ನು ನೀಡುವ ಭಗವಂತನಲ್ಲಿ ಮೊರೆಯಿಟ್ಟು ಅವನ ಪ್ರೀತಿಗೆ ಪಾತ್ರರಾದರೆ ಸದಾ ತಂಪನ್ನೇ ನೀಡುವ ಅಂದರೆ ಪಾಪ ಕರ್ಮದಿಂದ ಮುಕ್ತಿಯನ್ನು ಪಡೆಯುವ ಭಗವಂತನಲ್ಲಿ ಬಲವಾದ ನಂಬಿಕೆಯನ್ನು ಪ್ರೀತಿಯಿಂದ ಪ್ರೀತಿಸುತ್ತಲೇ ಭಗವಂತನನ್ನು ಗೆಲ್ಲು! ಅವನ ಅನುಗ್ರಹ ಒಲುಮೆಗೆ ಪಾತ್ರರಾಗಬೇಕು ಎಂಬುದನ್ನು ಅಲ್ಲಮ ಪ್ರಭು ಅವರು ಒಂದು ವಚನದಲ್ಲಿ ತಿಳಿಸಿದ್ದಾರೆ.

"ತನುವೆಂಬ ಏರಿಗೆ, ಮನವೆಂಬ ಕಟ್ಟೆ
ಆಚಾರವೆಂಬ ಸೋಪಾನ;
ಪರಮಾನಂದವೆಂಬ ಜಲವ ತುಂಬಿ,
ಕೆರೆಯ ಕಟಬಲ್ಲವರನಾರನೂ ಕಾಣೆ
ನಾ ಕಟ್ಟಿದ ಕೆರೆ ಸ್ಥಿರವಾಯಿತ್ತು
ಗುಹೇಶ್ವರಾ ನಿಮ್ಮಾಣೆ"[೩]

ಶರಣರಲ್ಲಿ ಮುಖ್ಯವಾಗಿ ಕಾಣುವುದೆಂದರೆ ದೃಢ ನಿರ್ಧಾರದ ಮಾತುಗಳು, ನಿಶ್ಚಲವಾದ ಮನಸ್ಸಿನಿಂದ ಹೊರಡುವ ವಿಶಾಲವಾದ ಪ್ರೀತಿ, ಕಪಟ, ಹುಸಿ, ಡಾಂಬಿಕತೆಯಿಂದ ದೂರವಿರುವುದು ಶರಣರಲ್ಲಿರುವ ಒಂದು ಗುಣ.

ಶರಣರು ದೇವರು ಮಾಡಿದ ಯಾವುದೇ ವಸ್ತುವನ್ನು ಹುಸಿನುಡಿಗಳಿಂದ ವರ್ಣಿಸಲಾರರು; ಯಾಕೆಂದರೆ ಅದು ಭಗವಂತನಿಚ್ಛೆ! ಇದನ್ನು ಸೃಷ್ಟಿ ಮಾಡುವ ಇಚ್ಛೆ ಅವನಲ್ಲಿತ್ತು. ಹಾಗಾಗಿ ಅವನು ಸೃಷ್ಟಿ ಮಾಡಿದ್ದಾನೆ. ಮನುಜ ಸೃಷ್ಟಿ ಮಾಡಿಕೊಂಡಿರುವ ಪದಗಳಿಂದ ಅದನ್ನು ವರ್ಣಿಸಲಾರರು ಇದೆಲ್ಲ ಭಗವಂತನ ಸೃಷ್ಟಿ ನೋಡಾ ಎಂದು ಹೇಳಿದ್ದಾರೆ.

ಶರಣರು ನಂಬಿರುವುದು ಒಂದೇ. ಈ ಪ್ರಪಂಚದ ಸೃಷ್ಟಿಕರ್ತ ಭಗವಂತ. ಅವನೇ ಈ ಭೂಮಿ ಮೇಲಿರುವ ಪ್ರತಿವಸ್ತುವಿನ ಸೃಷ್ಟಿಕರ್ತನಾಗಿದ್ದಾನೆ. ಸೃಷ್ಟಿಕರ್ತ ನಿರಾಕಾರ ಜ್ಯೋತಿರ್ಮಯ ಬಿಂದು ಆತ್ಮ; ಅವನ ವಾಸಸ್ಥಳ ಪರಂಧಾಮ. ಭಗವಂತನ ಸೃಷ್ಟಿಗೆ ತಲೆಯನ್ನು ಭಾಗಿಸಿ ನಮಸ್ಕರಿಸಬೇಕು ಎಂಬ ಭಾವನೆ ಮನದಲ್ಲಿ ಮೂಡುವುದು ಸಹಜ.

ಇಲ್ಲಿರುವ ಹಲವಾರು ಧರ್ಮಗಳಂತೆ ಜೈನರು, ಬೌದ್ಧರು, ಕ್ರೈಸ್ತರು ಹಲವರು ತಮ್ಮದೇ ಆದ ನುಡಿಗಳಲ್ಲಿ ಈ ಸೃಷ್ಟಿಯನ್ನು ವರ್ಣಿಸಿದ್ದಾರೆ. ಕೆಲವರು ಮಿಥ್ಯೆ, ಮಾಯೆ ಎಂದಿದ್ದಾರೆ, ಆದರೆ ಶರಣರು ಈ ಪ್ರಪಂಚ ಸೃಷ್ಟಿಯಾಗಿರುವುದು ಎಷ್ಟು ಸತ್ಯವೋ ಅದರಿಂದ ಇರುವ ಈ ಸೃಷ್ಟಿಕರ್ತನ ಶಕ್ತಿಯೂ ಕೂಡ ಅಷ್ಟೇ ಸತ್ಯವಾದುದು; ಆದರೆ ಅದು ಕಣ್ಣಿಗೆ ಕಾಣದು.

ಆ ಕಾಣದ ಶಕ್ತಿಯನ್ನು ಕಾಣಲು ಹೊರಡುವ ಮಾರ್ಗ ಕಠಿಣವಾದುದು, ಆದರೂ ಬಿಡದೆ ಆ ಮಾರ್ಗವನ್ನು ಹಿಡಿದು ಕಠಿಣವಾದ ಶ್ರಮದಿಂದ ಭಗವಂತನ ಕಾಣುವ ಮಾರ್ಗವನ್ನು

ಮೆಟ್ಟಿನಿಂತು ಸಾಧನೆಗೈದು ಸಿದ್ಧಿಯನ್ನು ಪಡೆದು ಭಗವಂತನ ಸ್ವರೂಪವಾದ ಬೆಳಕನ್ನು ಕಂಡು ಭಗವಂತನ ಅನುಗ್ರಹ ಪಡೆದು ಅನುಭಾವಿಗಳಾಗಿ ನಿತ್ಯ ನಿಜದಲ್ಲಿ ನಡೆದು ಬಂದವರು ಈ ಶರಣರು.

ಶರಣಧರ್ಮದಲ್ಲಿ ಮುಖ್ಯವಾಗಿ ಕಾಣಸಿಗುವುದು ಸಮನ್ವಯತೆ; ಭೂಮಿಯ ಮೇಲಿರುವ ಅನೇಕ ಜಾತಿ-ಧರ್ಮಗಳಲ್ಲಿ ಹಲವಾರು ಭಿನ್ನತೆಗಳಿವೆ. ಈ ಜಾತಿಗಳಿಗೆ ಸೇರಿದ ಆ ಸಮುದಾಯದ ಪ್ರತಿಯೊಬ್ಬರಲ್ಲಿಯೂ ಜಾತಿ, ಲಿಂಗ ವರ್ಣಗಳ ತಾರತಮ್ಯವಿದೆ.

ಈ ಎಲ್ಲ ಕಾರಣಗಳಿಂದ ಸಮಾಜದ ಪ್ರತಿಯೊಬ್ಬ ವ್ಯಕ್ತಿಗೆ ಪೂರ್ವದಿಂದ ಪಶ್ಚಿಮಕ್ಕಿರುವಷ್ಟು ಅಂತರವಿದೆ. ನಾವೆಲ್ಲರು ಒಂದೇ ಎನ್ನುವಂತಹ ಮನೋಭಾವವಿರುವ ಯಾವ ಕೀಳರಿಮೆ ಇಲ್ಲದೆ ಪ್ರೀತಿಯಿಂದ ಸ್ವಾಗತಿಸಿ ಅಶ್ರಯಿಸುವ ವ್ಯಕ್ತಿಯ ಮನೋಧರ್ಮಕ್ಕೆ ಮೌಲ್ಯವನ್ನೇ ನೀಡದ ಈ ಜಾತಿಗಳ ಬಗ್ಗೆ ಹಲವರಲ್ಲಿ ಅಸಮಾಧಾನವಿದೆ.

ಆದರೆ ಇದೆಲ್ಲವನ್ನು ಮೀರಿ ಸಮಾನತೆಗೆ ಬೆಲೆ ಕೊಟ್ಟು ಎಲ್ಲರ ಶ್ರೇಯಸ್ಸನ್ನೇ ಬಯಸಿ ನಾವುಗಳೆಲ್ಲ ಒಂದೇ ಎನ್ನುವ ವರ್ಣ, ಜಾತಿ, ಭೇದವನ್ನು ದೂರವಾಗಿಸಿ ಒಂದೇ ತಂದೆಯ ಮಕ್ಕಳು; ಒಂದಾಗಿ ಬಾಳೋಣ ಎಂಬ ಹಿತನುಡಿಗಳಿಂದ ಭಗವಂತನಿಗೆ ಬಾಗಿ ಬಂದವರನ್ನು ಬಿಗಿದಪ್ಪಿ ಪ್ರೀತಿ ವಾತ್ಸಲ್ಯವನ್ನು ಕೊಟ್ಟು ಅಕ್ಕರೆಯಿಂದ ಮುನ್ನಡೆದಿರುವುದೇ ಈ ಶರಣ ಧರ್ಮ.

ಹುಸಿ ಆಡಂಬರಕ್ಕೆ ಯಾವ ಚಿಂತನೆಯನ್ನು ಕೊಡದೆ ಅಂತರಂಗದಲ್ಲಿರುವ ಪರಿಶುದ್ಧವಾದ ಆಡಂಬರವನ್ನು ಮೆಚ್ಚಿರುವುದು ಈ ಶರಣಧರ್ಮ. ಅಂತರಂಗವನ್ನು ಪರಿಶುದ್ಧಪಡಿಸಿಕೊಳ್ಳದೆ ಬಹಿರಂಗ ಪರಿಶುದ್ಧತೆಯನ್ನು ತೋರಿಸಿಕೊಳ್ಳುವ ಢಾಂಬಿಕತೆಯ ಜೀವನದ ಪ್ರೀತಿಯನ್ನು ಹುಸಿ ನುಡಿಯ ಪದಗಳನ್ನು ಶರಣ ಧರ್ಮ ಖಂಡಿಸುತ್ತದೆ, ದೂರ ತಳ್ಳುತ್ತದೆ, ಕಪಟ ನಾಟಕಕಾರರನ್ನು ಕೂಡ ಶರಣ ಧರ್ಮ ಖಂಡಿಸುತ್ತದೆ.

ಒಂದು ಧರ್ಮವೆಂದರೆ ಮನುಷ್ಯನನ್ನು ಕತ್ತಲಿನಿಂದ ಜ್ಞಾನದ ಕಡೆಗೆ ತರುವಂಥದಾಗಿರಬೇಕು. ಸರ್ವ ಸಮಾನತೆಯನ್ನು ಬೆಳೆಸುವಂಥದಾಗಿರಬೇಕು. ವ್ಯಕ್ತಿಗೆ ಜೀವನದ ಜೀವದ ಮೌಲ್ಯಗಳನ್ನು ತಿಳಿಸಿ ಸಮಾಜದಲ್ಲಿ ಸಮಾನತೆಯ ಬದುಕನ್ನು ಕಟ್ಟಿಕೊಳ್ಳವಂಥದಾಗಿರಬೇಕು.

ಒಬ್ಬ ವ್ಯಕ್ತಿಗೆ ಸಮಾಜ ಕುಟುಂಬ ಲೌಕಿಕವಾದ ಬದುಕಿನ ಜೊತೆಗೆ ಆಧ್ಯಾತ್ಮ ನಂಬಿಕೆಗಳ ವಿಚಾರಗಳನ್ನು ಮೂಡಿಸುವಂತಹ ಕೆಲಸ ಧರ್ಮದ್ದಾಗಿರಬೇಕು. ಇಂತಹ ಕಾರ್ಯಗಳನ್ನು ಈ ಶರಣ ಧರ್ಮ ಮಾಡಿದೆ.

"ಶರಣ ಧರ್ಮ ಮುಖ್ಯವಾಗಿ ವಿರೋಧಿಸಿದ್ದು ಹಿಂದು ಧರ್ಮದ ಶ್ರೇಣಿಕರಣ ಸಾಮಾಜಿಕ ವ್ಯವಸ್ಥೆಯನ್ನು ಮಾತ್ರ. 'ಸರ್ವೇ ಜನಾ ಸುಖಿನೋ ಭವಂತು', ಸರ್ವಂ ಒಲ್ವಿದಂ ಬ್ರಹ್ಮಾ ಎಂಬ ಹುಸಿ ಘೋಷಣೆಗಳಿಂದ ಜಗತ್ತನ್ನು ಮೋಸಗೊಳಿಸುತ್ತಾ, ಒಳಗೆ ಮಾತ್ರ ಚತುರ್ವರ್ಣ

ಪದ್ಧತಿಯನ್ನು ಬಲವಾಗಿ ಸಮರ್ಥಿಸುತ್ತಾ ಹಾಗೂ ಉಳಿಸಿಕೊಳ್ಳುತ್ತಾ ಬಂದ ಹಿಂದೂ ಧರ್ಮದ ತಂತ್ರವನ್ನು ವಚನಕಾರರು ಅತ್ಯಂತ ತೀವ್ರವಾಗಿ ಪ್ರತಿಭಟಿಸಿದರು. ಈ ಹಿಂದೂ ಧರ್ಮಕ್ಕೆ ಕಾಲದಿಂದ ಕಾಲಕ್ಕೆ ಭಾಷ್ಯಗಳ ಮೇಲೆ ಭಾಷ್ಯವನ್ನು ಬರೆದ ಆಚಾರ್ಯರು ಈ ಶ್ರೇಣೀಕರಣ ವ್ಯವಸ್ಥೆಯನ್ನು ಬುದ್ಧನ ಹೊರತು ಪ್ರಶ್ನಿಸಲೇ ಇಲ್ಲ."[೪]

ಶರಣ ಧರ್ಮವು ಈ ಶ್ರೇಣೀಕರಣವನ್ನು ವಿರೋಧಿಸಿದುದರಲ್ಲಿ ಒಂದು ಮಾನವೀಯತೆಯ ಮೌಲ್ಯ ಕಾಣಬಹುದಾಗಿದೆ. ಶರಣ ಧರ್ಮವು ಇದನ್ನು ವಿರೋಧಿಸುವುದಕ್ಕೆ ಮುಖ್ಯ ಕಾರಣ ಸಮಾಜದಲ್ಲಿನ ಭಿನ್ನ ಕಲಹ, ಮೇಲು ಕೀಳು, ಶ್ರೀಮಂತ ಬಡವ ಎಂಬ ತಾರತಮ್ಯದ ಕಲುಷಿತ ಮನೋಭಾವದ ಜೀವನ ನಡೆಸುತ್ತಿರುವ ಸಮಾಜ ಜೀವಿಗಳನ್ನು ಕಂಡು ಹಿಂದು ಧರ್ಮದ ಶ್ರೇಣೀಕರಣದ ವಿರುದ್ಧ ಧ್ವನಿ ಎತ್ತಿದರು.

ಈ ಜಗತ್ತಿನ ತುಂಬ ಬರೀ ಕಪಟ ಮತ್ತು ಹುಸಿನುಡಿಗಳಿಂದ ವಂಚಿಸುವುದನ್ನು ಕಾಣುತ್ತೇವೆ. ಹೀಗೆ ನಡೆದುಕೊಂಡು ಬಂದಿರುವ ನಡೆಯುತ್ತಲೇ ಇರುವ ಕುತಂತ್ರವನ್ನು ಶರಣರು ವಿರೋಧಿಸಿದರು.



ಶರಣರು ಸರ್ವಧರ್ಮ ಸಮನ್ವಯರು. ಶರಣರಲ್ಲಿ ಮೇಲು ಕೀಳೆಂಬ ಭೇದಭಾವವಿಲ್ಲ. ಇಲ್ಲಿ ಮಾದಿಗ, ಹೊಲೆಯ, ಕಂಬಾರ, ಕಮ್ಮಾರ, ಶರಣು ಎಂದು ಬಂದರು. ಶರಣ ಧರ್ಮಕ್ಕೆ ಶರಣು ಎಂದು ಬಂದುವರೆಲ್ಲರೂ ಶರಣರೆ. ಶರಣು ಎಂದವರನ್ನೆಲ್ಲ ಯಾಕೆ ಶರಣರು ಎನ್ನುತ್ತೆ ಈ ಧರ್ಮ? ಯಾಕೆಂದರೆ ಶರಣು ಎಂದರೆ ಇಲ್ಲಿ ತಲೆಬಾಗಿಸುವುದು ಎಂದರ್ಥ. ನಾನು ನನ್ನದು ಎಂಬ ಅಹಂಕಾರವನ್ನು ಬಿಟ್ಟು ಭಗವಂತನಿಗೆ ನನ್ನ ಈ ಕಾಯವನ್ನೇ ಅರ್ಪಿಸಿರುವೆ ಎಂದರ್ಥ. ಹಾಗಾಗಿ ಶರಣು ಎಂದು ಬಂದವರೆಲ್ಲರಿಗೂ ಈ ಧರ್ಮವು ಆಶ್ರಯವಿತ್ತಿದೆ.

ಹರಳಯ್ಯ, ಮಾದರ ಚೆನ್ನಯ್ಯ, ಕಾಳವ್ವೆ, ಕುಂಬಾರ ಗುಂಡಯ್ಯ, ಕೇತಲದೇವಿ, ಮಡಿವಾಳ ಮಾಚಿದೇವ ಇವರೆಲ್ಲರನ್ನು ಶರಣರೆಂದೇ ಕರೆಯಲಾಗುತ್ತದೆ. ಇಲ್ಲಿ ಅವರ ಶರಣಾರ್ಥಿಯನ್ನು ಮೆಚ್ಚಿ ಶರಣ ಧರ್ಮ ಶರಣರು ಎಂದಿದೆ. ಇವರೆಲ್ಲರನ್ನು ಬೇರೆ ಜಾತಿಯವರೆಂದು ಎಂದೂ ದೂರ ತಳ್ಳಲಿಲ್ಲ.

"ಶರಣರಲ್ಲಿರುವ ಮುಖ್ಯವಾದ ಸಂಗತಿ ಎಂದರೆ ಯಾವುದೇ ಕಾರಣಗಳನ್ನು ಮುಂದೆ ಮಾಡಿ, ಈ ಲೋಕ ಜೀವನದಿಂದ ವ್ಯಕ್ತಿಗಳನ್ನು ವಿಮುಖರನ್ನಾಗಿ ಮಾಡುವ ಸನ್ಯಾಸ-ವೈರಾಗ್ಯ-ತಪಸ್ಸುಗಳನ್ನು ಶರಣ ಧರ್ಮ ಮುಖ್ಯವೆಂದು ಭಾವಿಸುವುದಿಲ್ಲ."[೫]

ಒಬ್ಬ ವ್ಯಕ್ತಿ ತನ್ನ ಲೌಕಿಕ ಬದುಕಿನ ಜಂಜಾಟದಿಂದ ಜಿಗುಪ್ಸೆಗೊಂಡು, ವೈರಾಗ್ಯ ಹೊಂದಿ ಅಲೌಕಿಕ ಬದುಕಿನ ಕಡೆ ಹೋಗಲು ಈ ಲೌಕಿಕ ಬಂಧನದಿಂದ ಮುಕ್ತರಾಗಲು ವ್ಯಕ್ತಿ ತನ್ನ ಸಂಸಾರವನ್ನು ತೊರೆದು ಧ್ಯಾನ, ಆಧ್ಯಾತ್ಮ, ಯೋಗ, ತಪಸ್ಸು ಇದನ್ನು ಚಿತ್ತ ಮನಸ್ಸಿನಿಂದ

ಅನುಸರಿಸಿದರೆ ವಿಮುಕ್ತಿ ದೊರೆಯುತ್ತದೆ ಎಂಬುದೊಂದು ವ್ಯಕ್ತಿಗಿರುವ ನಂಬಿಕೆ. ಅವಧೂತರು, ಆರೂಢರು, ಸಿದ್ಧರು ಇದೇ ಮಾರ್ಗವನ್ನು ಅನುಸರಿಸಿದರು ಹಾಗೂ ಇದೇ ಮುಖ್ಯವೆಂದರು. ಆದರೆ ಶರಣರು ಸನ್ಯಾಸ, ವೈರಾಗ್ಯ, ತಪಸ್ಸು ಇವುಗಳಾವೂ ಮುಖ್ಯವೆಂದು ಎಂದೂ ಭಾವಿಸಲಿಲ್ಲ.

ಒಬ್ಬ ವ್ಯಕ್ತಿಗೆ ಆತ್ಮ ಪರಿಶೋಧನೆಯಾದ ಮೇಲೆ ತನ್ನತನದ ಅರಿವು ಮತ್ತು ವಿಶೇಷವಾದ ಜ್ಞಾನವು ಅವನ ಅಂತರಂಗದಲ್ಲಿ ಆಗುತ್ತದೆ. ಆಗ ವ್ಯಕ್ತಿ ಸಮಾಜದೊಂದಿಗೆ ಬೆರೆತು ತನ್ನ ಜೀವನವನ್ನು ಮೌಲ್ಯಯುತವಾಗಿ ಬೆಳೆಸಿಕೊಂಡು ಹೋಗುತ್ತಾನೆ. ಆ ಮೌಲ್ಯವನ್ನು ಸಮಾಜ ಮತ್ತು ಸಮಾಜದ ಜನರಲ್ಲಿ ಉಳಿಸಿಕೊಂಡು ಅದೇ ಮೌಲ್ಯಯುತವಾದ ಜೀವನವನ್ನು ಸಮಾಜಕ್ಕೆ ಕಟ್ಟಿ ಕೊಡುವ ಕಾರ್ಯವನ್ನು ಮಾಡುತ್ತಾನೆ. ಆಗ ವ್ಯಕ್ತಿಯ ಜೀವನ ಸಾರ್ಥಕವಾಗುತ್ತದೆ. ಆಗ ತಾನು ಈ ಸಮಾಜದಲ್ಲಿ ಒಂದು ಬಿಂದು ಆಗಿದ್ದೇನೆ ಎಂಬ ಆನಂದಮಯ ಗಳಿಗೆಯನ್ನು ತನ್ನ ಮನಸ್ಸಿನಲ್ಲಿ ಅಂತರ್ಮುಖಿಯಾಗಿ ಆನಂದಿಸುತ್ತಾನೆ. ಮುಂದೆ ಸಮಾಜದ ಅಭಿವೃದ್ಧಿಯೇ ನನ್ನ ಅಭಿವೃದ್ಧಿ ಎಂಬ ಧೋರಣೆ ತಲುಪುತ್ತಾನೆ. ವ್ಯಕ್ತಿಯ ಆತ್ಮೋದ್ಧಾರದ ಅನುಭೂತಿಯೇ ಈ ಸಮಾಜೋದ್ಧಾರಕ್ಕೆ ಕಾರಣ ಶರಣರು ಹೇಳುವ ಸೋಹಂ ಪ್ರಜ್ಞೆ ಸಮಾಜೋದ್ಧಾರದ ದಾಸೋಹಂ ಪ್ರಜ್ಞೆಯಾಗಿ ಬೆಳೆಯಬೇಕು ಎಂಬ ಮಾತು ಇಲ್ಲಿ ಅರ್ಥಪೂರ್ಣವಾಗಿದೆ.

ಭಗವಂತ ಸೃಷ್ಟಿಸಿದ ಈ ಜೀವನದಲ್ಲಿ ದೇವರು ಮೆಚ್ಚುವಂತಹ ಕಾರ್ಯಗಳನ್ನು ಕೈಗೊಳ್ಳುವುದರಲ್ಲಿ ಆನಂದ ಸಂತಸವಿದೆ. ಶರಣರ ಅಂತರಂಗದ ಆತ್ಮದ ತುಡಿತ ಮಿಡಿತವೆಂದರೆ ಅಂಗವನ್ನು ಬಗ್ಗಿಸಿ ದುಡಿದು ಸಮಾಜದಲ್ಲಿನ ಬಡಜೀವಿಗಳ ಕಷ್ಟಗಳಿಗೆ ಸ್ಪಂದಿಸಿ ಅವರಿಗಿರುವ ಕಷ್ಟಕಾರ್ಪಣ್ಯಗಳನ್ನು ನಿವಾರಿಸಿ ಹಂಚಿ ತಿನ್ನುವುದರಲ್ಲಿ ಹರ್ಷವಿದೆ ಎಂಬುದನಿಲ್ಲಿ ಶರಣರು ತೋರಿಸಿಕೊಟ್ಟಿದ್ದಾರೆ. ದಾಸೋಹ ಎಂಬ ಪದವನ್ನು ಬಳಸಿ ಅನ್ನ ನೀರು ಕೊಟ್ಟು ಅವರ ಬಡವತನ್ನು ದೂರವಾಗಿಸಿದವರು ಶರಣರು.

ಶರಣರು ನಿತ್ಯ ದಾಸೋಹವನ್ನು ಮಾಡಿ ಆತ್ಮದ ಅರಿವಿಗೆ ಹೊಸತನವನ್ನು ತಂದು ವ್ಯಕ್ತಿಗೆ ಆಗುವ ಅನುಭೂತಿಗೆ ಅರ್ಥವನ್ನು ತಂದುಕೊಟ್ಟವರು ಶರಣರು ಅನುಭಾವಿಗಳಾದ ಶರಣರು ರಚಿಸಿ ಉಪದೇಶಿಸಿದ ವಚನಗಳನ್ನು ಗಮನಿಸೋಣ.

"ಭಕ್ತಿಯೆಂಬುದು ಬೇರು, ವಿರಕ್ತಿಯೆಂಬುದು ಮರ, ಫಲವೆಂಬುದು ಜ್ಞಾನ,
ಪಕ್ವಕ್ಕೆ ಬಂದಿತ್ತೆಂಬಾಗಲೇ ಅವಧಿ ಜ್ಞಾನ
ತೊಟ್ಟು ಬಿಟ್ಟಲ್ಲಿಯೇ ಪರಮಜ್ಞಾನ
ಸವಿದಲ್ಲಿಯೆ ಅಂತರೀಯ ಜ್ಞಾನ
ಸುಖ ತನ್ಮಯವಾದಲ್ಲಿಯೆ ದಿವ್ಯಜ್ಞಾನ
ದಿವ್ಯ ತೇಜಸ್ಸು ಹಿಂಗದಲ್ಲಿಯೆ ಪರಿಪೂರ್ಣ ಜ್ಞಾನ
ಅದು ಮಹದೊಡೆಲೆಂಬುದಕ್ಕೆ ಎಡೆಯಿಲ್ಲ

ಚನ್ನಬಸವಣ್ಣ ಪ್ರಿಯ ಭೋಗ ಮಲ್ಲಿಕಾರ್ಜುನಲಿಂಗವು
ಅಪ್ರಮಾಣಾದ ಕಾರಣ"[೬]

ಸಾಧಕನಿಗೆ ಭಕ್ತಿಯೆಂಬುದು ಮುಖ್ಯವಾದುದು. ಅಲ್ಲಿಂದಲೇ ಅವನ ಸಾಧನೆ ಪ್ರಾರಂಭವಾಗುವುದು. ಆ ಭಕ್ತಿಯು ಪಕ್ವವಾದಾಗಲೇ ಪರಿಪೂರ್ಣ ಜ್ಞಾನವನ್ನು ಪಡೆಯುತ್ತಾನೆ. ಆ ಜ್ಞಾನದಿಂದ ಪರಮಾತ್ಮನ ಅನುಗ್ರಹ ಪಡೆಯುತ್ತಾನೆ. ಪರಮಾತ್ಮನ ಅನುಗ್ರಹವನ್ನು ಸವಿದು ಪರಮಾತ್ಮನ ಸಾಮೀಪ್ಯ ಪಡೆಯುವಂಥ ಪರಿಪೂರ್ಣವಾದ ಜ್ಞಾನ ದೊರಕಿಸಿಕೊಂಡು ಕೊಂಡಾಡಿದನೆಂಬುದು ಶರಣರಾದ ಪ್ರಸಾದಿ ಭೋಗಣ್ಣನವರ ವಚನದಲ್ಲಿ ಕಾಣಸಿಗುತ್ತದೆ.

"ಆವ ಬೀಜ ಬೀಳುವಲ್ಲಿ ಮೊಳೆಮುಖ ಹಿಂಚುಮುಂಚುಂಟೆ?
ನೀ ಮರೆದಲ್ಲಿ ನಾನರಿದಲ್ಲಿ ಬೇರೊಂದುಂಟೆ?
ಮೂಲ ನಷ್ಟವಾದಲ್ಲಿ ಅಂಕುರ ನಿಂದಿತ್ತು
ಕೂಟಕ್ಕೆ ಸತಿಪತಿ ಎಂಬ ನಾಮವಲ್ಲದೆ
ಅರಿವಿಂಗೆ ಬೇರೊಂದೊಡಲುಂಟೆ?
ಬೇರೊಂದಡಿಯಿಡದಿರು
ಮಾರಯ್ಯ ಪ್ರಿಯ ಅಮರೇಶ್ವರಲಿಂಗವನರಿಯ ಬಲ್ಲಡೆ।"[೭]

ಬೀಜ ಯಾವುದಾದರೇನು ಅದು ಮೇಲೆ ಕೆಳಗೆ ಬಿದ್ದರೇನು ಅದರಿಂದ ಸಿಗುವ ಫಲ ಮುಖ್ಯ ಬೀಜ ನಾಶವಾದ ಮೇಲೆ ಮೊಳಕೆ ಬರುತ್ತದೆ. ಸತಿ ಪತಿಗಳ ನಾಮ ಗಂಡು ಹೆಣ್ಣಿನ ಭೇದವನ್ನು ಸಾಧಿಸುತ್ತ ಅರಿವಿಗೆ ಬೇರೆಯಾದ ದೇಹವಿರುವುದೇ ಬೇರೆಯಿಡಲು ಸಾಧ್ಯವೇ ಎಂಬುದನ್ನು ಲಕ್ಕಮ್ಮನ ವಚನ ತಿಳಿಸುತ್ತದೆ.

"ಉಂಡೊಡೆಯರಲ್ಲಿ ಕೊಂಬ ಪ್ರಸಾದ ಕಾರಿದ ಕೂಳು
ಸಣ್ಣವರಲ್ಲಿ ಕೊಂಬ ಪ್ರಸಾದ ಸಂತೆಯ ಸೂಳೆಯ ಎಂಜಲು
ಅಳಿಯನಲ್ಲಿ ಕೊಂಬ ಪ್ರಸಾದ ಅಮೇಧ್ಯ
ಮಕ್ಕಳಲ್ಲಿ ಕೊಂಬ ಪ್ರಸಾದ ಗೋಮಾಂಸ
ತಮ್ಮನಲ್ಲಿ ಕೊಂಬ ಪ್ರಸಾದ ಸಿಂಗಿ
ನಂಟರಲ್ಲಿ ಕೊಂಬ ಪ್ರಸಾದ ನರಮಾಂಸ
ವಂದಿಸಿ ನಿಂದಿಸಿ ಕೊಂಬ ಪ್ರಸಾದವ
ಉರಿಲಿಂಗಪೆದ್ದಿಗಳರಸನೊಲ್ಲನವ್ವಾ"॥[೮]

ದುಡಿಯದೆ ತಿನ್ನುವ ಅಧಿಕಾರ ಯಾರಿಗೂ ಇಲ್ಲ. ತನ್ನ ಹೊಟ್ಟೆ ತುಂಬಿಸಿಕೊಳ್ಳಲು ತಾನೇ ಸಂಪಾದಿಸಿಕೊಳ್ಳಬೇಕು. ಮಕ್ಕಳಿಂದಾಗಲಿ, ಬಂಧುಗಳಿಂದಾಗಲಿ ಯಾವ ಅಪೇಕ್ಷೆಯನ್ನು ಪಡೆಯದೆ ಇರುವುದು ನಿಜವಾದ ಜೀವನ. ಕಾಡಿ - ಬೇಡಿ ಪಡೆದ ಬುತ್ತಿಯನ್ನು ತಂದು ತಿಂದರೆ ದೇವರು ಮೆಚ್ಚನೆಂಬುದು ಕಾಳವ್ವೆಯ ವಚನ ತಿಳಿಸುತ್ತದೆ.

"ಗುರುವೆ ಹೆತ್ತಪ್ಪನಾಗಿ ಲಿಂಗ ಮದುವಣಿಗನಾದ ।
ನಾರೀ ಮಹಾದೇವಿ ನಾನೇ ಮದುವಿ ಮಗಳಾದೆ ।
ಹರಶರಣ - ಶರಣೆಯರು ನಿಬ್ಬಣಿಗರಾಗುತ ।
ಕರೆತಂದರೆನ್ನ ಪತಿಯ ಮನೆಗೆ ಪ್ರಭುದೇವ ।
ಪಚ್ಚೆಯದ ನೆಲಗಟ್ಟು ಕನಕದ ತೋರಣ ।
ವಜ್ರದ ಕಂಭ ಮುತ್ತಿನ ಸರವೂ ಕಟ್ಟೂತ ।
ಹವಳದ ಹಂದರ ಹಾಕಿ ಮದುವೆ ಮಾಡಿದರಣ್ಣ ।
ಚೆನ್ನ ಮಲ್ಲಿಕಾರ್ಜುನ (ಮಲ್ಲಯ್ಯ)ನೆನ್ನ ಪತಿಯು ಪ್ರಭುದೇವ
ಹುಟ್ಟು ಸಾವುಗಳಿಲ್ಲ, ಕುಲವು ಗೋತ್ರಗಳಿಲ್ಲ ।
ಕೆಟ್ಟಗುಣದವನಲ್ಲ ಎನ್ನ ಪತಿರಾಯ ।
ನಿಷ್ಠೆವಂತರ ಮನಕೆ ಮೆಚ್ಚಿ ಬುರುತಿಹನಲ್ಲಿ ।
ಶ್ರೇಷ್ಠ ಚೆನ್ನಮಲ್ಲಯ್ಯನೊಲವು ನೋಡಾ ಪ್ರಭುದೇವಾ ।
ಪುಣ್ಯವಂತಿಯು ನಾನು, ಭಾಗ್ಯದ ದೇವತೆ ।
ಕಿನ್ನರಿ ದೇವಾ ಬಂಧು ಎನಗಾದ ।
ಮುನ್ನ ಬರುತಿರುವ ಏಳು ಜನ್ಮಗಳಲ್ಲಿಯೂ ।
ಚೆನ್ನಮಲ್ಲಯ್ಯನೆನ್ನ ಪತಿಯು ಪ್ರಭುದೇವ ।
ಹಗಲು ಹನ್ನೆರಡು ತಾಸು, ರಾತ್ರಿಗಳಲ್ಲಿಯೂ ।
ಜಗದೊಡೆಯ ಪತಿಯ ಕಳವಳವೆನ್ನ ಎದೆಯೊಳು ।
ಸಗ್ಗ ಸೌಖ್ಯಗಳೆಲ್ಲ ಪತಿಯ ಚರಣಗಳಲ್ಲಿ
ಹುಗಿದು ಮುಕುತಿಯ ಪಡೆವೆ ನೋಡ ಪ್ರಭುದೇವ"[೪]

ಇವರಿಬ್ಬರ ಸಂಭಾಷಣೆಯ ವಚನ ವೈಖರಿಯನ್ನು ಹಳ್ಳಿಗಳಲ್ಲಿ ಮದುವೆ ಪದವಾಗಿ ಮತ್ತು ಮಂಗಳ ಕಾರ್ಯದಲ್ಲಿ ಹಾಡುತ್ತಾರೆ. ದೀಕ್ಷೆ ಕೊಟ್ಟ ಗುರುವನ್ನು ತಂದೆಯಾಗಿ ಕಾಣುತ್ತ, ಲಿಂಗದಲ್ಲಿ ತನ್ನ ಪತಿ ಚನ್ನಮಲ್ಲಿಕಾರ್ಜುನನನ್ನು ಕಾಣುತ್ತಾಳೆ.

"ಮಗಳೆ ಪರಮಾತ್ಮನು (ಇಷ್ಟಲಿಂಗ) ನಿನ್ನ ಪತಿ.
ಅವನಿಗೆ ನಿನ್ನ ಅಂಗ ಗುಣಗಳನ್ನೆಲ್ಲ ಎಡೆ ಮಾಡು.
ವಿಷಯ ಸುಖದ ಕಡೆಗೆ ಮನಸ್ಸನ್ನು ಕೊಡಬೇಡ.
ಪ್ರಾತಃಕಾಲದಲ್ಲಿ ಮನೆಯ (ಮನ) ಕಸವನ್ನು ತೆಗೆದು ಪೂಜೆಗೆ ತೊಡಗು.
ಮನೆಯಲ್ಲಿ (ಮನಸ್ಸಿನಲ್ಲಿ) ಕತ್ತಲೆ ಬೀಳದಂತೆ ನೋಡಿಕೋ.
ಮತಿ ಮಸುಳದಂತಿರು; ಉತ್ತಮರ ಸಹವಾಸ ಮಾಡು.
ಪತಿಯು ಕೋಪಗೊಳ್ಳಲು ಅವಕಾಶ ಕೊಡಬೇಡ.
ಹಗಲು ರಾತ್ರಿ ಅವನ ಧ್ಯಾನದಲ್ಲಿರು; ಬೇಸರ ಪಡಬೇಡ.
ನಿನ್ನ ಪತಿ ಕಾಮಜಿತ; ನೀನು ಅತಿಕಾಮಿ. ಮನಶುದ್ಧಿಯಿಂದಿರು.

ಘನಬೋನವನ್ನು ಇನಿಯಂತೆ ಎಡೆಮಾಡು;
ನೀನು ತಪ್ಪು ಮಾಡಿ ಕಾಲು ಪಿಡಿವಡೆ ಅವನಿಗೆ ಕಾಲಿಲ್ಲ.
ನೀ ಹಿಡಿವಡೆ ಅವನಿಗೊಡಲಿಲ್ಲ".೧೧

ಈ ಆಧ್ಯಾತ್ಮ ಸಾಧನೆಯ ಸಾಧಕರು ಮಗಳನ್ನು ಮನಸ್ಸಿಗೆ ಹೋಲಿಸಿ ತಿಳುವಳಿಕೆಯನ್ನು ಹೇಳುತ್ತಾರೆ. ಶರಣ ಸತಿ-ಲಿಂಗ ಪತಿ ಎನ್ನುವ ಮಾತನ್ನು ಗಮನಿಸಬಹುದು. ಇವರಿಗೆ ಬೆಟ್ಟವೆಂಬುದು ಸಿಂಹಾಸನವಿದ್ದಂತೆ.

"ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತ
ಎನ್ನೊಡಲಿಂಗೆ, ಎನ್ನೊಡವೆಗೆ, ಎನ್ನ ಮಡದಿ -
ಮಕ್ಕಳಿಗೆಂದು ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ !
"ಆಸನೇ ಶಯನೇ ಯಾನೇ ಸಂಪರ್ಕೇ ಸಹ ಭೋಜನೇ ।
ಸಂಚರಂತಿ ಮಹಾಘೋರೆ ನರಕೇ ಕಾಲಮಕ್ಷಯಂ।" ಎಂಬ
ಶ್ರುತಿಯ ಬಸವಣ್ಣನೋದುವನೆಂಬರು
"ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನೆಂದು
ನುಡಿವರಯ್ಯಾ ಪ್ರಮಥರು ಕೊಡುವೆನುತ್ತರವನವರಿಗೆ,
ಕೊಡಲ (ಮ್ಮುವೆ) ಹೊಲೆ-ಹೊಲೆಯರ ಮನೆಯ ಹೊಕ್ಕು
ಸಲೆ ಕೈಕೂಲಿಯ ಮಾಡಿಯಾದರೆಯೂ ನಿಮ್ಮ ನಿಲುವಿಂಗೆ ಕುದಿವೆನಲ್ಲದೆ
ಎನ್ನೊಡಲವಸರಕ್ಕೆ ಕುದಿದೆನಾದರೆ 'ತಲೆದಂಡ' ಕೂಡಲ ಸಂಗಮದೇವಾ॥"೧೧

ಬಸವಣ್ಣನ ಈ ವಚನದಲ್ಲಿ ಆತ್ಮ ನೋವನ್ನುಂಡ ದೃಷ್ಟಾಂತವಿದೆ. ಕಾಯಕದ ಪ್ರತಿಫಲ, ನಿಸ್ವಾರ್ಥಕ್ಕೆ, ಬಯಲೆಂಬಂತೆ ಕೆಟ್ಟವರ ಕೆಟ್ಟ ಮಾತುಗಳ ಇಲ್ಲಿ ಕಾಣಬಹುದು.

"ಅಟ್ಟಿಯ ಚುಚ್ಚುವ ಉಳಿಯ ಮೊನೆಯಲ್ಲಿ,
ಪ್ರತ್ಯಕ್ಷವಾದ ಪರಮೇಶ್ವರನ ಕಂಡು,
ಇತ್ತಲೇಕಯ್ಯಾ, ಕಾಯದ ತಿತ್ತಿಯ ಹೊತ್ತಾಡುವನ ಮುಂದೆ?
ನಿನ್ನ ಭಕ್ತರ ಠಾವಿನಲ್ಲಿಗೆ ಹೋಗಿ ಮುಕ್ತಿಯ ಮಾಡು
ನೀ ಹೊತ್ತ ಬಹುರೂಪದಿ ತಪ್ಪದೇ
ರಜತ ಬೆಟ್ಟದ ಮೇಲಕ್ಕೆ ಹೋಗು,
ನಿನ್ನ ಭಕ್ತರ ಮುಕ್ತಿಯ ಮಾಡು
ಕಾಮಧೂಮ ಧೂಳೇಶ್ವರನ ಕರುಣದಿಂದ ನೀನೇ ಬದುಕು".೧೨

ಕಾಯಕದಲ್ಲಿ ದೇವರನ್ನು ಕಾಣುವ ಧೂಳಯ್ಯ ಸದಾ ಶಿವನ ಧ್ಯಾನದಲ್ಲಿಯೇ ತನ್ನ ಕಾಯಕವನ್ನು ಮಾಡಿ ಮುಗಿಸುವವ. ಒಮ್ಮೆ ಇವನು ಕೆರ ಹೊಲಿಯುವ ಕಾಯಕದಲ್ಲಿರುವಾಗ ಶಿವ ಪ್ರತ್ಯಕ್ಷನಾದಂತೆ; ಇದರ ಪರಿವಿಲ್ಲದೆ ತನ್ನ ಕಾಯಕದಲ್ಲಿ ಮಗ್ನನಾಗಿದ್ದನೆಂಬುದು ಮಾದಾರ ಧೂಳಯ್ಯನ ವಚನದಲ್ಲಿ ಕಂಡುಬರುತ್ತದೆ.

"ಎನ್ನ ಸ್ಥೂಲತನುವೆ ಬಸವಣ್ಣನಯ್ಯಾ
ಎನ್ನ ಸೂಕ್ಷ್ಮತನುವೆ ಚನ್ನಬಸವಣ್ಣನಯ್ಯಾ
ಎನ್ನ ಕಾರಣತನುವೆ ಪ್ರಭುದೇವರಯ್ಯಾ
ಇಂತಿವರ ಕರುಣದಿಂದಲಾನು ಬದುಕಿದೆನಯ್ಯಾ.
ಕದಿರರೆಮ್ಮಿಯೊಡೆಯ ಗುಮ್ಮೇಶ್ವರಾ.
ಎಲ್ಲರ ಗಂಡಂದಿರು ಪರದಳ ವಿಭಾಡರು;
ಎನ್ನ ಗಂಡ ಮನದಳವಿಭಾಡ.
ಎಲ್ಲರ ಗಂಡಂದಿರು ಗಜವೇಂಟೆಕಾರರು;
ಎನ್ನ ಗಂಡ ಮನವೇಂಟೆಕಾರ.
ಎಲ್ಲರ ಗಂಡಂದಿರು ತಂದಿಕ್ಕಿಸಿಕೊಂಬರು;
ಎನ್ನ ಗಂಡ ತಾರದೆ ಇಕ್ಕಿಸಿಕೊಂಬ.
ಎಲ್ಲರ ಗಂಡಂದಿರಿಗೆ ಮೂರು
ಎನ್ನ ಗಂಡಂಗೆ ಅದೊಂದೆ; ಅದೊಂದೆ ಸಂದೇಹ,
ಕದಿರರೆಮ್ಮಿಯೊಡೆಯ ಗುಮ್ಮೇಶ್ವರಾ.

ನಾ ತಿರುಹುವ ರಾಟೆಯ ಕುಲಜಾತಿಯ ಕೇಳಿರಣ್ಣಾ;
ಅಡಿಯ ಹಲಗೆ ಬ್ರಹ್ಮ; ತೋರಣ ವಿಷ್ಣು;
ನಿಂದ ಬೊಂಬೆ ಮಹಾರುದ್ರ;
ರುದ್ರನ ಬೆಂಬಳಿಯವೆರಡು ಸೂತ್ರಕರ್ಣ,
ಅರಿವೆಂಬ ಕದಿರು, ಭಕ್ತಿಯೆಂಬ ಕೈಯಲ್ಲಿ ತಿರುಹಲಾಗಿ
ಸುತ್ತಿತು ನೂಲು; ಕದಿರು ತುಂಬಿತ್ತು.
ರಾಟೆಯ ತಿರುಹಲಾರೆ ಎನ್ನ - ಗಂಡ ಕುಟ್ಟಿಹ;
ಇನ್ನೇವೆ ಕದಿರ ರೆಮ್ಮಿಯೊಡೆಯ ಗುಮ್ಮೇಶ್ವರಾ?"[೧೩]

ಶರಣಸತಿ ಲಿಂಗಪತಿಯ ಭಾವವನ್ನು ಇಲ್ಲಿ ವ್ಯಕ್ತಪಡಿಸಿದೆ. ರೆಮ್ಮವ್ವೆ ನೇಯ್ಗೆ ಕಾಯಕದಿಂದ ಬಂದ ಹಣದಿಂದ ಜಂಗಮ ದಾಸೋಹ ಮಾಡಿಸುವಳು. ತನ್ನ ಗಂಡನೆಂದು ಭಾವಿಸಿದ ಪರಮಾತ್ಮನನ್ನು ಕುರಿತು ವಚನದಲ್ಲಿ ಗಂಡನ ಮೇಲಿನ ಮೋಹದ ಮಾತುಗಳನ್ನಾಡಿದ್ದಾಳೆ. ರೆಮ್ಮವ್ವೆ ರಾಟೆಯಿಂದ ತೆಗೆಯುವ ನೂಲನ್ನು ಅರಿವು ಭಕ್ತಿಗೆ ಹೋಲಿಸಿರುವುದನ್ನು ಕಾಣುತ್ತೇವೆ.

"ಮನದೊಡೆಯ ಮಹಾದೇವ ಮನವ ನೋಡಿಹನೆಂದು
ಮನುಜರು ಕೈಯಿಂದ ಒಂದೊಂದೆ ನುಡಿಸುವನು
ಇದಕ್ಕೆ ಕಳವಳಿಸದಿರು ಮನವೆ, ಕಾತರಿಸದಿರು ತನುವೆ,
ನಿಜವ ಮರೆಯದಿರು ಕಂಡಾ, ನಿಶ್ಚಿಂತನಾಗಿರು ಮನವೆ
ಬಸವಣ್ಣ ಪ್ರಿಯ ಚನ್ನಸಂಗಯ್ಯನು
ಬೆಟ್ಟದನಿತಪರಾಧವನು ಒಂದು ಬೊಟ್ಟಿನಲ್ಲಿ ತೊಡೆವನು.

ಎನ್ನ ಭವದ ಬಳ್ಳಿಯ ಬೇರು ಹಣಿಯಿತ್ತಯ್ಯಾ
ಸಂಗನ ಬಸವಣ್ಣನ ಒಕ್ಕುದ ಕೊಂಡೆನಾಗಿ
ಎನ್ನ ಮನದ ಕಪಟ ಹಿಂಗಿತ್ತಯ್ಯಾ
ಚನ್ನಬಸವಣ್ಣನ ಕರುಣವ ಪಡೆದನಾಗಿ
ಎನ್ನಂತರಂಗದ ಸಂದು ಸಂಶಯ ತೊಲಗಿತ್ತಿಂದು
ಬಸವಣ್ಣ ಪ್ರಿಯ ಚನ್ನಸಂಗಯ್ಯನಲ್ಲಿ
ಎನ್ನ ಪರಮಗುರು ಅಲ್ಲಮಾ ಪ್ರಭು ದೇವರ
ಶ್ರೀ ಚರಣವ ಕಂಡೆನಾಗಿ".[೧೪]

ತನ್ನ ಮನದ ಇಂಗಿತವನ್ನು, ಅದರ ಪರಿಯನ್ನು ಹೇಳುತ್ತಾಳೆ. ತನ್ನಲ್ಲಿರುವ ಸುಳ್ಳು ಎಂಬ ಮಾಯೆ ತನ್ನಿಂದ ದೂರವಾಗಿ ತನ್ನ ಅಂತರಂಗದಲ್ಲಿ ಸಂಶಯವಿತ್ತು ಅದು ಪರಿಹಾರ ವಾಯಿತೆಂಬ ಮಾತನ್ನು ಹೇಳುವುದು ಅಕ್ಕನಾಗಮ್ಮನ ವಚನದಿಂದ ತಿಳಿಯುತ್ತದೆ.

"ಅಡ್ಡಬಿದ್ದು ಶಿಷ್ಯನ ಮಾಡಿಕೊಂಬ ದಡ್ಡ ಪ್ರಾಣಿಗಳನೇನೆಂಬೆನಯ್ಯ?
ಏನೇನೂ ಅರಿಯದ ಎಡ್ಡ ಮಾನವರಿಗೆ ಉಪದೇಶ ಮಾಡುವ
ಗೊಡ್ಡು ಮಾನವನ ಮುಖ ತೋರದಿರಯ್ಯ.
ಅದೇನು ಕಾರಣವೆಂದಡೆ, ಆ ಗೊಡ್ಡ ಜೀವಿಯ ಪ್ರಪಂಚವ ಕಳೆಯಲಿಲ್ಲ
ಅವನ ಪಂಚೇಂದ್ರಿಯಂಗಳು ಸಪ್ತ, ವ್ಯಸನಂಗಳ ಅಷ್ಟಮದಂಗಳೆಂಬ
ಗುಣಂಗಳ ಬಿಡಿಸಲಿಲ್ಲ.
ಸೂತಕ ಪಾತಕಂಗಳ ಕಡೆಸಿ, ಮೂರು ಮಲಂಗಳ ಬಿಡಿಸಿ
ಮುಕ್ತಿ ಪಥಂಗಳನರುಹಲಿಲ್ಲ.
ಮಹಾಶೂನ್ಯ ನಿರಾಳ ನಿರಂಜನ ಲಿಂಗವ, ಕರ ಮನ ಭಾವ ಸರ್ವಾಂಗದಲ್ಲಿ
ತುಂಬಿ, ನಿತ್ಯನೆಂದೆನಿಸಲಿಲ್ಲ.
ಇದನರಿಯದ ವ್ಯರ್ಥ ಕಾಯರುಗಳ ಗುರುವೆಂದಡೆ
ಪ್ರಮಥರು ಮೆಚ್ಚುವರೆ?
ಇಂತಪ್ಪ ಗುರು ಶಿಷ್ಯರೀರ್ವರೂ ಅಜ್ಞಾನಿಗಳು.
ಅವರು ಇಹಪರ ಲೋಕಕ್ಕೆ ಹೊರಗೆಂದಾತ ಅಂಬಿಗರ ಚೌಡಯ್ಯ"[೧೫]

ಲೋಕದಲ್ಲಿರುವ ಅನೇಕ ಗುರುಗಳನ್ನು ನೋಡಿ ನನಗೆ ಬೇಸರವಾಗಿದೆ. ನೂರಾರು ಗುರುಗಳು ಶಾಸ್ತ್ರವನ್ನು ಹೇಳುವಂಥವರು. ನೂರಾರು ಗುರುಗಳು ಕುಬೇರರು. ಮಂತ್ರ-ತಂತ್ರಗಳಿಂದ ಸುಖ-ದುಃಖಗಳನೀವ ನೂರಾರು ಗುರುಗಳು ಜ್ಞಾನವಿಲ್ಲದೆಯಿರುವವರನ್ನು ಸಂಶಯಾದಿಗಳಿಗೆ ಸರಿಯಾದ ಜ್ಞಾನವನ್ನು ತುಂಬಿ ಅವರ ಅಪನಂಬಿಕೆಯನ್ನು ಜ್ಞಾನದಿಂದ ದಹಿಸಿ ಜ್ಞಾನದ ಅರಿವಿನ ಬೆಳಕಿನಲ್ಲಿ ಶಿಷ್ಯನನ್ನು ತರುವವನೇ ನಿಜವಾದ ಗುರು ಎಂದು ಅಂಬಿಗರ ಚೌಡಯ್ಯ ವಚನವೊಂದರಲ್ಲಿ ಹೇಳುತ್ತಾನೆ.

"ಸತಿ ಸಂಗವತಿ ಸುಖವೆಂದರಿದೊಡೇನು, ಗಣ ಸಾಕ್ಷಿಯಾಗಿ
ವಿವಾಹವಾಗದನ್ನಕ್ಕರ? ಕಣ್ಣು ಕಾಂಬುದೆಂದಡೆ,
ಕತ್ತಲೆಯಲ್ಲಿ ಕಾಂಬುದೇ ದೀಪವಿಲ್ಲದನ್ನಕ್ಕರ?
ಸೂರ್ಯನ ಪ್ರಕಾಶದಿಂದ ಕಂಡು ತಾನೆ ಕಂಡೆನೆಂಬ
ಜಗದ ನಾಣ್ಣುಡಿಯಂತಾಯಿತ್ತು. ಅಂಗವ ಬಿಟ್ಟು ಆತ್ಮನುಂಟೆ?
ಶಕ್ತಿಯ ಬಿಟ್ಟು ಶಿವನುಂಟೇ? ಇದು ಕಾರಣ
ಸ್ಥೂಲ ಸೂಕ್ಷ್ಮ ಕಾರಣವೆಂಬ ತನುತ್ರಯವಿರಲು,
ಇಷ್ಟ ಪ್ರಾಣ ಭಾವವೆಂಬ ತ್ರಿವಿಧ ಲಿಂಗ, ಸಂಬಂಧ
ಬೇಡವೆಂದರೆ, ಅಸಂಖ್ಯಾತ ಪ್ರಮಥ ಗಣಂಗಳೊಪ್ಪುವರೇ?
ಕೂಡಲ ಚನ್ನ ಸಂಗಯ್ಯನಲ್ಲಿ ಇಷ್ಟಲಿಂಗಸಂಬಂಧವಿಲ್ಲದವರ
ಮುಖವ ನೋಡಲಾಗದಯ್ಯ ಪ್ರಭುವೇ"[೧೬]

ದೇಹದಲ್ಲಿ ಇಷ್ಟಲಿಂಗ ಸ್ಥಾಪಿಸಿದುದಲ್ಲದೆ ಪ್ರಾಣಲಿಂಗವೆಂಬುದು ಸಂಬಂಧಿಸಿರುವುದಿಲ್ಲ. ಆತ್ಮವು ದೇಹವನ್ನು ಬಿಟ್ಟಿರುವುದು ಸಾಧ್ಯವಿಲ್ಲ. ಶಕ್ತಿಯನ್ನು ಬಿಟ್ಟು ಶಿವನಿರಲಾರ, ಕಣ್ಣು ಕಾಣದ್ದನ್ನು ಒಪ್ಪದೆ ಬೆಳಕಿಲ್ಲವೆನ್ನುವವರು ಇರುವಾಗ ಒಪ್ಪುವವರಾರು. ಎಷ್ಟೇ ರುಚಿಯಾಗಿರುವ ಹಣ್ಣನ್ನು ಸವಿಯಬೇಕಾದರೆ ಅದು ಮರದಿಂದಲೇ ಬರಬೇಕೆನ್ನುವುದು ಚನ್ನಬಸವಣ್ಣನ ವಚನದಿಂದ ತಿಳಿಯುತ್ತದೆ.

"ಓಂಕಾರವೆಂಬ ವೃಕ್ಷದಲ್ಲಿ ಋಗ್ವೇದ ಯಜುರ್ವೇದ ಸಾಮವೇದ
ಅಥರ್ವಣ ವೇದಗಳೆಂಬ ನಾಲ್ಕು ಶಾಖೆಗಳು.
ವೇದಾಂಗಗಳೆಂಬ ಉಪಶಾಖೆಗಳು, ಶಾಸ್ತ್ರಗಳೆಂಬ ಅಂಕುರ ಪಲ್ಲವಗಳು,
ಪುರಾಣಗಳೆಂಬ ಪುಷ್ಪಗಳು, ಆಗಮಗಳೆಂಬ ಕಾಯಿ ಬಲಿದು
ಶ್ರೀ ಪಂಚಾಕ್ಷರಿಯೆಂಬ ಮಧುರಸ ಹಣ್ಣುಗಳು
ಅಗಣಿತ ಫಲವನು ಅನಂತಕಾಲ ಭೋಗಿಸಲು,
ಮತ್ತು ಜಿಹ್ವೆಯೊಳಗೆ ಬಂದಿರಲು ಭೋಗಿಸಿ ಸುಖಿಯವುದಲ್ಲದೆ,
ಇತರ ವಿದ್ಯೆಗಳೆಂಬ ಸಸಿಯ ಸಾಕಿ ಸಲಹಲುಂಟೇ,
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ"[೧೭]

ಶರಣರು ಓಂ ನಮಃ ಶಿವಾಯ ಎಂಬ ಮಂತ್ರಕ್ಕೆ ಪ್ರಾಮುಖ್ಯತೆಯನ್ನು ನೀಡಿದ್ದಾರೆ. ದೇವನೊಬ್ಬನೇ ಎಂಬ ನಂಬಿಕೆಯನ್ನು ಇದು ತಿಳಿಸುತ್ತದೆ. ಪಂಚಾಕ್ಷರಿಯ ಮಂತ್ರ ಈ ಎಲ್ಲ ಶಾಸ್ತ್ರಗಳ ಅರ್ಥದ ಸಾರ. ಇದರ ಮಧುರಸದ ಹಣ್ಣು ಇದನ್ನು ಸವಿದವರು ಸುಖಪಟ್ಟರೆ ಸಾಕು ಇದರ ಮುಂದೆ ಉಳಿದೆಲ್ಲವು ಶೂನ್ಯವೆಂಬುದು ಈ ಮಂತ್ರದ ಮಹಿಮೆಯಲ್ಲಿದೆ ಎಂಬುದು ಉರಿಲಿಂಗಪೆದ್ದಿಯ ವಚನದಲ್ಲಿದೆ.

ನಿನ್ನ ನೀ ತಿಳಿದು ನೋಡಿದರೆ ಶಿವಮಯ ಜಗತ್ತು ನೋಡಾ.
ಓಂಕಾರ ಪ್ರಣಮವೇ ಪ್ರಕೃತಿಯಾಗಿ ನಿಂದಿತ್ತು.
ನಕಾರ ಪ್ರಣಮವೇ ಪೃಥ್ವಿಯಾಗಿ ನಿಂದಿತ್ತು.
ಮಕಾರ ಪ್ರಣಮವೇ ಉದಕವಾಗಿ ನಿಂದಿತ್ತು.
ಶಿಕಾರ ಪ್ರಣಮವೇ ಅಗ್ನಿಯಾಗಿ ನಿಂದಿತ್ತು.
ವಕಾರ ಪ್ರಣಮವೇ ವಾಯುವಾಗಿ ನಿಂದಿತ್ತು.
ಯಕಾರ ಪ್ರಣಮವೇ ಸರ್ವವಸ್ತು ಆಚರಿಸುವುದಕ್ಕೆ
ಆಕಾಶವಾಗಿ ನಿಂದಿತ್ತು.
ನೆನೆನೆನೆದು ಸುಖಿಯಾದೆನು ನೋಡಾ
ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗನೇ"[೧೮]

ಮನುಜನು ತನ್ನನ್ನು ತಾನು ಅರಿತಾಗ ಜಗತ್ತೇನೆಂಬುದು ತಿಳಿಯುತ್ತದೆ. ತನ್ನನ್ನೇ ಅರಿಯದಿದ್ದರೆ ಜಗತ್ತನ್ನರಿಯುವುದು ಅಸಾಧ್ಯ. ಪ್ರಕೃತಿಯು ಶಿವಮಯ. ಪ್ರಕೃತಿಯ ಸೃಷ್ಟಿಯು ಶಿವನಿಂದಲೆಂಬುದು ಮನುಜನ ಅರಿವಿಗೆ ಬರುವುದು. ಪ್ರಕೃತಿಯಲ್ಲಿ ಬರುವ ಗಾಳಿಯಲ್ಲಿಯೂ ಓಂಕಾರ ನಾದ ತುಂಬಿರುತ್ತದೆ. ಈ ಓಂಕಾರದಲ್ಲಿಯೇ ಸರ್ವ ಶಕ್ತಿಯು ಅಡಗಿದೆ, ಪೃಥ್ವಿ ಅಗ್ನಿ, ವಾಯು ಎಲ್ಲವೂ ಈ ಓಂಕಾರದಲ್ಲಿದೆ ಎಂಬುದು ಸಿದ್ಧರಾಮನ ವಚನದ ತಾತ್ಪರ್ಯ.

ದಾಸರ ಪದಗಳನ್ನು ಆಲಿಸಿದರೆ ಅದರಲ್ಲಿ ಅವರ ಅನುಭವವೇ ತುಂಬಿರುತ್ತದೆ. ಜನಸಾಮಾನ್ಯನ ಬುದ್ಧಿಗೆ ಅದು ನಿಲುಕುವುದಿಲ್ಲ. ದಾಸರ ಸಾಹಿತ್ಯದಲ್ಲಿ ಭಕ್ತಿಯ ಭಾವವನ್ನು ಕಾಣಬಹುದು. ಭಗವಂತನ ಸ್ವರೂಪವನ್ನು ತಿಳಿಯಬಹುದು. ದಾಸರ ಸಾಹಿತ್ಯವೆಂದರೆ ಸಹಜವಾಗಿ ಗ್ರಹಿಕೆಗೆ ಮೂಡುವುದು ಇದು ಪಂಡಿತರ ಸಾಹಿತ್ಯ. ಆದರೆ ಇದು ಪಂಡಿತರಿಗೂ ಸಂಬಂಧಿಸಿರುವುದಿಲ್ಲ. ದಾಸ ಸಾಹಿತ್ಯವು ಸಮುದ್ರವಿದ್ದಂತೆ. ಇದರಲ್ಲಿ ಇಳಿದವರಿಗೆ ಇದರ ಆಳವೇನೆಂಬುದು ತಿಳಿಯುವುದು. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ದಾಸ ಸಾಹಿತ್ಯಕ್ಕೆ ವಿಶಿಷ್ಟವಾದ ಸ್ಥಾನಮಾನವಿದೆ.

ದಾಸ ಸಾಹಿತ್ಯದ ಮುಖ್ಯ ಪ್ರತಿಪಾದನೆ ಹರಿಭಕ್ತಸಾರ ದಾಸರು ಹರಿಯನ್ನು ನೆನೆಯುವುದು. ದಾಸರು ರಾಮ, ವಿಷ್ಣು, ಕೃಷ್ಣ ಹೀಗೆ ಎಲ್ಲರಲ್ಲಿಯೂ ಭಕ್ತಿಯನ್ನು ಮುಖ್ಯವಾಗಿಟ್ಟುಕೊಂಡು ಭಕ್ತಿಯ ಮಹತ್ವವನ್ನು ಮುಖ್ಯ ಕೇಂದ್ರವಾಗಿಸಿದ್ದಾರೆ. ಮಾನವ ಜೀವಿಯನ್ನು ಸೃಷ್ಟಿಸಿ ಉಳಿಸಿ ಬೆಳೆಸುವವನು ಭಗವಂತನೆ. ಹಾಗೆಯೇ ತಪ್ಪು ಒಪ್ಪಿನ ಮಾರ್ಗವನ್ನು ತೋರಿಸುವವನು ಅವನೇ. ಮನುಷ್ಯನಲ್ಲಿಯ ವರ್ತನೆಗಳನ್ನು ಬದಲಾಯಿಸುವವನು ಮತ್ತು ಅದನ್ನು ರೂಪಿಸುವವನು ಭಗವಂತ ಎಂಬುದನ್ನು ದಾಸರು ಪದಗಳಲ್ಲಿ ನಿರೂಪಿಸಿದ್ದಾರೆ.

ಭಗವಂತನನ್ನು ಕಾಣಲು ಜೀವನದಲ್ಲಿ ಒಬ್ಬ ವ್ಯಕ್ತಿ ತನ್ನದು ಎನ್ನುವುದನ್ನೆಲ್ಲ ತ್ಯಜಿಸಿ ಭಯವನ್ನು ಬಿಟ್ಟು ಡಂಬಾಚಾರವನ್ನು ತೊರೆದು ಮನಸ್ಸನ್ನು ಶುದ್ಧವಾಗಿಸಿಕೊಳ್ಳಬೇಕು. ಹಾಗೆಯೇ

ದೇಹದ ಅಂತರಾತ್ಮವನ್ನು ನಿರಾಳಗೊಳಿಸಿ ಭಗವಂತನಲ್ಲಿ ಭಕ್ತಿಯನ್ನಿರಿಸಿ ಕನಸಿನಲ್ಲೂ ಭಗವಂತನನ್ನು ಸ್ಮರಿಸಿದರೆ ಭಗವಂತನಿಗೆ ಪ್ರಿಯರಾಗಿ ಅವರ ದರ್ಶನಭಾಗ್ಯದಿಂದ ಅನುಭಾವಿಗಳಾಗಬಹುದೆಂಬುದು ದಾಸರು ಹೇಳುತ್ತಾರೆ.

ವಚನ ಸಾಹಿತ್ಯ ಮತ್ತು ದಾಸ ಸಾಹಿತ್ಯಕ್ಕೆ ಅವಿನಾಭಾವ ಸಂಬಂಧವಿದೆ. ವಚನ ಸಾಹಿತ್ಯದ ಕೇಂದ್ರಬಿಂದು ಶಿವ. ದಾಸ ಸಾಹಿತ್ಯದ ಕೇಂದ್ರಬಿಂದು ಹರಿ. ಇವೆರಡರಲ್ಲಿರುವ ಒಂದು ಹೋಲಿಕೆ ಭಕ್ತಿಯ ಸಾರ. ಈ ನಾಮಗಳೆರಡು ಬೇರೆ ಬೇರೆಯಾದರೂ ಅರ್ಥ ಮಾತ್ರ ಒಂದೇ. ಇಲ್ಲಿ ಸ್ವಲ್ಪ ಅಂತರವಿದೆ. ವಚನಕಾರರು ಶಿವ ಶಿವ ಎಂದು ಅವನನ್ನೇ ಕೊಂಡಾಡಿದರೆ, ದಾಸರು ಹರಿ, ವಿಷ್ಣು, ಕೃಷ್ಣ ಎಲ್ಲರಲ್ಲಿಯೂ ಭಕ್ತಿಯನ್ನು ಮುಖ್ಯವಾಗಿಟ್ಟುಕೊಂಡು ಭಕ್ತಿಯ ಮಹತ್ವವನ್ನು ಮುಖ್ಯ ಕೇಂದ್ರವಾಗಿರಿಸಿದ್ದಾರೆ(ಮೋಕ್ಷ ಸಾಧನೆ, ದಾಸರ ಹೇಳಿಕೆ).

ದಾಸ ಸಾಹಿತ್ಯ ತನ್ನದೇ ಆದ ಮೌಲ್ಯವನ್ನು ಹೊಂದಿದೆ. ಶರಣರ ವಚನಗಳಂತೆ ತತ್ವಪದಕಾರರ ತತ್ವಪದಗಳಂತೆ ಈ ದಾಸರ ಕೀರ್ತನೆಗಳು ಶರಣರು ತಮ್ಮ ವಚನಗಳಲ್ಲಿ ಶಿವನನ್ನು ನೆನೆದರೆ ತತ್ವಪದಕಾರರು ತಮ್ಮ ತತ್ವಪದಗಳಲ್ಲಿ ಗುರುಶಿಷ್ಯರ ಸಂಬಂಧವನ್ನು ತೋರಿಸಿದ್ದಾರೆ; ದಾಸರು ಶ್ರೀರಾಮ, ಶ್ರೀಕೃಷ್ಣನ ಲೀಲೆಯನ್ನು ತಮ್ಮ ಕೀರ್ತನೆಗಳಲ್ಲಿ ಕೊಂಡಾಡಿದ್ದಾರೆ. ಹಾಗೂ ಮಾನವನ ಜನ್ಮದ ಮೌಲ್ಯವನ್ನು ತಿಳಿಸಿಕೊಟ್ಟಿದ್ದಾರೆ. ಭೂಮಿಯ ಮೇಲೆ ಈ ಜನ್ಮ ತಾಳುವುದು ಪುಣ್ಯದ ಫಲವಾಗಿದೆ. ಆದರೆ ಮನುಷ್ಯ ತನ್ನ ಬಯಕೆಯ ಸುಳಿಯಲ್ಲಿ ಸಿಲುಕಿ ತನ್ನ ಜೀವನವನ್ನು ಹಾಳು ಮಾಡಿಕೊಳ್ಳುತ್ತಾನೆ. ಇದನ್ನೆಲ್ಲ ದಾಸರು ತಮ್ಮ ಕೀರ್ತನೆಗಳಲ್ಲಿ ಹೇಳಿದ್ದಾರೆ.

'ಮೋಕ್ಷ ಸಾಧನೆಗೆ ಭಕ್ತಿಮಾರ್ಗವೇ ಸರಳ ಮಾರ್ಗವೆಂದು ಸಾರಿ ಹೇಳಿದ ದಾಸರು ನೀತಿ ನಿರ್ಮಲ, ಜೀವನ ಕ್ರಮವನ್ನು ಪ್ರತಿಪಾದಿಸಿದರು'.

ಮನುಜನು ತನ್ನ ಲೌಕಿಕ ಬಂಧನದಿಂದ ಮುಕ್ತಿಯನ್ನು ಪಡೆಯಲು ಬಯಸಿದಾಗ ಅವನು ನಡೆಯಬೇಕಾದ ಮಾರ್ಗವೊಂದಿದೆ. ಅದೇ ಭಕ್ತಿಯ ಮಾರ್ಗ. ಇದು ಮನುಜನಿಗೆ ಮೋಕ್ಷ ಸಾಧನೆಗೆ ಸುಲಭವಾಗಿ ಮುನ್ನಡೆಸಿಕೊಂಡು ಮುಕ್ತಿಯನ್ನು ಸಿಗುವಲ್ಲಿ ಸಹಾಯ ಮಾಡುವಂಥ ಮಾರ್ಗವೆಂಬುದು ದಾಸರ ಹೇಳಿಕೆಯಾಗಿದೆ.

"ದಾನವರು ಕಲಿಯುಗದೊಳುದ್ಭವಿಸಿ ಬುಧರೆಲ್ಲ ।
ವೇನನ ಮತವನನುಸರಿಸುತಿರಲು ॥
ಜ್ಞಾನಿತಾ ಪವಮಾನ ಭೂತಳದೊಳುದ್ಭವಿಸಿ ।
ಮಾನನಿಧಿ ಮಧ್ವಾಖ್ಯವೆಂದೆನಿಸಿದ ॥

ಆರ್ಭಕತನ ದೊಳೈದಿ ಬದರಿಯಲ್ಲಿ ಮಧ್ವಮುನಿ ।
ನಿರ್ಭಯದಿ ಸಕಲಶಾಸ್ತ್ರವ ಪಠಿಸಿದ ।

ಉರ್ಬಿಯೊಳು ಮಾಯ್ಗಳಿರೆ ತತ್ವಮಾರ್ಗವನೆಲ್ಲ ॥
ಸರ್ಬಸುಜನರಿಗೆ ತೋರ್ದನು ಮೋದದಿ ॥

ಸರ್ವೇಶ ಹರಿ, ವಿಶ್ವ ಎಲ್ಲ ತಾ ಪುಸಿಯೆಂಬ ।
ದುರ್ವಾದಿಗಳ ಮತವ ನೆರೆಖಂಡ್ರಿಸಿ ॥
ಸರ್ವೇಶ ಹರಿ ವಿಶ್ವ ಸತ್ಯವೆಂದರುಹಿದ ।
ಸರ್ವ ಗೀರ್ವಾಣಾದಿ ಸಂತತಿಯಲಿ ॥
ಬದರಿಕಾಶ್ರಮಕ್ಕೆ ಪುನರಪಿಯೈದಿ ವ್ಯಾಸಮುನಿ ।
ಪದಕೆರಗಿ ನಿಖಿಳ ವೇದಾರ್ಥಗಳನು ॥
ಪದುಮನಾಭನ ಮುಖದಿ ತಿಳಿದು ಬ್ರಹ್ಮತ್ವ ।
ವೈದಿದ ಮಧ್ವಮುನಿರಾಯಗಭಿವಂದಿಪೆ ॥

ಜಯಜಯತು ದುರ್ವಾದಿ ಮತ ತಿಮಿರಮಾರ್ತಾಂಡ ।
ಜಯಜಯತು ವಾದಿಗಜ ಪಂಚಾನನ ॥
ಜಯಜಯರು ಚಾರ್ವಾಕ ಗರ್ವಪರ್ವತಕುಲಿಶ ।
ಜಯಜಯ ಜಗನ್ನಾಥ ಮಧ್ವನಾಥ ॥

ತುಂಗಕುಲ ಗುರುವರನ ಹೃತ್ಕಮಲದಲಿ ನಿಲಿಸಿ ।
ಭಂಗವಿಲ್ಲದ ಸುಖವ ಸುಜನರಿಗೆ ಎಲ್ಲಾ ॥
ಹಿಂಗದೆಲೆ ಕೊಡುವ ನಮ್ಮ ಮಧ್ವಾಂತರಾತ್ಮಕನ ।
ರಂಗವಿಠಲನೆಂದು ನೆರೆ ಸಾರಿರೋ॥"[೧೯]

ಕಲಿಯುಗದಲ್ಲಿ ಕಂಡು ಬರುವ ಮಾನವರು ಮನಸಿಜರಾಗಿರುವರು. ದಯೆ, ದಾನ, ಕರುಣೆಯಿಲ್ಲದ ಕ್ರೂರಿಗಳಾಗಿರುವರು, ಮನುಜ ಮನುಜನ ಸಂಬಂಧದಲ್ಲಿಯೇ ನಂಬಿಕೆ ಯನ್ನಿಡದವರು, ದ್ವೇಷ, ಅನುಮಾನ, ಅಸೂಯೆಗಳನ್ನು ತುಂಬಿಕೊಂಡಿರುವರು. ದೇವರ, ದೈವವೆಂಬುದನ್ನು ಮನಸಾರೆ ಒಪ್ಪಿಕೊಳ್ಳದೆ ಜಗಳ, ಜಂಜಾಟದಲ್ಲಿರುವವರು. ಇಂಥ ಜನರಿಂದ ಈ ಕಲಿಯುಗ ತುಂಬಿದೆ ಎಂದು ಶ್ರೀಪಾದರಾಯರು ತಮ್ಮ ಕೀರ್ತನೆಗಳಲ್ಲಿ ತಿಳಿಸಿದ್ದಾರೆ.

"ಅಂತರಂಗದಲ್ಲಿ ಹರಿಯ ಕಾಣದವನೆ ಹುಟ್ಟು ಕುರುಡನೋ
ಸಂತತ ಸಿರಿಕೃಷ್ಣ ಚರಿತೆ ಕೇಳದವನೆ ಜಡ
ಮತಿ ಕಿವುಡನೋ ಎಂದೆಂದಿಗು
ಹರುಸದಿಂದಲಿ ನರಹರಿಯ ಪೂಜೆ
ಮಾಡದವನೆ ಕೈ ಮುರುಕನೊ
ಕುರುವೀರ ಸಖನ ಮುಂದೆ ಕೃಷ್ಣಾಯೆಂದು
ಕುಣಿಯದವನೆ ಕುಂಟನೊ

ನರಹರಿ ಚರಣೋದಕವ ಧರಿಸದ ಶಿರ
ನಾಯುಂಡ ಹೆಂಚು ಕಾಣೊ
ಸುರವರ ಕೃಷ್ಣ ಪ್ರಸಾದವಿಲ್ಲದ ಊಟ
ಸೂಕರ ಭೋಜನವೊ ಎಂದೆಂದಿಗೂ

ಅಮರೇಶ ಕೃಷ್ಣಗರ್ಪಿತವಲ್ಲದ ಕರ್ಮ
ಅಸತಿಯ ವ್ರತನೇಮವೊ
ರಮೆಯರಸಗೆ ಪ್ರೀತಿಯಿಲ್ಲದ ವಿತರಣೆ
ರಂಡೆ ಕೊರಳ ಸೂತ್ರವೊ
ಕಮಲನಾಭನ ಪಾಡಿ ಪೊಗಳದ
ಸಂಗೀತ ಗಾರ್ದಭ ರೋದನವೊ
ಮಮತೆಯಿಂದಲಿ ಕೇಶವಗೆ ನಮಸ್ಕಾರ
ಮಾಡದವನೆ ಮೃಗವೊ ಎಂದೆಂದಿಗೂ

ಜರೆ ಹುಟ್ಟು ಮರಣವ ತೊರೆವ ಸುಧೆಯ ಬಿಟ್ಟು
ಸುರೆಯ ಸೇವಿಸ ಬ್ಯಾಡವೋ
ಸುರಧೇನು ಇರಲೊಮ್ಮೆ ಶ್ವಾನನ ಮೊಲೆಹಾಲು
ಕರೆದು ಕುಡಿಯ ಬ್ಯಾಡವೋ
ಕರಿರಥ ತುರಗವಿರಲು ಬಿಟ್ಟು ಕೆಡಹುವ
ಕತ್ತೆ ಏರಲಿ ಬ್ಯಾಡವೋ
ಪರಮಪದವನೀವ ಶ್ರೀ ಕೃಷ್ಣನಿರಲಿಕೆ
ನರರ ಸೇವಿಸಬ್ಯಾಡವೋ ಎಂದೆಂದಿಗು"[೨೦]

ತನ್ನ ದೇಹದಲ್ಲಿ, ತನ್ನ ಅಂತರಾತ್ಮದಲ್ಲಿ ದೇವರನ್ನು ನೆನೆಯದವನನ್ನು ಮನುಜ ಕುಲದವನೆನ್ನರು. ಆತ್ಮ ಪರಿಶುದ್ಧಿಯಿಂದ ನೆನೆದರೆ ಹರಿಯನ್ನು ಅಲ್ಲೇ ಕಾಣಬಹುದು. ಹರಿಯನ್ನು ಕಾಣದವನು ದಾನವನು, ಸಂತಸದಿಂದ ಪೂಜಿಸದವನು ಕೈ ಯಿಲ್ಲದವನು. ಸಂಸ್ಕೃತಿಯಿಲ್ಲದವನಿಗೆ ದೇವರ ಸ್ವರೂಪ ತಿಳಿಯದು ಎನ್ನುವುದನ್ನು ವ್ಯಾಸರಾಯರು ತಮ್ಮ ಕೀರ್ತನೆಯಲ್ಲಿ ತಿಳಿಸುತ್ತಾರೆ.

"ಸೇವಕನೆಲೊ ನಾನು । ನಿನ್ನಯ ಪಾದ
ಸೇವೆ ನೀಡೆಲೋ ನೀನು ॥

ಸೇವನಕನೆಲೊ ನಾನು । ಸೇವೆ ನೀಡೆಲೊ ನೀನು ।
ಕಾವದೇನೆಲೋ ಶ್ರೀ ವಧೂವರರ । ರಾವಣಾಂತಕ ರಕ್ಷಿಸೆನ್ನನು ।
ಗೋವರ್ಧನ ಗಿರಿ ದೇವ । ಗೋವುಗಳ ಕಾವ ।
ಮಹಾನುಭಾವ । ವರಗಳ ನೀವ ದೇವಾ ।
ಶ್ರೀ ವಲ್ಲಭ ದಯ ಮಾಡೆನ್ನನು । ಈ ವೇಳೆಗೆ ಇಂದಿರ ರಮಣ ॥

ರಾಮದಶರಥನಂದನ । ರಘುಕುಲ ಅಬ್ಧಿ ಸೋಮಸುಂದರ ವಂದನಾ ।
ವಾಮನ ಪರಿಪೂರ್ಣ । ಕಾಮ, ಕೌಸಲ್ಯಾರಾಮ ।
ಸ್ವಾಮಿ ಶ್ರೀ ರಂಗಧಾಮ ದೈತ್ಯ ವಿ । ರಾಮ ಶ್ರೀಮದನಂತನಾಮಾ ।
ಭೀಮಾ । ಮುನಿಜನಸ್ತೋಮಾ । ರಮ್ಯ ಗುಣಧಾಮ ।
ರಣರಂಗ ಪ್ರೇಮ । ಕೋಮಲ ಶ್ಯಾಮ ನೇಮ ।
ಸಾಮಜ ವರದ ನೀನನುದಿನ । ಕಾಮಿತ ಫಲ ಕರುಣಿಸಿ ಕಾಯೊ ॥

ಶಂಕರಸುರ ಸೇವಿತ । ಶೇಷ ಗರುಡಾ ।
ಲಂಕಾರ ಮಣಿ ಶೋಭಿತ ।
ಪಂಕಜನಯನ ಮೀ । ನಾಂಕ ಜನಕ ಪಾದ ।
ಪಂಕಜಾಸನ ವಿನುತ ತಿರುತತಿ । ವೆಂಕಟ ಬಿರುದಂತ ಜಯ ಜಯ ॥
ಶಂಖ ಚಕ್ರ ಗದೆ ಪುಂಖ । ಚರಿತಾಟಂಕ । ಗೊಲಿದ ತ್ರಿಶಂಕ ಲಂಕಾ ।
ಲಂಕಾಧಿಪ ಲಾಲಿತ ರಘುಪತಿ । ಕಿಂಕರನಿಗೆ ಕಿಂಕರನಾನೆಲೊ ॥

ಮಂದರೋದ್ಧಾರ ಮಾಧವ । ಮಧುಸೂದನ – ಆ
ನಂದ ಮಂಗಳ ವಿಗ್ರಹ ।
ಬಿಂದು ಮಾಧವ ಗೋ । ವಿಂದ ಗೋಕುಲಾನಂದ ।
ವಂದಿತಾಮರವೃಂದ ಶೃತಿಪತಿ । ತಂದ ತುರುಗವನೇರಿ ಬಂದ ।
ಬೃಂದಾ । ವನದೊಳಗಿಂದ । ಯಶೋದೆಯ ಕಂದ । ಹರಿ ಗೋ
ವಿಂದ । ಶೇಷಗಿರಿಯಲ್ಲಿ ನಿಂದ ।
ಮಂದಾಕಿನಿ ಪಡೆದೆಲೊ ಧ್ರುವಗೊಲಿ ।
ದಂದದಿ ಎನಗೊಲಿ ಹಯವದನ ॥"೨೧

ದೇವರನ್ನು ಪೂಜಿಸುವ ಧ್ಯಾನಿಸುವ ವ್ಯಕ್ತಿಯಲ್ಲಿರಬೇಕಾದ ಗುಣಗಳನ್ನು ಹೇಗೆ ಮನದಲ್ಲಿ ದೇವರನ್ನು ನೆನೆಯಬೇಕೆನ್ನುವುದನ್ನು ತಿಳಿಸುತ್ತಾರೆ. ದೇವರನ್ನು ಪೂಜಿಸುವವರು ನಾನು ಅವನ ಭಕ್ತ; ನಿತ್ಯ ಪೂಜಿಸುತ್ತೇನೆಂದು ಗರ್ವ ಪಡದೆ ಹರಿಯನ್ನು ಪೂಜಿಸುವ ಸೇವಕ. ಅವನು ಆ ಭಾಗ್ಯವನ್ನು ಕರುಣಿಸಿರುವ ಈ ಜನ್ಮ ಧನ್ಯಯೆಂಬುದು ಮನದಲ್ಲಿರಬೇಕು. ಮನವು ಪ್ರತಿಕ್ಷಣ ಹರಿಯನ್ನು ನೆನೆಯುತ್ತಿರಬೇಕೆನ್ನುವುದನ್ನು ವಾದಿರಾಜರು ತಮ್ಮ ಕೀರ್ತನೆಯಲ್ಲಿ ತಿಳಿಸುತ್ತಾರೆ.

"ನಿಮ್ಮ ಭಾಗ್ಯ ದೊಡ್ಡದೋ ನಮ್ಮ ಭಾಗ್ಯ ದೊಡ್ಡದೋ
ಸಮ್ಮತಿಂದ ನಾವೂ ನೀವೂ ಸಾಟಿಮಾಡಿ ನೋಡುವ ಬನ್ನಿ
ಹೇಮ ಹೊನ್ನು ಹಣಗಳಿಗೆ ಹೇರಳ ಭಯವುಂಟು
ರಾಮನಾಮ ದ್ರವ್ಯಕಿನ್ನು ಯಾರ ಭಯವಿಲ್ಲವಯ್ಯಾ

ಕಡಗ ಕಂಠಮಾಲೆಗಳಿಗೆ ಕಳ್ಳರ ಅಂಜಿಕೆಯುಂಟು
ಅಡವಿ ತುಲಸೀಮಾಲೆಗಿನ್ನು ಆರ ಅಂಜಿಕೆಯುಂಟು
ವ್ಯಾಪಾರ ಉದ್ಯೋಗಕಿನ್ನು ವ್ಯಾಕುಲದ ಭಯವುಂಟು
ಗೋಪಾಳಾದ ವೃತ್ತಿಗಿನ್ನು ಗೊಡವೆ ಯಾರದಿಲ್ಲವಯ್ಯಾ
ಸರಕು ಬೆಲ್ಲ ತುಪ್ಪ ಧಾನ್ಯ ಸವೆದೀತೆಂಬ ಚಿಂತೆಯುಂಟು
ಹರಿನಾಮಾಮೃತಕ್ಕೆ ಇನ್ನು ಯಾವ ಚಿಂತೆಯಿಲ್ಲವಯ್ಯಾ
ನಿಮ್ಮ ಭಾಗ್ಯ ಲಕ್ಷ್ಮಿದೇವಿ ನಮ್ಮ ಭಾಗ್ಯ ನಾರಾಯಣನು
ನಮ್ಮ ನಿಮ್ಮ ಭಾಗ್ಯದೊಡೆಯ ಪುರಂದರವಿಠಲನು"[೩೨]

ಮನುಜನು ತಾನು ಗಳಿಸಿದ ಸಂಪತ್ತಿಗೆ ಕಾವಲು ಕಾಯುತ್ತಾನೆ. ಯಾವ ಕ್ಷಣದಲ್ಲಿ ಕಳ್ಳರು ಕನ್ನ ಹಾಕುತ್ತಾರೋ? ಯಾವ ಕ್ಷಣದಲ್ಲಿ ಸಂಪತ್ತು ಲೂಟಿ ಮಾಡುತ್ತಾರೋ ಎಂದು ಭಯದಿಂದ ನಿದ್ದೆಯಿಲ್ಲದೆ ನೆಮ್ಮದಿಯಿಲ್ಲದೆ ಸದಾ ಕಾವಲು ಕಾಯುತ್ತಿರುತ್ತಾನೆ. ಅದರ ಬದಲಾಗಿ ರಾಮನಾಮವನ್ನು ಜಪಿಸಿದವನು ರಾಮನ ಅನುಗ್ರಹದ ಸಂಪತ್ತನ್ನು ಗಳಿಸುತ್ತಾನೆ. ಸದಾ ನೆಮ್ಮದಿಯನ್ನು ಕಾಣುತ್ತಾನೆ. ಅದನ್ನು ಯಾರು ಕದಿಯುವುದಿಲ್ಲ. ಅದು ಶಾಶ್ವತವಾದ ಸಂಪತ್ತು. ದೇವರ ಸಂಪತ್ತು ಮನುಜನಿಗೊಲಿಯುವುದು ವಿರಳ. ಅದನ್ನು ಪಡೆಯುವ ಮನುಜನೆ ಭಾಗ್ಯಶಾಲಿ. ಸದಾ ದೇವರನ್ನು ನೆನೆಯಿರಿ ಅವನ ಅನುಗ್ರಹ ಪಡೆಯಿರಿ ಎಂದು ಪುರಂದರದಾಸರು ತಮ್ಮ ಕೀರ್ತನೆಯಲ್ಲಿ ಹೇಳುತ್ತಾರೆ.

"ಅಣ್ಣ ಭಾಗಣ್ಣ ನೀ । ಕಣ್ಣಿಗೇ ಮರೆಯಾಗಿ
ಪುಣ್ಯ ಲೋಕವ ಸೇರಿದ್ಯಾ । ಗುರುವೇ
ಸಣ್ಣವರು ನಾವು ಅನುಗುಣ್ಯ ನಿನ್ನಯ ಚರಣ
ವನ್ನು ಬಿಟ್ಟಿರಲಾರೆವೋ । ಗುರುವೇ
ಚಿಕ್ಕಂದಿನಿಂದ ಬಲು ಅಕ್ಕರದಿ ನೀನೆಮಗೆ
ದಿಕ್ಕೆಂದು ನಂಬಿದ್ದೆವೋ । ಗುರುವೇ
ಕಕ್ಕಸದ ಯಾತನೆಯ ಕರೆಕರೆಯ ಸಂಸಾರ
ಹೊಕ್ಕು ನೋಡಿನ್ನರಿಯೆವೋ । ಗುರುವೇ
ಮಕ್ಕಳಾಟಿಕೆ ಮಾಡಿ ಠಕ್ಕಿಸಿ ನಮ್ಮನಿ
ಲ್ಲಿಕ್ಕಿ ಪೋಪುದನರಿಯೆವೋ । ಗುರುವೇ
ಪಕ್ಕಿವಾಹನ ನಿನ್ನ ಕರೆದೊಯ್ದನೇ ಅಕಟ
ದಿಕ್ಕುಗೇಡಿಗಳಾದೆವೋ । ಗುರುವೇ
ಮನಸಿಗತಿ ಹರುಷವಾದಂಥ ಮಾತುಗಳಾಡಿ
ಕುಣಿಸಿ ಕುಣಿದಾಡಿಸಿದೆಯೋ । ಗುರುವೇ
ಅನಘ ನಿನ್ನಂಥ ಅಣ್ಣನ ಜನುಮಜನುಮಕ್ಕು

ಘನವಾಗಿ ಬಯಸುತಿಹೆವೋ । ಗುರುವೇ
ಕ್ಷಣಕ್ಷಣಕೆ ನೀ ಮಾಡಿದುಪಕಾರವನ್ನು ಸ್ಮರಿಸಿ
ಮಣಿದು ನಮೋ ನಮೋ ಎಂಬೆವೋ । ಗುರುವೇ
ಕನಸಿನಂತಾಯ್ತು ತವಚರಿಯ ಗುಣರೂಪಂಗ
ಳೆಣಿಸಿ ಎದೆ ಭುಗಿಲೆಂಬುದೋ । ಗುರುವೇ
ಪರಮ ಸುಖದಾಯಿ ಗುರುರಾಯ ನೀನಲ್ಲದಲೆ
ಪರರನಾಶ್ರೈಸರಿಯೆವೋ । ಗುರುವೇ
ಅರಿಯದವನಲ್ಲ ನಮ್ಮಭಿಮಾನದೊಡೆಯನೇ
ಪೊರೆವ ಭಾರವು ನಿನ್ನದೋ । ಗುರುವೇ
ಪರಿಪರಿಯಲೀ ನಿಮಗೆ ಪೇಳುವುದೇನು ತವ
ಚರಣ ಕಟ್ಟಿದ್ದ ಬಿರುದೋ । ಗುರವೇ
ವರದ ಗೋಪಾಲವಿಠಲನ ದಾಸಾಗ್ರಣಿಯೆ ನಾ
ನರಿಯೆ ಸೌಭಾಗ್ಯನಿಧಿಯೇ । ಗುರುವೇ"೨೩

ಸಾಂಸಾರಿಕ ಬಂಧನ ಮನುಜನನ್ನು ಎಷ್ಟು ಸಂಕಷ್ಟಕ್ಕೀಡುಮಾಡುತ್ತದೆಂಬುದನ್ನು ತಿಳಿಯಬಹುದು. ಇದರಲ್ಲಿ ಗಂಡ - ಹೆಂಡತಿ, ಅತ್ತೆ, ಮೈದುನ, ಅತ್ತಿಗೆ, ನಾದಿನಿ ಹೀಗೆ ಒಂದು ಕುಟುಂಬದಲ್ಲಿ ಬರುವ ಸಂಬಂಧ ಜಂಜಾಟಗಳನ್ನು ಅದನ್ನು ಹೇಗೆ ನಿಭಾಯಿಸುವುದು. ಅದರಲ್ಲಿ ನೆಮ್ಮದಿಗಿಂತ ನೋವೇ ಹೆಚ್ಚಿರುತ್ತದೆ. ವೇಣುಗೋಪಾಲ ನಿನ್ನ ನೆನೆದ ಈ ಮನವನ್ನು ತಣಿಸಿದೆ ನೀನು ನಿನ್ನಿಂದ ಕಂಡೆ ನೆಮ್ಮದಿಯ, ಸಂಸಾರದ ಜಂಜಾಟದಿಂದ ಮನನೊಂದಿದೆ ತಂದೆ ನೀ ಬಂದು ಕೈ ಹಿಡಿದೆ ಇದರಲ್ಲಿ ಅಪರಾಧಿಯಾಗಿದ್ದರೆ ನೀ ಬಂದು ಕ್ಷಮಿಸಿ ಮುನ್ನಡೆಸೆಂದು ಗೋಪಾಲದಾಸರು ತಮ್ಮ ಕೀರ್ತನೆಯಲ್ಲಿ ಹಾಡಿದ್ದಾರೆ.

"ನಿನ್ನ ನಂಬಿದ ನರಗೆ - ಅನ್ಯರಾಶ್ರಯವೇಕೋ ।
ಚನ್ನ ಗುರು ವಿಜಯರಾಯಾ
ಬನ್ನ ಬಡುವೆನು ಜೀಯ । ಘನ್ನ ಭವದೊಳು ಸಿಲುಕಿ
ಇನ್ನು ಕಡೆಹಾಯ್ಸೊ ಬೇಗ । ಈಗ
ಸಪ್ತದ್ವೀಪಾಧಿಪನ ಪುತ್ರನೊಬ್ಬನು ಪರರ
ಭೃತ್ಯನಾಗುವುದುಚಿತವೇ?
ಮತ್ತೆ ಸುರಧೇನುವಿನ ಹತ್ತಿಲಿರುವನಿಗಿನ್ನು
ಹಸ್ತು ಬಳಲುವುದುಚಿತವೇ?
ಒತ್ತಿ ಸುರನದಿ ನರನ ಸುತ್ತ ಪರಿಯಲು ನೀರಿ
ಗಾರ್ತನಾಗುವುದುಚಿತವೇ?
ನಿತ್ಯಸುಬದಾರಿ ವಿಚಿತ್ರದಲಿ ತೋರೆನಾ
ಹಸ್ತ ನರಗೊಡ್ಡುವುದು ಎತ್ತಲುಚಿತವೊ ಗುರುವೆ?

ಕ್ಷೀರವಾರಿಧಿ ಸೇರಿ ನೀರು ಮಜ್ಜಿಗೆಗಾಗಿ
ಚೀರಿ ಒದರುವುದುಚಿತವೆ?
ದಾರಿಯಲಿ ಸುಧೆರಸ ಸೂರೆಯಾಗಲು ಜಲದ
ಮಾರ ಹುಡುಕುವುದುಚಿತವೆ?
ನೂರಾರು ವಸನದ ಹೇರು ಮನೆಯೊಳಗಿರಲು
ಕೋರಿಯುಡುವುದು ಉಚಿತವೆ?
ವಾರವಾರಕೆ ಹರಿಯ ತೋರುವ ನರನ ಬಿಟ್ಟು
ಕ್ರೂರರನು ಸೇವಿಸುವುದಾರಿಗುಚಿತವೊ ಗುರುವೆ?
ಸಾಕಿ ಸಲಹೆಂದು ಅತಿವ್ಯಾಕುಲದಿ ಬಂದವನ
ನೂಕಿಬಿಡುವುದು ಉಚಿತವೆ?
ಏಕಬುದ್ಧಿಯನಿತ್ತು ಜೋಕೆಮಾಡದೆ ಮನವ
ನೇಕಮಾಡುವುದುಚಿತವೆ?
ಬೇಕಾದ ವರಕೊಡುವೆ ಲೋಕದವರಿಗೆ ಎನ್ನ
ಕಾಕುಮಾಡುವುದುಚಿತವೆ?
ಶ್ರೀಕಾಂತ ವೇಣುಗೋಪಾಲ ವಿಠಲ ನಿನ್ನ
ವಾಕು ಮನ್ನಿಸುತಿರಲು ನಾ ಕೆಡುವುದುಚಿತವೇ?"[೨೪]

ಮನುಷ್ಯನಿಗೆ ಕಷ್ಟ ನೋವುಗಳು ಬರುವುದು ಸಹಜ. ಅದರ ನೋವನ್ನುಂಡು ಬದುಕು ಸಾಗಿಸುವುದು ಮನುಷ್ಯನ ಕರ್ತವ್ಯ. ನೋವನ್ನು ಸಹಿಸಿ ನಡೆಯುವ ಶಕ್ತಿಯನ್ನು ಭಗವಂತ ಕೊಡುವುದು ಮುಖ್ಯ. ಅವನನ್ನು ನಂಬಿದರೆ ಭಗವಂತನ ಆಶ್ರಯ ನೀಡುತ್ತಾನೆ. ಬೇರೆ ಯಾರ ಆಶ್ರಯವನ್ನು ಮನುಜನು ಬಯಸನು. ನಿನ್ನನ್ನೇ ನಂಬಿದ ದೇಹವನ್ನು ನೀನೇ ಕಾಪಾಡೆಂದು ಕೇಳಿಕೊಳ್ಳುತ್ತಾನೆ. ಅವನನ್ನೇ ನೆನೆದು ಅವನನ್ನೇ ಆಶ್ರಯಿಸಿರೆಂದು ವಿಜಯದಾಸರು ಈ ಕೀರ್ತನೆಯಲ್ಲಿ ಹಾಡಿದ್ದಾರೆ.

ತತ್ವಪದಕಾರರ ದೃಷ್ಟಿಯಲ್ಲಿ ಬದುಕು ಅಥವಾ ಜೀವನವೆಂಬುದು ಸುದೀರ್ಘವಾದ ಒಂದು ಪ್ರಯಾಣವಿದ್ದಂತೆ. ಈ ಪ್ರಯಾಣ ಸುಖ, ದುಃಖ - ಸಾವು ಎಲ್ಲವನ್ನೂ ಒಳಗೊಂಡಿದೆ. ಇದೆಲ್ಲದರಿಂದ ಜೀವನಕ್ಕೆ ಬಿಡುಗಡೆ ಇಲ್ಲವೆ? ಇದಕ್ಕೆ ಸರಿಯಾದ ಉತ್ತರ ಮುಕ್ತಿ. ಮುಕ್ತಿಯನ್ನು ಹೊಂದಿದಾಗ ಮಾತ್ರ ಜೀವನದಲ್ಲಿ ಬರುವ ಎಲ್ಲಾ ತೊಂದರೆಗಳಿಂದ ಶಾಂತಿ ದೊರೆಯುತ್ತದೆ. ಹೀಗೆ ಹೇಳುವಾಗ ನಮಗಿಲ್ಲಿ ಸಿಗುವ ಒಂದು ಪ್ರಶ್ನೆ ಮುಕ್ತಿ ಯಾರಿಗೆ ಬೇಕು? ನೋವು ಕಷ್ಟಗಳಿರುವ ವ್ಯಕ್ತಿ ಮುಕ್ತಿ ಬಯಸುವುದಾದರೆ ಸರಿ, ಆದರೆ ಸುಖವಿರುವ ವ್ಯಕ್ತಿಗೆ ಮುಕ್ತಿ ಅವಶ್ಯವಿದೆಯೇ? ಈ ಜೀವನ ಪಯಣದಲ್ಲಿ ಪ್ರತಿಯೊಬ್ಬ ವ್ಯಕ್ತಿಗೆ ಅವರದೇ ಆದ ಅನೇಕ ಅಗತ್ಯತೆಗಳು ಆಸೆಗಳಿರುತ್ತವೆ. ಕಷ್ಟ, ನೋವುಗಳಿರುವ ವ್ಯಕ್ತಿಗೆ ಬಯಕೆ, ಬೇಡಿಕೆಗಳಿರುತ್ತವೆ. ಸುಖ - ಶಾಂತಿ ಇರುವ ವ್ಯಕ್ತಿಗೆ ರೋಗರುಜಿನಗಳ ಸರಮಾಲೆ. ನೆಮ್ಮದಿಯೇ ಇಲ್ಲದ ಜೀವನ

ಹೀಗೆ ಒಂದಲ್ಲ ಒಂದು ಕಾರಣದಿಂದ ವೈರಾಗ್ಯ ಹೊಂದಿ ಮುಕ್ತಿಯನ್ನು ಪಡೆಯಬಯಸುತ್ತಾರೆ. ತತ್ವಪದಕಾರರು ಸಮಾಜದಲ್ಲಿ ಜನರ ಮಧ್ಯ ಇದ್ದು ಅವರ ಬದುಕಿನ ಆಗುಹೋಗುಗಳನ್ನು ಕಣ್ಣಾರೆ ಕಂಡವರಾಗಿದ್ದುದರಿಂದ ಬದುಕೆಂಬುದನ್ನು ಒಂದು ಸುದೀರ್ಘವಾದ ಪಯಣವಾಗಿ ನೋಡಿದ್ದಾರೆ.

ಬದುಕೆಂಬ ಬವಣೆಯನ್ನು ದಾಟಿ ಬರಲು ಪಡುವ ಶ್ರಮ ಜೀವನ ಜಂಜಾಟದ ಬಿಡುಗಡೆಗಾಗಿ ಬಯಸುವ ಮುಕ್ತಿಗೆ ಇವರು ನಡೆದ ದಾರಿ ಆಧ್ಯಾತ್ಮ. ತತ್ವಪದಕಾರರ ಮುಕ್ತಿ ಆಧ್ಯಾತ್ಮದ ಬಗ್ಗೆ ಎಸ್.ಪಿ.ಪದ್ಮಪ್ರಸಾದ್‌ರವರು ತಮ್ಮ ಒಂದು ಲೇಖನದಲ್ಲಿ ಹೀಗೆ ತಿಳಿಸಿದ್ದಾರೆ.

"ಮುಕ್ತಿಯನ್ನು ಪರಮಗಂತವ್ಯವನ್ನಾಗಿಟ್ಟುಕೊಂಡ ತತ್ವಪದಕಾರರ ಆಧ್ಯಾತ್ಮ ದೃಷ್ಟಿ ಪರಸ್ಪರಾವಲಂಬಿತವಾದ ನಾಲ್ಕು ಅಂಶಗಳನ್ನು ಮುಖ್ಯ ಆಧಾರಗಳನ್ನಾಗಿಟ್ಟುಕೊಂಡಿದೆ. ಅವು ೧. ವೈರಾಗ್ಯ, ೨. ಭಕ್ತಿ, ೩. ಸದಾಚಾರ, ೪. ಜ್ಞಾನ ಇವರ ಆಧ್ಯಾತ್ಮಿಕ ದೃಷ್ಟಿಯ ಮುಖ್ಯ ಲಕ್ಷಣ".[೨೫] ತತ್ವಪದಕಾರರಲ್ಲಿ ಗುರು ಮತ್ತು ಶಿಷ್ಯನಿಗೆ ಅವಿನಾಭಾವ ಸಂಬಂಧವಿದೆ. ಗುರು ತೋರಿದ ಮಾರ್ಗದಲ್ಲಿ ಶಿಷ್ಯನು ನಡೆಯುತ್ತಾನೆ. ಗುರು ಎನಿಸಿಕೊಂಡವನು ತನ್ನ ಶಿಷ್ಯನಿಗೆ ಅಷ್ಟೇ ಪ್ರಾಮುಖ್ಯತೆಯನ್ನು ಕೊಡುತ್ತಾನೆ. ಅವರಿಬ್ಬರ ಮಧ್ಯದಲ್ಲಿ ಪ್ರೀತಿ ಸಂಬಂಧಕ್ಕೆ ಪರಿಪೂರ್ಣವಾದ ಅರ್ಥ ಕಾಣಿಸುತ್ತದೆ.

ಕಾಮ, ಮೋಹ, ಮದ, ಮತ್ಸರ ಇವುಗಳಿಂದ ದೂರವಿರುವುದೇ ಆಧ್ಯಾತ್ಮದ ಮುಖ್ಯವಾದ ಅಂಶ. ಮೋಹದ ಪಾಶಕ್ಕೆ ಸಿಲುಕಿ ಕಾಮಿಯಾಗಿ ಸದಾ ಸುಖಿಯಾಗಿ ಆನಂದದ ವೈಭೋಗದ ಜೀವನ ಸವಿಯುತ್ತಾ ಅಹಂ ಎಂಬ ಅಂಧಕಾರದಲ್ಲಿದ್ದು ಕ್ಷಣಿಕ ಸುಖಕ್ಕಾಗಿ ಭಗವಂತನಿಂದ ದೂರವಾಗುವ ಜೀವನದ ಬಗ್ಗೆ ಇವರಲ್ಲಿ ವೈರಾಗ್ಯವಿದೆ. ತತ್ವಪದಕಾರರು ಎಂದರೆ ಒಂದು ನಿಜವಾದ ಜೀವನವನ್ನೇ ನೋಡುವವರು, ನುಡಿಯುವವರು.

ಬಸವರಾಜ ಸಬರದ ಅವರು ಹೇಳುವಂತೆ ತತ್ವ ಎಂದರೆ ನಿಜಸ್ಥಿತಿ ಅಥವಾ ಸಿದ್ಧಾಂತ ಭಗವಂತನಿಗೆ ಸಂಬಂಧಿಸಿದ ಸಿದ್ಧಾಂತವನ್ನು ತಮ್ಮ ಹಾಡಿನ ಮೂಲಕ ಅಭಿವ್ಯಕ್ತಿಸುವ ಕ್ರಿಯೆಗೆ ತತ್ವಪದ ಎಂದು ಕರೆಯುತ್ತಾರೆ. ಒಂದು ನಿಜಸ್ಥಿತಿಯನ್ನು ಅಂದು ಭಗವಂತನಿಗೆ ಸಂಬಂಧಿಸಿದ್ದು ತಮ್ಮ ಹಾಡಿನ ಮೂಲಕ ಸಮರ್ಪಿಸಿ ಭಗವಂತನ ಕೃಪೆಗೆ ಪಾತ್ರರಾಗ ಬಯಸುವ ಈ ತತ್ವಪದಕಾರರು ಸಾಂಸಾರಿಕವಾಗಿ ಸಿಗುವ ಅಲ್ಪ ಸುಖದಿಂದ ಕಾಮ, ಮೋಹಗಳಿಂದ ಕಳೆದುಕೊಳ್ಳುವುದು ಬೇಡವೆನಿಸಿ ಅನುಭವಿಗಳಂತೆ ಇವರು ಕೂಡ ಈ ಸಂಸಾರ ಇದ್ದರೂ ಕಾಮ ಸುಖವನ್ನು ಬಯಸುವವನು ಆಗಿರಕೂಡದೆಂದು ಆಶಿಸುತ್ತಾರೆ.

ತತ್ವಪದಕಾರರ ತತ್ವಪದಗಳಿಗೆ ಹಿನ್ನೆಲೆ ಇದೆ. ಸಂದರ್ಭಕ್ಕೆ ತಕ್ಕಂತೆ ಈ ತತ್ವಪದಗಳು ರಚನೆಯಾಗಿವೆ. ಎಚ್.ಎಸ್. ಶಿವಪ್ರಕಾಶ್ ಅವರು ತಮ್ಮ ಒಂದು ಲೇಖನದಲ್ಲಿ ತತ್ವಪದದ ರಚನೆ ಮತ್ತು ಸಂದರ್ಭವನ್ನು ಬಲು ಸೊಗಸಾಗಿ ವಿವರಿಸಿದ್ದಾರೆ. ಗೋವಿಂದಭಟ್ಟರನ್ನು ಕಂಡ

ಊರ ಜನರು ಅವರಿಗೆ ಬುದ್ಧಿ ಕಲಿಸಲು ಪ್ರಶ್ನೆಯನ್ನು ಕೇಳಿದರು. ಇವತ್ತು ಅಮಾವಾಸ್ಯೆಯೋ ಹುಣ್ಣಿಮೆಯೋ? ಅದಕ್ಕೆ ಗೋವಿಂದಭಟ್ಟರು ಹುಣ್ಣಿಮೆ ಎಂದರು; ಊರ ಜನರೆಲ್ಲ ನಕ್ಕರು. ಇದನ್ನು ನಿಜ ಮಾಡಲು ಗೋವಿಂದಭಟ್ಟರು ಊರ ಜನರನ್ನೆಲ್ಲ ಸಂಜೆ ಹೊತ್ತು ಕೆರೆಯ ಹತ್ತಿರ ಬರಲು ಹೇಳಿ ಅಂದು ಸಂಜೆ ಅವರಿಗೆಲ್ಲ ಹುಣ್ಣಿಮೆಯ ಚಂದ್ರನನ್ನು ತೋರಿಸಿದರು. ಅಮಾವಾಸ್ಯೆಯ ದಿನ ಹುಣ್ಣಿಮೆಯ ಚಂದ್ರನನ್ನು ತೋರಿಸಿದ ಭಟ್ಟರನ್ನು ಜನರು ಕೊಂಡಾಡಿ ಅವರಿಗೆ ನಮಿಸಿದರು. ಆಗ ಷರೀಫರು ಸಂದರ್ಭಕ್ಕೆ ತಕ್ಕಂತೆ ಗುರು ಮಹಿಮೆಯನ್ನು ಹೊಗಳಿ ಪದವನ್ನು ಹಾಡಿದರು.

"ನೋಡಿರಣ್ಣ! ಸಾಧುಗಳೆಲ್ಲ
ಚೆನ್ನಾಗಿ ಕೇಳಿರಣ್ಣಾ ॥
ಕನ್ನೆಮಾಸಿ ದಿವಸ ಹುಣ್ಣಿಮೆ ಚಂದಿರ ಬಂದ॥"[೨]

ತತ್ವಪದಕಾರರು ಒಂದು ಜಾತಿಗೆ ಅಂಟಿಕೊಂಡವರಲ್ಲ, ಸಂಸ್ಕೃತಿ, ನಂಬಿಕೆ, ಆಚರಣೆಗಳಲ್ಲಿ ತಾರತಮ್ಯ ಮಾಡುವವರಲ್ಲ, ಶರಣರು ಕೆಲವನ್ನು ನಿರಾಕರಿಸಿದರು. ದಾನ ಮಾಡುವುದು, ಯಾಗ ಮಾಡುವುದು, ಬಲಿ ಕೊಡುವುದು ಇವೆಲ್ಲದರ ಬಗ್ಗೆ ಶರಣರಿಗೆ ತಿರಸ್ಕಾರವಿದ್ದರೆ ದಾಸರು ಇದನ್ನು ಸ್ವೀಕರಿಸಿದರು. ಯಜ್ಞ, ಯಾಗ, ದೇವಸ್ಥಾನ, ದಾನ, ಧರ್ಮಗಳನ್ನು ಒಪ್ಪಿಕೊಂಡರು; ಆದರೆ ತತ್ವಪದಕಾರರು ಯಾವುದನ್ನು ಮೇಲು ಕೀಳೆನ್ನದೆ ಇವೆಲ್ಲವುಗಳನ್ನು ಸ್ವೀಕರಿಸಿ ಇವೆಲ್ಲದರ ಆಚರಣೆಗಳ ವಿವಿಧತೆಯಲ್ಲಿ ಅಂತರಂಗದ ಅನುಭವದಲ್ಲಿ ಏಕತೆಯನ್ನು ನೋಡುತ್ತಾರೆ.

ತತ್ವಪದಕಾರರು ಕಂಡದ್ದು ಶ್ರೀಮಂತಿಕೆಗಿಂತ ಬಡತನದ ಜೀವನವನ್ನು. ಶ್ರೀಮಂತಿಕೆಯ ವಿರುದ್ಧದ ಹೋರಾಟ; ಬಡತವನ್ನು ನಿವಾರಣೆ ಮಾಡುವಂತಿರಬೇಕೇ ಹೊರತು ಬೇರೆ ಒಂದು ಮಾರ್ಗವನ್ನು ಸೃಷ್ಟಿ ಮಾಡುವಂಥದ್ದಾಗಿರಬಾರದು ಎಂಬುದು ಇವರ ಒಂದು ಆಶಯ. ತತ್ವಪದಕಾರರಲ್ಲಿ ನಾವು ಗುರುತಿಸಬಹುದಾದ ಒಂದು ಅಂಶವೆಂದರೆ ಇವರಲ್ಲಿ ಸ್ವೀಕಾರಕ್ಕಿಂತ ತಿರಸ್ಕಾರದ ಮನೋಭಾವನೆ ಹೆಚ್ಚಾಗಿರಬಹುದೇ? ಯಾಕೆಂದರೆ ಕುಲ, ಧರ್ಮ, ನೆಲೆ, ಹಂಗು, ಮೋಹ ಇವೆಲ್ಲವನ್ನು ತಿರಸ್ಕರಿಸಿದ್ದಾರೆ. ಈ ತಿರಸ್ಕಾರದ ಮನೋಭಾವ ಇವರಲ್ಲಿ ಬಂದಿರುವುದಕ್ಕೆ ಕಾರಣ ಬಡತನದ ಜೀವನ ಇರಬಹುದೇ? ತತ್ವಪದಕಾರಲ್ಲಿ ನೂರಕ್ಕೆ ೯೦ರಷ್ಟು ಬಡತನದಲ್ಲಿ ಬೆಂದವರೆ ಆಗಿದ್ದಾರೆ. ಇವರ ಜೀವನ, ಸಮಾಜ, ಜನತೆ, ಶ್ರೀಮಂತಿಕೆಯ ದರ್ಪ ಕೊನೆಯೇ ಇಲ್ಲದ ಮನುಷ್ಯನ ಬಯಕೆ ಮತ್ತು ಅದರಿಂದಾಗುವ ಫಲ, ಒಂದು ದಿನ ಬಿದ್ದು ಹೋಗುವ ದೇಹದ ಮೇಲೆ ಮನುಷ್ಯನಿಗಿರುವ ವ್ಯಾಮೋಹ ಇದೆಲ್ಲವನ್ನು ಕಣ್ಣಾರೆ ಕಂಡು ಮನಸಾರೆ ಹುಚ್ಚು ನಗೆಯನ್ನು ಬೀರಿದವರಾಗಿದ್ದಾರೆ ಈ ತತ್ವಪದಕಾರರು.

ಮೂಢನಂಬಿಕೆ, ಅಂಧತ್ವ, ಸಣ್ಣ ಮನಸ್ಸಿನ ಕೆಟ್ಟ ಆಲೋಚನೆ ಇವೆಲ್ಲವನ್ನು ತಮ್ಮ ದೃಷ್ಟಿಯಲ್ಲಿಟ್ಟುಕೊಂಡು ಸಮಾಜಕ್ಕೆ ಒಂದು ಚಿಂತನಾರ್ಹವಾದ ಜೀವನವನ್ನು ಕಟ್ಟಿಕೊಡುವಲ್ಲಿ ತತ್ವಪದಕಾರರು ಪ್ರಯಯತ್ನಪಟ್ಟವರಾಗಿದ್ದಾರೆ. ಮನುಷ್ಯ ತನ್ನ ಒಳಮನಸ್ಸನ್ನು ತೆರೆದು ಪ್ರಪಂಚವನ್ನು ಒಂದು ಸಾರಿ ಏಕಾಗ್ರತೆಯಿಂದ ನೋಡುವಂತೆ ಮಾಡಿದ್ದಾರೆ. ಸಮಾಜ ಎಷ್ಟರಮಟ್ಟಿಗೆ ಬದಲಾವಣೆ ಪಡೆದುಕೊಳ್ಳುತ್ತದೆಯೋ ತಿಳಿಯದು; ಆದರೆ ಮನುಷ್ಯನಲ್ಲಿ ಬದಲಾವಣೆಗಳಾಗಿ ಮಾನವೀಯತೆ ಮನುಷ್ಯತ್ವ ಮೂಡಲಿ ಎಂಬುದು ತತ್ವಪದಕಾರರ ಮಹತ್ವದ ಆಶಯವಾಗಿದೆ.

"ತತ್ವಪದಗಳು, ಜನಸಾಮಾನ್ಯರಿಗಾಗಿ ಹುಟ್ಟಿಕೊಂಡವುಗಳು. ಅನಕ್ಷರಸ್ಥ ಸಮಾಜದ ಬಹು ಸಂಖ್ಯಾತ ದುಡಿಯುವ ವರ್ಗಕ್ಕೆ ಧರ್ಮದ ಚಿಂತನೆ, ಆಧ್ಯಾತ್ಮಿಕ ಜಿಜ್ಞಾಸೆ, ಜ್ಞಾನ ಪರಂಪರೆಗಳನ್ನು ನಿರಾಕರಿಸಿದ ಒಂದು ವರ್ಗದ ಮನೋಧರ್ಮಕ್ಕೆ ಸವಾಲಾಗುವ ರೀತಿಯಲ್ಲಿ ಇವು ಜನ್ಮ ತಾಳಿವೆ. ಧರ್ಮ, ಆಧ್ಯಾತ್ಮ ನೈತಿಕ ನಡವಳಿಕೆಗಳೆಲ್ಲ ಸಂಸ್ಕೃತ ಭಾಷೆಯಲ್ಲಿದ್ದು ಅವು ದುಡಿಯುವ ವರ್ಗದ ಜನಸಾಮಾನ್ಯರಿಗೆ ಎಟುಕದಿದ್ದಾಗ ಮೊದಲ ಬಾರಿಗೆ ಗೌತಮ ಬುದ್ಧ ಧರ್ಮದ ವಿಷಯಗಳನ್ನು ಸರಳಗೊಳಿಸಿ ಪಾಲಿ ಭಾಷೆಯಲ್ಲಿ ನಿರೂಪಿಸಿ ಜನರ ಬಳಿಗೆ ತಂದ. ಅಲ್ಲಿಂದ ಮುಂದೆ ಶ್ರಮಜೀವಿ ವರ್ಗದ ಜನರೇ ತಮ್ಮ ದುಡಿಮೆಯ ಅನುಭವಗಳನ್ನು ಲೋಕಜ್ಞಾನವನ್ನು ತಮ್ಮ ತಮ್ಮ ಆಡುಭಾಷೆಗಳಲ್ಲಿಯೇ ಅಭಿವ್ಯಕ್ತಿಗೊಳಿಸುತ್ತಾ ಬಂದರು. ಅಂತಹ ಸಾಮಾನ್ಯ ಜನರ ಲೋಕಾನುಭವ, ದೈವ ಸಂಬಂಧಿ ಚಿಂತನೆಗಳನ್ನು ಇಂದು ನಾವು ತತ್ವಪದಗಳು ಎಂಬ ಹೆಸರಿನಲ್ಲಿ ಅಧ್ಯಯನ ಮಾಡುತ್ತಿದ್ದೇವೆ."[೨೬]

ಅಕ್ಷರ ಜ್ಞಾನ ಮತ್ತು ಲೋಕಜ್ಞಾನದ ಪರಿವೇ ಇಲ್ಲದೆ ತಮ್ಮ ದುಡಿಮೆಯೇ ದೇವರೆಂದು ನಂಬಿ ಜೀವಿಸುವ ಜನವರ್ಗಕ್ಕೆ ಹತ್ತಿರವಾದವರೇ ತತ್ವಪದಕಾರರು. ತಮ್ಮ ದುಡಿಮೆಯೇ ದೇವರೆಂದು ನಂಬಿ ಜೀವಿಸುವ ಈ ವರ್ಗದ ಜನರಿಗೆ ಆಧ್ಯಾತ್ಮ, ಧರ್ಮ, ಜ್ಞಾನಗಳಿಂದ ವಂಚಿತರಾದವರು. ಈ ಜನಸಾಮಾನ್ಯರಿಗೆ ಸರಳವಾದ ನುಡಿಗಳಿಂದ ಆಧ್ಯಾತ್ಮ ಧರ್ಮದ ಅರಿವನ್ನು ತಿಳಿಸಿ ಹೇಳುವ ಅಥವಾ ಅವರ ಗಮನಕ್ಕೆ ತರುವ ಪ್ರಯತ್ನದ ಫಲದಿಂದಾಗಿ ಹುಟ್ಟನ್ನು ಪಡೆದುಕೊಂಡ ಸೃಷ್ಟಿಸಲ್ಪಟ್ಟವು ತತ್ವಪದಗಳು.

ಜಾತಿ ಮತಗಳ ಕಟ್ಟುಪಾಡಿನಲ್ಲಿದ್ದ ಧರ್ಮ ಆಚಾರ ವಿಚಾರಗಳ ನಡುವೆ ಸಮಾಜದ ಜನರ ಸ್ವಾತಂತ್ರ್ಯಕ್ಕೆ ಅಡ್ಡಿಯಾಗಿದ್ದ ಕುಲ ಪಂಥಗಳಿಂದ ಹಲವಾರು ನಿಬಂದನೆಗಳಿದ್ದವು. ಕಾರಣ ಭಕ್ತ ಮತ್ತು ಭಗವಂತನ ಮಧ್ಯೆ ಇದ್ದ ಪುರೋಹಿತಶಾಹಿ. ಈ ಪುರೋಹಿತಶಾಹಿ ವರ್ಗ ತನ್ನ ಸ್ವಾರ್ಥ, ಸಾಧನೆ, ಬೆಳವಣಿಗೆಗಳೆಲ್ಲ ಶ್ರೀಮಂತಿಕೆ, ಅಭಿವೃದ್ಧಿ, ವಿದ್ಯೆ, ಜ್ಞಾನ ಪುರೋಹಿತಶಾಹಿಗಳಿಗೆ ಮಾತ್ರ ಇರಲಿ ಬೇರೆಯವರಿಗೆ ಬೇಡ ಎಂಬ ಸ್ವಾರ್ಥದಿಂದಾಗಿ ಜನಸಾಮಾನ್ಯರಿಂದ ದೇವರನ್ನು ದೂರವಿಟ್ಟರು. ಸಂಸ್ಕೃತ ಕಲಿತವರಿಗೆ ಮಾತ್ರ ಜ್ಞಾನ, ದೇವರ ದರ್ಶನ, ಆಧ್ಯಾತ್ಮ ಎಂಬ ನೆಪ ಹೇಳಿ ಸಂಸ್ಕೃತದ ಕಲಿಕೆಯನ್ನು ಶ್ರಮಜೀವಿಗಳಿಗೆ ಸಿಗದಂತೆ

ಮಾಡಿ ದೇವರ ಬಗ್ಗೆಯಾಗಿರಲಿ ಮಂತ್ರೋಪದೇಶಗಳ ಬಗೆಗಿನ ಮಾಹಿತಿಯನ್ನು ಪಡೆಯಲು ಪುರೋಹಿತರ ಮೊರೆಹೋಗುವ ಸ್ಥಿತಿಯನ್ನು ವೈದಿಕ ಧರ್ಮ ಸೃಷ್ಟಿ ಮಾಡಿತು.

ಇಂಥ ಒಂದು ಪರಿಸ್ಥಿತಿಯಿಂದಾಗಿ ಮಧ್ಯಕಾಲದಲ್ಲಿ ಸೃಷ್ಟಿಯಾದ ಭಕ್ತಿ ಚಳುವಳಿ ಪುರೋಹಿತಶಾಹಿಗಳಿಗಾಗಿ ಮಾತ್ರ ಭಗವಂತ ಎನ್ನುವ ವಿಚಾರವನ್ನು ಜನಸಾಮಾನ್ಯರಿಗೆ ಸಿಗುವಂತೆ ಮಾಡಿತು. ಭಗವಂತನೊಂದಿಗೆ ನೇರವಾದ ಸಂಬಂಧ, ಸಂಪರ್ಕವನ್ನು ಸಾಮಾನ್ಯ ಜನರು ಬೆಳೆಸಿಕೊಳ್ಳಬಹುದು. ಇದಕ್ಕಾಗಿ ಯಾವ ಪೂಜೆ, ಯಜ್ಞ, ಯಾಗ ಆಚರಣೆಗಳ ಅವಶ್ಯಕತೆ ಇಲ್ಲ, ಜನಸಾಮಾನ್ಯರ ಬಾಯಿಂದ ಬರುವ ಅವರ ಮನದಾಳದ ಪ್ರೀತಿಯ ಆಡುನುಡಿಗಳ ಪದಗಳು ಒಂದೇ ಸಾಕು ಎಂದು ಈ ಭಕ್ತಿ ಚಳುವಳಿಯು ಜನಸಾಮಾನ್ಯರ ಚಿಂತನೆಗೆ ಸ್ಪಂದಿಸಿತು.

ಅನುಭವದ ಶಕ್ತಿ ಸಂಚಯವಾಗುವ ಸ್ಥಿತಿಯನ್ನು ಈ ತತ್ವಪದ ಹೇಳುತ್ತದೆ. "ಭಾರಿನಾದ ಮ್ಯಾಲಕ ಏರಿದರೆ" ಅನುಭವಿಯಾಗುತ್ತಾನೆ. ಆಗ ಆತನ ದನಿ ಲೌಕಿಕರಿಗಿಂತ ಭಿನ್ನವಾಗುತ್ತದೆ. ಆತನ ನುಡಿ ಶುದ್ಧವಾಗುತ್ತದೆ. ನುಡಿಗೆ ಆಲೌಕಿಕ ಶಕ್ತಿ ಬರುತ್ತದೆ. ಅದೇ ಅಧಿಕಾರವೂ ಆಗುತ್ತದೆ. ಇಂತಹ ಆಧಿಕಾರವನ್ನು ಪಡೆಯುವುದು ತತ್ವಪದಕಾರರ ಸಹಜ ಗುರಿಯೂ ಆಗಿರುತ್ತದೆ. ತತ್ವಪದಗಳಲ್ಲಿ ಕಾಣುವ ನಿರ್ಭೀತಿಯು ಈ ಅಧಿಕಾರದಿಂದಲೇ ಬಂದಿರುತ್ತದೆ. ಅನುಭವದಿಂದಲೇ ಲೋಕವನ್ನು ಅರಿಯುವ ಸ್ಥಿತಿಗೆ ತಲುಪುತ್ತಾರೆ".[೨೮]

ಅನುಭಾವಿಯಾದವನ ಮಾತು ಲೌಕಿಕನಾದ ವ್ಯಕ್ತಿಗಿಂತ ಭಿನ್ನವಾಗಿರುವುದು ನಿಜ ಸಂಗತಿಯಾಗಿದೆ. ಲೌಕಿಕನಾದವನು ಜ್ಞಾನವೆಂಬ ಅಜ್ಞಾನದಲ್ಲಿ ವಿವೇಕವರಿಯದೆ ಅವಿವೇಕ ದಲ್ಲಿರುತ್ತಾನೆ; ಬೆಳಕೆಂಬ ಕತ್ತಲಿನಲ್ಲಿ ಕಾಲ ಕಳೆಯುತ್ತಾನೆ. ಅನುಭಾವಿ ಕುಳಿತಲ್ಲಿಯೇ ಪ್ರಪಂಚವನ್ನು ಸುತ್ತಿ ಹಾಕಿ ಅಜ್ಞಾನದ ಕತ್ತಲಲ್ಲಿರುವ ಜನರನ್ನು ಎಚ್ಚರಿಸಲು ಸಮಾಜದಲ್ಲಿ ಜನಸಾಮಾನ್ಯರ ಮಧ್ಯ ಇದ್ದು ಎಲ್ಲರಿಗೆ ಒಳಿತನ್ನು ಬಯಸುತ್ತಾನೆ. ಸಮಾಜದ ಸುಧಾರಣೆಯನ್ನು ಮಾಡಲು ಇಚ್ಛಿಸುತ್ತಾನೆ. ತನ್ನದೇ ಆದ ತಾತ್ವಿಕತೆಯ ನೆಲೆಯಲ್ಲಿ ಜನರಿಗೆ ಸ್ಪಂದಿಸುತ್ತಾನೆ. ಅವನು ನುಡಿಯುವ ನುಡಿಗಳಲ್ಲಿ ಭಗವಂತನ ದರ್ಶನದ ಸ್ಪರ್ಶವಿರುವಂತೆ ಕಾಣುತ್ತದೆ. ಆ ನುಡಿಗಳಲ್ಲಿ ವೇದಗಳು ಕಾಣಿಸಿಕೊಂಡಂತಾಗುತ್ತದೆ. ಅವರ ಪದಗಳಲ್ಲಿ ಯೋಗ, ಧ್ಯಾನ, ಆಧ್ಯಾತ್ಮದ ಶಕ್ತಿ ಪ್ರಕಾಶಿಸಿದಂತೆ ಕಂಡುಬರುತ್ತದೆ. ತತ್ವಪದಕಾರರ ಪ್ರತಿಪದಗಳಲ್ಲಿ ವಾಸ್ತವತೆಯಿದ್ದು ಲೌಕಿಕನಿಗೆ ಅಲೌಕಿಕದ ದರ್ಶನವನ್ನು ಮಾಡಿಸುತ್ತವೆ.

ಈ ತತ್ವಪದಕಾರರು ಜನಸಾಮಾನ್ಯರೊಂದಿಗೆ ಸಾಮಾನ್ಯರಾಗಿದ್ದುಕೊಂಡಿದ್ದರೂ ಅವರಿಗಿಂತ ಹೊಂದಾಣಿಕೆಯಲ್ಲಿ ನಡೆನುಡಿಯಲ್ಲಿ ಬುದ್ಧಿಯಲ್ಲಿ ಮನಸ್ಥಿತಿಯಲ್ಲಿ ವಿಭಿನ್ನವಾಗಿ ಕಾಣುತ್ತಾರೆ. ಜನಸಾಮಾನ್ಯರಿಗಿಂತ ವಿಭಿನ್ನವಾಗಿರಬಯಸುವುದು ಈ ತತ್ವಪದಕಾರರ ಧ್ಯೇಯವಾಗಿದೆ. ಒಬ್ಬ ಅನುಭಾವಿ ಎಂದಾಕ್ಷಣ ಆಧ್ಯಾತ್ಮ, ಯೋಗ, ಧ್ಯಾನ ಇವುಗಳನ್ನು ಅನುಸರಿಸಬೇಕೆಂದು,

ಸಂಸಾರ ಸಮಾಜವನ್ನು ತ್ಯಜಿಸಿ ತಿರಸ್ಕರಿಸಿ ಬೆಟ್ಟ, ಗವಿಗಳನ್ನು ಸೇರುತ್ತಾರೆ, ತತ್ವಪದಕಾರರು ತಮ್ಮ ತತ್ವಪದಗಳ ಜೊತೆಗೆ ಹೇಳುವುದೇನೆಂದರೆ ಸಮಾಜ, ಸಮಾಜದಲ್ಲಿನ ಜನರು, ಸಂಸಾರ ತೊರೆದು ಅನುಭಾವಿಯಾಗುವುದೊಂದೆ ಅಲ್ಲ ಇದೆಲ್ಲದರ ಮಧ್ಯೆ ಇದ್ದುಕೊಂಡು ಅವರಿಗಿಂತ ತುಸು ಶುದ್ಧ, ವಿಭಿನ್ನ ಮನಸ್ಸಿನಿಂದ ಅವರೊಂದಿಗೆ ಬಾಳುವುದೇ ಅನುಭಾವವೆಂಬುದನ್ನು ತತ್ವಪದಕಾರರು ತೋರಿಸಿದ್ದಾರೆ. ಲೌಕಿಕದಲ್ಲಿರುವಂಥ ಹಲವಾರು ವಿಷಯಗಳನ್ನು ಅಲೌಕಿಕವಾಗಿ ಬದಲಾವಣೆಗೊಳಿಸಿ ವಿಶೇಷವಾದ ನೆಲೆಯಲ್ಲಿ ಅರ್ಥೈಸಿಕೊಂಡು ತಮ್ಮ ಪದಗಳಲ್ಲಿ ಅನುಭಾವಿ ಮಾರ್ಗವನ್ನು ಅಳವಡಿಸಿಕೊಂಡಿರುವುದು ತತ್ವಪದಕಾರರಿಗೆ ಸಹಜವಾಗಿ ಸಿದ್ಧಿಸಿದ ಫಲವಾಗಿದೆ.

"ತತ್ವ ಪದಕಾರರೆಲ್ಲರೂ ಯೋಗಿಗಳು, ಅನುಭಾವಿಗಳು, ಆರೂಢರು ಆಗಿರಲಿಲ್ಲ. ಆದರೆ ತತ್ವಪದಕಾರರಲ್ಲಿ ಇಂಥವರೂ ಆಗಿದ್ದರು. ತತ್ವಪದಕಾರರು ವ್ಯಕ್ತಿಗತವಾಗಿ ದೇವರನ್ನು ಸಾಕ್ಷಾತ್ಕರಿಸಿಕೊಳ್ಳಬಹುದೆಂದು ನಂಬಿದವರು. ಅಂಥ ಅನುಭವಕ್ಕಾಗಿ ಬೇಕಾಗುವ ತನ್ಮಯತೆಯನ್ನು ಹೊಂದಲು ಲೌಕಿಕ ಕಟ್ಟುಪಾಡುಗಳನ್ನು ಬದಿಗಿರಿಸಿ ತಮ್ಮ ಒಳದನಿಗೆ ಮಾತ್ರ ಓಗೊಡುವ ಸ್ಥಿತಿಗೆ ಬದ್ಧರಾದವರು. ತಾವು ನಂಬಿದ ಶಕ್ತಿಗೆ ಶರಣಾಗಿ ಹಿಡಿದ ಹಾದಿಯಲ್ಲಿ ಮೌನ ಅನುಸಂಧಾನ ನಡೆಸಿ ಅನುಭಾವದ ಸ್ಥಿತಿಗೆ ಯತ್ನಿಸಿದವರು."[೫]

ಪ್ರಪಂಚದಲ್ಲಿರುವ ಜನಸಾಮಾನ್ಯರೆಲ್ಲ ಯೋಗಿಗಳಾಗಲು, ಅನುಭಾವಿಗಳಾಗಲು ಸಾಧ್ಯವಿಲ್ಲ. ಈ ಮಾತಿಗೆ ತತ್ವಪದಕಾರರೂ ಹೊರತಲ್ಲ. ತತ್ವಪದಕಾರರು ಅನುಭಾವದ ಹಾದಿಯಲ್ಲಿ ನಡೆಯಲು ಸಾಧನೆಯ ಸಿದ್ಧಿಯನ್ನು ಪಡೆಯಲು ಹಂಬಲಿಸಿ ಗುರುವನ್ನು ಹುಡುಕುತ್ತಾರೆ. ಅವರ ಮಾರ್ಗದರ್ಶನದಂತೆ ನಡೆಯುತ್ತಾರೆ. ತತ್ವಪದಕಾರ ಪರಂಪರೆಯಲ್ಲಿ ಗುರುಶಿಷ್ಯರ ಸಂಬಂಧ ಅನ್ಯೋನ್ಯವಾಗಿರುತ್ತದೆ.

ತತ್ವಪದಕಾರರು ಲೌಕಿಕದ ವ್ಯಾಮೋಹದಿಂದ ದೂರವಿದ್ದು ಸಮಾಜದಲ್ಲಿನ ಜನರ ಕಷ್ಟ ಮತ್ತು ಸಮಸ್ಯೆಗಳಿಗೆ ಒಳ್ಳೆಯದನ್ನೇ ಬಯಸುತ್ತಾರೆ. ನೊಂದು ಬೆಂದ ಜೀವಿಗಳಿಗೆ ಧೈರ್ಯವನ್ನು ತುಂಬುತ್ತ ಬದುಕಿನ ಮೌಲ್ಯಗಳನ್ನು ವಿವರಿಸುತ್ತಾರೆ. ಪಾರಮಾರ್ಥಿಕದ ಬಗೆಯನ್ನು ವಿವರಿಸುತ್ತ, ಜನರೊಂದಿಗೆ ಸ್ನೇಹಮಯಿಗಳಾಗಿ ಪ್ರೀತಿ ಕರುಣೆಯಿಂದ ಬಾಳಿ ಬದುಕಿದರು. ಜನಸಾಮಾನ್ಯ ರೊಂದಿಗೆ ಬೆರೆತು ಕಷ್ಟಗಳ - ಸಮಸ್ಯೆಗಳ ಮೂಲವನ್ನು ಹುಡುಕಿ ಹೇಳುತ್ತಾ ಉಪದೇಶಿಸುತ್ತಾ ತಮ್ಮ ಪರಂಪರೆಯನ್ನು ಮುಂದುವರಿಸಿದವರು ತತ್ವಪದಕಾರರು. ಆಡುಭಾಷೆಯಲ್ಲಿಯೇ ಪದಗಳನ್ನು ರಚಿಸಿ ಜನಸಾಮಾನ್ಯರಿಗೆ ಸರಳವಾಗಿ ಮನವರಿಕೆಯಾಗುವಂತೆ ಉಪದೇಶ ನೀಡಿದ್ದಾರೆ ತತ್ವಪದಕಾರರು. ಹಾಗಾಗಿಯೇ ಸಮಾಜದಲ್ಲಿ ಭಕ್ತಿಪೂರ್ವಕವಾದ ಗೌರವನ್ನು ಪಡೆದುಕೊಂಡಿದ್ದಾರೆ. ತತ್ವಪದಕಾರರ ಮಾನವೀಯತೆ, ಜಾಣ್ಮೆ, ಪರೋಪಕಾರ ಗುಣಗಳೆಲ್ಲ ತತ್ವಪದಗಳ ಮೂಲಕ ಅನಾವರಣಗೊಂಡಿರುವುದನ್ನು ಗಮನಿಸಬಹುದು. ದಾಸರ ಪದಗಳಿಗಿಂತ ಸರಳ ರೀತಿಯಲ್ಲಿ ತತ್ವಪದಗಳನ್ನು ರಚಿಸಲಾಗಿದೆ. ಇದರಿಂದ ಜನಸಾಮಾನ್ಯರಿಗೆ ಅತ್ಯಂತ ಹತ್ತಿರವಾಗಿದೆ ಎಂದು ಹೇಳಿದರೆ ತಪ್ಪಾಗಲಾರದು.

ಜನರ ಲೇಸನ್ನೇ ಬಯಸುತ್ತಾ ಅವರ ಸಮಸ್ಯೆಗಳ ಪರಿಹಾರದಲ್ಲಿಯೇ ನಡೆಯುತ್ತಿರುವ ತತ್ವಪದಕಾರರನ್ನು ಸ್ವಲ್ಪ ಆಳವಾಗಿ ನೋಡಿದರೆ ಭಿನ್ನ ಭಿನ್ನ ನೆಲೆಯಲ್ಲಿ ಕಾಣಿಸುತ್ತಾರೆ. ತತ್ವಪದಕಾರರೆಲ್ಲರು ಒಂದೇ ಜೀವನ ಒಂದೇ ನೆಲೆಯನ್ನು ಹೊಂದಿಲ್ಲವೆಂಬುದು ತಿಳಿದು ಬರುತ್ತದೆ. ಕೆಲವು ತತ್ವಪದಕಾರರು ಶ್ರೀಮಂತಿಕೆಯನ್ನು ಇಷ್ಟಪಡದೆ, ಪ್ರಾಪಂಚಿಕ ಸುಖಗಳಿಂದ ದೂರ ಉಳಿದು ಸನ್ಯಾಸ ಬದುಕನ್ನೇ ಬಯಸಿ ಬಂದು ಸಂತರಾಗಿ ನಿಂತವರು. ಇನ್ನು ಕೆಲವು ತತ್ವಪದಕಾರರಾದ ಮಹಾಂತ ಶಿವ ಮುಪ್ಪಿನ ಷಡಕ್ಷರಿ ಯೋಗಿ, ನಿಜಗುಣಶಿವಯೋಗಿ ಇವರು ಯೋಗ, ಆಧ್ಯಾತ್ಮದ ಬಗ್ಗೆ ಒಲವಿದ್ದವರು. ಇವರು ಯೋಗ ತಿಳಿದವರಾಗಿರುವುದರಿಂದ ಇವರನ್ನು ಶಿವಯೋಗಿಗಳೆಂದು ಕರೆಯುತ್ತಾರೆ. ಇವರು ಗುರುವಿನ ಉಪದೇಶದಿಂದ ಮುಕ್ತಿಯನ್ನು ಕಂಡುಕೊಂಡವರಾಗಿದ್ದಾರೆ. ಸಾಮಾಜಿಕ, ಆರ್ಥಿಕ ವಿಷಯಗಳ ಬಗ್ಗೆ ಚಿಂತಿಸದವರಲ್ಲ.

ಜೀವನದಲ್ಲಿ ಜೀವನದ ಪಯಣಕ್ಕೆ ಅಡ್ಡಿಯಾಗಿ ಬಂದ ಬಡತನವನ್ನು ಎದುರಿಸಲು ಸಾಧ್ಯವಾಗದೆ ಇದರಿಂದ ಮುಕ್ತಿಯನ್ನು ಬಯಸಿದವರು. ಸಂಸಾರ ಸಾಗರದಿಂದ ದೂರವಾದವರು. ಇದರಲ್ಲಿ ಎಷ್ಟೇ ಈಜಾಡಿ ಬದುಕಿದರೂ ಅದು ಬರೀ ಕ್ಷಣಿಕ ಮಾತ್ರ ಎಂಬುದನ್ನು ಅರಿತು ಇಂಥ ಸುಖದಿಂದ ಸಂಪೂರ್ಣವಾಗಿ ಮುಕ್ತಿಯನ್ನು ಹೊಂದಬೇಕೆಂದು ಮಾನಸಿಕವಾಗಿ ಅಂತರಾತ್ಮದಿಂದ ಹಂಬಲಿಸಿ ಆಧ್ಯಾತ್ಮದ ಹಾದಿ ಹಿಡಿದವರು. ಅದರಲ್ಲಿ ಶಾಶ್ವತ ಮುಕ್ತಿಯಿದೆ ಎಂದು ಅರ್ಥೈಸಿಕೊಂಡವರು.

ಕೆಲವು ತತ್ವಪದಕಾರರು ಗುರುವನ್ನು ಪಡೆದು ನಿಜದ ಸುಖವನ್ನು ಗುರುವೇ ತೋರಬಲ್ಲನೆಂದು ನಂಬಿದರು. ಅವರು ತೋರಿದ ಹಾದಿಯ ಸಾಧನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡವರಿದ್ದಾರೆ. ಇಂಥವರು ರಚಿಸಿದ ತತ್ವಪದಗಳಲ್ಲಿ ಸಾಮಾಜಿಕ, ರಾಜಕೀಯ ಪರ ಕರುಣೆ, ಅನುಕಂಪ, ಆಕ್ರೋಶ ಕಾಣಸಿಗುತ್ತವೆ. ವಡಕಿ ತಾತಪ್ಪಯ್ಯ, ಗೂಗಲ್ಲ ಪರಪ್ಪಯ್ಯ, ಮೋಟ್ನಳ್ಳಿ ಹಸನಸಾಬ ಮುಂತಾದವರು ಈ ಹಿನ್ನೆಲೆಯವರು.

ಕೆಲವು ತತ್ವಪದಕಾರರು ಪ್ರಾಪಂಚಿಕ ಸುಖದೊಂದಿಗೆ ಜೀವನ ನಡೆಸಿ, ಬಡತನ ವಿದ್ದರೂ ಬೇಸರವಿಲ್ಲದೆ ಬದುಕುತ್ತಿರುವರು. ಇವರು ಯೋಗ - ಆಧ್ಯಾತ್ಮ - ಅನುಭಾವವನ್ನು ಹುಡುಕ ಹೊರಟವರಲ್ಲ. ಸುಖದಲಿಯೇ ಬದುಕಿ ಬಾಳುತ್ತ ಅನುಭಾವಿಗಳ ಗಾಢ ಪ್ರಭಾವದಲ್ಲಿ ಬೆಳೆದವರು. ಇವರು ಸಹಜವಾಗಿಯೇ ಗುರುವನ್ನು ಪಡೆದುಕೊಂಡು ಅನುಭಾವದ ಛಾಯೆಯನ್ನು ಮೂಡಿಸಿದವರು. ಜನಸಾಮಾನ್ಯರಂತೆ ಅವರ ಜತೆ ಇದ್ದು ಭಿನ್ನವಾಗಿ ಬಾಳಿ ಬದುಕಿದರು. ಇವರ ತತ್ವಪದಗಳಲ್ಲಿ ದೇವರ ಪದಗಳು ಕಾಣಸಿಗುತ್ತವೆ. ಇಂಥವರು ಅಕ್ಷರ ಬಾರದ ನಾಯಕರು.

ತತ್ವಪದಕಾರರು ಯಾವುದೇ ನೆಲೆಯಿಂದ ಬಂದವರಾಗಿದ್ದರೂ ಇವರು ರಚಿಸಿರುವ ಪದಗಳ ಆಶಯ ಒಂದೇ ಆಗಿರುತ್ತದೆ. ಭಗವಂತನನ್ನು ಪ್ರೀತಿಸುವ, ಜನಸಾಮಾನ್ಯರ ಚಿಂತೆಯನ್ನು

ಮರೆಸುವ, ಜಗತ್ತಿನ ಜಂಜಾಟವನ್ನು ಎದುರಿಸುವ, ಜೀವನ ಮೌಲ್ಯಗಳ ಪ್ರಾಮುಖ್ಯತೆಯನ್ನು ತೋರಿಸುತ್ತಾರೆ. ಬದುಕಿಗೆ, ಮಾನವ ಜನ್ಮಕ್ಕೆ ಅರ್ಥವನ್ನು ಕೊಡುವ, ಸಮಾನವಾಗಿ ಬದುಕನ್ನು ಬದುಕುವ, ಅತೀಯಾದ ವ್ಯಾಮೋಹ ಆಡಂಬರದ ವೈಭೋಗ ಜೀವನದ ಪರಿಯನ್ನು ತೋರಿಸುವ, ಶಾಶ್ವತ ಮತ್ತು ಕ್ಷಣಿಕ ಸುಖದ ವ್ಯತ್ಯಾಸವನ್ನು ತಮ್ಮ ಪದಗಳ ಮೂಲಕ ತೋರಿಸಿ ತಿಳಿಸಿ ಅರ್ಥೈಸುತ್ತಾರೆ.

ತತ್ವಪದಗಳು ಅಕ್ಷರ ಬಾರದ ನಾಗರಿಕರಿಗೆ ಜೀವನದ ಅವಶ್ಯಕತೆಯೇನೆಂಬುದನ್ನು ತಿಳಿಸುತ್ತದೆ. ಅಕ್ಷರ ಕಲಿತರೂ ಮುಂದಾಲೋಚನೆಯನ್ನು ಮಾಡಿ ಬದುಕುವ ದಾರಿಯನ್ನು, ಹಿಂದಿನ ಬದುಕು - ತಾರತಮ್ಯಗಳನ್ನು ತತ್ವಪದಗಳು ಜನಸಾಮಾನ್ಯರಿಗೆ ತಿಳಿಸುತ್ತದೆ.

**ತತ್ವಪದಗಳು**

"ಏಕೆ ಬಯಲು ಭ್ರಾಂತು ನಿನಗೆ
ಸಾಕು ಪರರ ತಿಳುಹದಿರು ವಿ
ವೇಕಿಯಾಗಿ ನಿನ್ನ ನೀನೆ ತಿಳಿದು ನೋಡಲೈ.

ತನ್ನ ತಾನೇ ಪಕ್ವಮಾದ
ಹಣ್ಣುತೊಟ್ಟು ಕಳಚಿಬಿದ್ದು
ಮುನ್ನಿನಂತೆ ಹೋಗಿ ತೊಟ್ಟು ಹತ್ತಬಲ್ಲದೆ?
ಬನ್ನಬಡುವ ಜನ್ಮ ತೀರಿ
ತನ್ನ ನಿಜವ ಅರಿದ ಆತ್ಮ
ಮುನ್ನಿನಂತೆ ಲೋಕದವರ ಕೂಡಬಲ್ಲನೇ?

ಹಸಿಯ ಕಾಯ ಕೊಯ್ದು ತಂದು
ಬಿಸಿಯ ತೋರಿ ಮುಸುಕಿ ಇಡಲು
ನಸಿದು ಹೋಹುದಲ್ಲದದುವೆ ಪಕ್ಷವಪ್ಪುದೇ?
ವಸುಧೆಯಾತ್ಮನನ್ನು ತಂದು ಸಸಿವೆ ಇಟ್ಟು ಬೋಧಿಸಿದಡೆ
ಸಸಿನೆ ಇಟ್ಟು ಬೋಧಿಸಿದಡೆ
ಅಸಮಜ್ಞಾನಿಯಾಗಿ ಶರಣರೊಳಗೆ ಬೆರೆವನೇ?

ಸತ್ಯ ಜ್ಞಾನ ತಪವು ಮೌನ
ನಿತ್ಯಕ್ಷಮೆಯ ದಮೆಯು ಶಾಂತಿ
ಉತ್ತಮತ್ವವಿರಲು ಪಕ್ವವೆಂದು ತಿಳಿವುದು
ಒತ್ತಿ ನೋಡಲವರ ಮನವ
ಮತ್ತೆ ಬೈಯ್ದು ಹೊಯ್ದು ನೋಡೆ
ಚಿತ್ತದಲ್ಲಿ ಸ್ವಸ್ಥವಾಗಿ ಕಲಕದಿರ್ಪುದು.

ಹುಸಿಯು ಹುಳುಕು ಡಂಭಕತ್ವ
ಕೊಸರು ಕೋಪ ನೀಚಹೃದಯ
ನುಸುಳು ವಿಷಯ ವಿರಲಪಕ್ವವೆಂದು ಅರಿವುದು
ಸಸಿನೆ ಅವನ ಕೆಣಕಿ ನೋಡೆ
ಕಿಸುಕುಳತ್ವ ತೋರುತಿಹುದು
ಒಸೆದು ಅವರ ತಿಳುಹೆ ಸ್ವಸ್ಥಶರಣರಪ್ಪರೆ?

ಇವರ ಬೇಧ ಅರಿಯದನಕ
ಅವರ ತಿಳುಹಿ ಫಲವದೇನು?
ಭವಕೆ ಹೋಗಲವರು ತನಗೆ ಕೊರತೆಯಪ್ಪುದೇ?
ಭವದ ಕಡೆಯ ಕಂಡ ಬಳಿಕ
ಶಿವನ ನಿಜವು ತಾನೆಯಹುದು
ಶಿವ ಷಡಕ್ಷರಾಂಕ ನಿಮ್ಮ ಶರಣಪ್ಪರು".[೩೦]

ಸತ್ಯಜ್ಞಾನದಿಂದ ಮನುಜನಾಗಿ ಸುತ್ತಲೂ ನೋಡಿದರೆ ನಿನಗೆ ಜಗದ ಪರಿಚಯವಾಗುತ್ತದೆ. ಆಗ ನೀನು ನಿನ್ನ ದಾರಿಯ, ಮುಂದಿನ ಗುರಿಯ ತಲುಪಲು ಸಹಾಯವಾಗುತ್ತದೆ. ಈ ಜ್ಞಾನವು ನಿನ್ನ ಮನದೊಳು ಬರಲು ಮೊದಲು ನೀನು ನೀನಾಗು ನಿನ್ನನ್ನು ನೀ ಅರಿತರೆ ಸತ್ಯ ಸ್ವರೂಪಿ ಭಗವಂತನ ಕೃಪೆಯು ಸಿಗುವುದು ಖಚಿತವೆಂದು ಮುಪ್ಪಿನ ಷಡಕ್ಷರಿಯವರು ತಮ್ಮ ಪದಗಳಲ್ಲಿ ತಿಳಿಸುತ್ತಾರೆ.

"ಕೋಗಿಲೆ ಚೆಲ್ವ ಕೋಗಿಲೆ! ಮುದ್ದು
ಕೋಗಿಲೆ ಜಾಣ ಕೋಗಿಲೆ.

ಹಿಂದೆ ತಪದೊಳೀಶನೊಂದಿರುತಿರಲೆಚ್ಚ
ಬೆಂದ ಕಾಮನ ಬಿಟ್ಟು ಕೋಗಿಲೆ
ಬಂದು ಬೇಗದಿ ಬಾಲೇಂದುಧರನ ಕೂಡಿ
ಕುಂದದೆ ನೀ ಬಾಳು ಕೋಗಿಲೆ.

ಮನುಮುನಿಗಳ ನೀತಿಯನು ಕೆಡಿಸುವ ದುಷ್ಟ
ಮನಸಿಜನನು ಮೀರಿ ಕೋಗಿಲೆ
ಘನಪದವನು ತನ್ನ ನೆನವರಿಗೊಲಿದೀವ
ಧನದಮಿತ್ರನ ಸಾರು ಕೋಗಿಲೆ.

ನಲ್ಲರನಗಲಿದ ಮೆಲ್ಲೆದೆಯರ ಕೊಲ್ವ
ಫುಲ್ಲಶರನ ಪಿಂಗಿ ಕೋಗಿಲೆ
ಎಲ್ಲ ಜೀವರಿಗೆರವಿಲ್ಲದೊಲವನೀವ

ಬಲ್ಲಭವನೊಳಿರು ಕೋಗಿಲೆ.

ಮಂಗಳರವದೊಳಂಗನ ಬಣ್ಣಿಸೆ
ಭಂಗವಲ್ಲದೆ ನೋಡು ಕೋಗಿಲೆ
ಕಂಗೊಳಿಸುವ ಸರ್ವಮಂಗಳೆಯರಸನ
ಪಿಂಗದೆ ನೀ ಪಾಡು ಕೋಗಿಲೆ.

ದುರುಳ ಕಂತುವಿನೊಡನಿರೆ ಲೋಕದೊಳು ನಿನ್ನ
ಪರಪುಟ್ಟನೆಂಬರು ಕೋಗಿಲೆ
ಧರೆಗೆ ಜನಕನಾದ ಗುರು ಶಂಭುಲಿಂಗದ
ಚರಣಪಲ್ಲವ ಪಿಡಿ ಕೋಗಿಲೆ".[೩೧]

ಶುಭವಾದುದನ್ನು ಹರಸು, ಶುಭವನ್ನೇ ನುಡಿ, ಯಾವ ತೊಂದರೆಯು ಇಲ್ಲದಂತೆ ಮುಂದೆ ಸಾಗುವ ದಾರಿಯನ್ನು ಕಾಣು; ಪರಮಾತ್ಮನು ನಿನ್ನ ದಾರಿಯಲ್ಲಿ ಶುಭಕೋರುವನು! ಯಾರಿಗೆ ಯಾವ ಕೇಡು ಮಾಡದಿರುವ ನಿನ್ನ ನಡತೆ, ಶುಭ ಯೋಚನೆ, ನಿನ್ನನ್ನು ಭಗವಂತನ ಕೃಪೆಗೆ ಒಳಪಡಿಸುವುದು. ನಿನ್ನ ಗುರಿ ತಲುಪಲು ಶುಭಾಶೀರ್ವಾದ ಮುಖ್ಯ; ನಿನ್ನಲ್ಲಿರುವ ಆ ಉತ್ತಮ ಗುಣಗಳನ್ನು ಭಗವಂತ ಮೆಚ್ಚುವನು. ನೀ ನಂಬಿದ ಗುರುಕೃಪೆ ನಿನಗಿದೆ, ಹೆದರದಿರು! ಎನ್ನುವ ಮಾತುಗಳನ್ನು ನಿಜಗುಣ ಶಿವಯೋಗಿಯವರು ತಮ್ಮ ಪದಗಳಲ್ಲಿ ಹೇಳುತ್ತಾರೆ.

"ಎಂತಪ್ಪ ಮಗನು ಪುಟ್ಟಿದನಯ್ಯ ಗುರುರಾಯ
ಚಿಂತೆಯಲಿ ತೊಳಲಿ ಬಳಲಿಸುವನೆನ್ನ
ಹೊನ್ನೆಂಬ ಕಡಲೆಯನು ಹೆಣ್ಣೆಂಬ ಬೆಲ್ಲವನು
ಮಣ್ಣೆಂಬ ಕುಂಚಿಗೆಯವೊಳಗೆ ಹಾಕಿ
ತಿನ್ನುವೆನು ಕೊಡುಯೆಂದು ಎನ್ನ ಬಲು ಕಾಡುವನು
ಸನ್ನತಿಯ ಪೇಳಿ ಸಲಹಯ್ಯ ಶಿವನೆ.
ಕಂಡು ಕಂಡುದ ಬೇಡಿ ಬಂಡು ಮಾಡಿಯೆ ಯಮನ
ಕುಂಡದೊಳು ಹಾಕುವನು । ಮುಂದೆ ಹೃದಯ
ಪುಂಡರೀಕದೊಳಿರುವ ಮಂಡಲತ್ರಯವಾಸ
ಖಂಡಿಸೈ ಈ ಮಗನ ಸಿರವ ಬೇಗ.
ಜಗದೊಳು ಮಹಂತೇಶ ನಗೆಗೀಡಾದರೆ ಏನು
ಮಗನ ಸಂಹರಿಸಿ ಮೋಕ್ಷವನೀಯೋ ಎನಗೆ".[೩೨]

ಸೃಷ್ಟಿಯಲ್ಲಿರುವ ಪ್ರತಿವಸ್ತುವಿನಲ್ಲಿ ಭಗವಂತನಿದ್ದಾನೆ. ಅವನಿಲ್ಲದ ಸ್ಥಳವಿಲ್ಲ. ಅವನು ಸೃಷ್ಟಿಸಿರುವ ಈ ಜಗತ್ತಿನಲ್ಲಿರುವ ಪ್ರತಿ ಜೀವಿಯನ್ನು ಅವನು ಕಾಪಾಡುತ್ತಾನೆ. ಪ್ರತಿಕ್ಷಣವೂ ಆಶೀರ್ವದಿಸುತ್ತಾನೆ. ಯಾವ ಮನುಜನಲ್ಲಿ ಕುಲ, ಜಲ, ನೆಲವೆಂಬ ದ್ವೇಷ, ಅಸೂಯೆ,

ವಂಚನೆ, ತಾರತಮ್ಯಗಳಿಲ್ಲವೊ ಅಂಥವರಿಗೆ ದೇವರು ತನ್ನ ಪ್ರೀತಿಯನ್ನು, ಕೃಪೆಯನ್ನು, ನೀಡುತ್ತಾನೆ. ಮೋಸ, ವಂಚನೆ, ಮಾಡುವವರಿಗೆ ಕರುಣಿಸುವುದಿಲ್ಲ. ಉತ್ತಮನಾಗಿ ಬಾಳು, ಸಮಾನತೆಯಿಂದ ಜೀವಿಸಿ ನಡೆನುಡಿಯಲ್ಲಿ ದೇವರನ್ನು ಕಾಣೆಂಬುದನ್ನು ಬಾಲಲೀಲ ಮಹಾಂತ ಶಿವಯೋಗಿಯವರು ಈ ಪದದಲ್ಲಿ ತಿಳಿಸಿದ್ದಾರೆ.

"ನೋಡು ನೋಡಲೊ ಕಾಣುತಾದೋ
ನಿನ್ನಯ ಕರಸ್ಥಳದೊಳಾಡುತಾದೋ
ನೋಡುತ ಎಡಬಲ ಹಾಡುತ ಆಡುತ
ಕೂಡಲೊ ಕೂಡಲಸಂಗಮ ದೇವತ.
ಏಳುತ ಮೇಲೆಳುತ ನಡೆಯೊ
ಏಳುಸುತ್ತಿನ ಕ್ವಾಟಿ ದಾರಿಹಿಡಿಯೋ
ತಾಳುತ ಬಾಳುತ ತನುಮನ ಬಾಗುತ
ಮೇಲಗಿರಿಯ ಮನೆಸೇರಿ ನೀ ಮೆರಿಯೊ.
ಜೀವ ಶಿವಗ ಭೇದ ಇಲ್ಲ । ನೀ
ಜೀವಭಾವವಳಿದರೆ ಬ್ಯಾರೆ ಇಲ್ಲ
ಸಾಯುವ ಹುಟ್ಟುವ ಯಾವ ಭಯಗಳಿಲ್ಲ
ಸಾವಧಾನದಿ ನೀ ಸಾಧಿಸಿಕೊಳ್ಳಲೊ.
ಬಯಲಿಗೆ ಬಯಲಾಕಾರಾ । ನಿ
ರ್ಬಯಲೊಳು ಇಟಪುರ ಧೀರ
ಬಯಲನೆ ಹಿಡಿಯುತ ಬಯಲನೆ ಪಡೆಯುತ
ಬಯಲ ಬ್ರಹ್ಮನೊಳು ಬಯಲಾಗಿ ಭಜಿಸುತ".[೩೩]

ಭಗವಂತ ನರಜನ್ಮ ತಪ್ಪು ಮಾಡುವುದು ಸಹಜ. ಅಂಥವನು ಬಂದು ನಿನ್ನಲ್ಲಿ ಶರಣಾದರೆ ಅವನನ್ನು ಕ್ಷಮಿಸಿ ನಿನ್ನ ಅನುಗ್ರಹವನ್ನು ನೀಡು, ನೀನು ಅವರನ್ನು ಕೈ ಬಿಡದೆ ಮುನ್ನಡೆಸು; ತನ್ನ ತಪ್ಪುಗಳನ್ನು ಅರಿತು ಬಾಳುವ ಜ್ಞಾನವನ್ನು ಕೊಡು. ಪಾಪಿಗಳನ್ನು ಮನ್ನಿಸಿ, ಮೃಗಗಳಂತಿರುವ ಮನುಜನ ಮನಸ್ಸನ್ನು ಮೃದುಗೊಳಿಸು, ಮನುಜನ ದೇಹದಲ್ಲಿರುವ ವಿಕೃತ ಗುಣಗಳನ್ನು ನಿವಾರಿಸಿ ನಿನ್ನ ಕೃಪೆಗೆ ಒಳಪಡಿಸು. ಈ ಜ್ಞಾನದ ಅರಿವು ಅವನಿಗಾದರೆ ಅವನೊಬ್ಬ ಜ್ಞಾನದ ಅರಿವಿನಲ್ಲಿ ಮುನ್ನಡೆಯುವನೆಂಬುದನ್ನು ಮೋಟ್ನಳ್ಳಿ ಹಸನ್ ಸಾಬ್ ಅವರು ಆ ತತ್ವಪದಗಳ ಮೂಲಕ ಹೇಳುತ್ತಾರೆ.

"ಚಹಾ ಕುಡಿಬ್ಯಾಡೋ ಮನುಜಾ
ಛೀ ಮಾಡುವೆ ತಿಳಿ ತಿಳಿ ತಿಳಿ
ಚಹಾ ಕುಡಿಬ್ಯಾಡೋ ಮನುಜಾ
ಚಹಾ ಕಾಫಿ ಕುಡಿಬ್ಯಾಡೋ ಮಂಗ

ಚಾಳಿ ಚಟದ ಮನಸಿನ ಸಂಗ
ಥೀ ಇಂದ್ರಿಯ ನಷ್ಟವೇ ಭಂಗ
ಮಂದಬುದ್ಧಿ ಬಿಡು ಬಿಡೂ ....
ಹೋಟೆಲ್ ಎಂದು ಓಡ್ಯಾಡಿ ಹೊಕ್ಕಿ
ಗಳಿಸಿದ ರೊಕ್ಕದರೊಳಗಿಕ್ಕಿ
ಹೆಂಡರು ಮಕ್ಕಳು ಮಣ್ಣುಮುಕ್ಕಿ
ಹೊಲಮನಿ ಕಳಕೊಂಡ್ವಾದಿಯೋ ಪಿಕ್ಕಿ" ....[೨೪]

ಮನುಜನ ನಡೆ - ನುಡಿ, ನಡತೆಯನ್ನು ಚಹಾ ಕಾಫಿಗಳಿಗೆ ಹೋಲಿಸುತ್ತ ಬುದ್ಧಿಮಾತುಗಳನ್ನು ಹೇಳಿ, ನಿಜದ ನಿವಾಸದ ಕಡೆಗೆ ಹೋಗುವ ದಾರಿ ಅದರ ಜ್ಞಾನದ ಅರಿವಿನ ಮಹತ್ವವನ್ನು ತಿಳಿಸುತ್ತಿದ್ದಾರೆ. ಮನುಷ್ಯ ಸಹವಾಸದೋಷದಿಂದ ಪಡೆಯುವ ಗುಣಗಳಿಂದ ಜ್ಞಾನದ ಅರಿವಿನಿಂದ ದೂರವಾಗುತ್ತಾನೆ. ಹಾಗಾಗಿ ಎಲ್ಲವನ್ನು ಬಿಟ್ಟು ಕತ್ತಲಿನಿಂದ ಬೆಳಕಿನಡೆಗೆ ಬಂದು ನೋಡು. ನಿನ್ನನ್ನು ಆ ಬೆಳಕಿನಲ್ಲಿ ನಡೆಸಲು ಭಗವಂತನು ಕಾಯುತ್ತಿರುವನು. ಮೊದಲು ನೀನು ಮಾನವನಾಗು ನಡತೆಯನ್ನು ಉತ್ತಮಗೊಳಿಸು. ಜ್ಞಾನದ ಅರಿವನ್ನು ಪಡೆದು ಪರಿಪೂರ್ಣ ಪರಿಶುದ್ಧ ಮನಸ್ಸನ್ನು ಹೊಂದು ಎಂಬುದನ್ನು ವಡಕಿ ತಾತಪ್ಪಯ್ಯನವರು ತತ್ವಪದಗಳಲ್ಲಿ ತಿಳಿಸುತ್ತಾರೆ.

"ನಾನೇನೆಂದೆನೋ ನಿಮಗೆ । ನಾನೇನೆಂದೆನೋ
ನಾನೇನೆಂದೆನಯ್ಯಾ ನಿಮಗೆ । ಕನಕದ ಗೊಂಬೆಯೆಂದೆ ।
ಚಿನ್ನದ ಮೂರ್ತಿಯೆಂದೆ ಪನ್ನಗಶಯನನೆಂದೆ

ಆಶ ಕಳೆದವನೆಂದೆ ಕಾಶಿ ವಿಶ್ವನಾಥನೆಂದೆ
ದೇಶದೊಳು ಹೊಳೆಯುವ ಏಳು ಬೆಟ್ಟದ ಮೇಲೆ ।
ವೈಕುಂಠವಾಸನೆಂದೆ ವೆಂಕಟರಮಣನೆಂದೆ

ಅಂಡದಲ್ಲಿರುವೆ ನೀನು ಪಿಂಡದಲ್ಲಿರುವೆ ನೀನು
ಬೆಳಗುವ ಮರ್ತಾಂಡ ಬ್ರಹ್ಮಾಂಡ ನೀನೆ ।
ಪಂಡರಿಪುರವಾಸ ಪುಂಡಲೀಕನ ಪ್ರಿಯನೆಂದೆ

ಬಿಳಿಯ ಆಕಾರನೆಂದೆ ಬಾಲ ರಕ್ಷಕನೆಂದೆ
ಶ್ರೀ ಶೈಲದಲ್ಲಿರುವ ಮಲ್ಲಿಕಾರ್ಜುನನೆಂದರೆ ।
ಎಲ್ಲಾ ಲೋಕದ ಕಾಯ್ವ ಅಲ್ಲಮಪ್ರಭುವೆಂದೆ

ನರರಲ್ಲಿ ನರಸಿಂಹ ಹರದೂರು ಕರ್ತ ನೀನು
ಪಾರಮರ್ಥ ಗುರುದೇವಾ ಪ್ರಪಂಚ ರಹಿತನೆ ।
ಆಪದ್ಬಾಂದವ ನೀ ಹರಿನಾರಾಯಣನೆಂದೆ

ಶುದ್ಧ ವಸ್ತುವೂ ಎಂದೆ ಬೋಧಗುರು ನಿಮಗಂದೆ
ಮೇಧಿನಿಯೊಳಗಿರುವ ಪೂರತಿಪ್ಲಿಪುರದಲ್ಲಿ
ಥಳಥಳ ಹೊಳೆಯುವ ಸಿದ್ಧರಾಮೇಶನೆಂದೆ"[೩೫]

ದೇಹವು ಆತ್ಮವೆಂಬುದನ್ನು ಸದಾ ಜ್ಯೋತಿಯಾಗಿರಿಸಿಕೊಂಡಿರುತ್ತದೆ. ಆಗ ದೇಹಕ್ಕೆ ಜೀವವಿರುತ್ತದೆ. ಈ ಜೀವವನ್ನು ಹೊತ್ತು ಭೂಮಿಯಲ್ಲಿ ಬಾಳಿ ಬದುಕಬೇಕು. ಈ ಬದುಕೆಂಬುದಕ್ಕೆ ಜಂಜಾಟ, ಕಷ್ಟ, ನೋವುಗಳನ್ನು ಹೊತ್ತು ಬಾಳುವುದರಲ್ಲಿ ಎಷ್ಟು ಸಮಸ್ಯೆಯಿದೆ. ಇದನ್ನರಿತು ಬಾಳಲು ಆಗದೆ ಈ ಬದುಕೆ ಬೇಡವೆನಿಸುತ್ತದೆ. ಇದರಿಂದ ಹೊರಬಂದು ಭಗವಂತನನ್ನು ಪ್ರಾರ್ಥಿಸಿ, ಯೋಗ್ಯ ದಾರಿಯಲ್ಲಿ ಜಂಜಾಟವಿಲ್ಲದ ಪ್ರಶಾಂತತೆಯ ಹಾದಿಯಲ್ಲಿ ನಡೆಸಿ ಜ್ಞಾನೋದಯವನ್ನು ನೀಡೆಂದು; ಬೆಳಕಿನ ಪಥದಲ್ಲಿ ನಡೆಯುವುದನ್ನು ಮನಸ್ಸು ಬಯಸುತ್ತದೆಂದು ಮಂಜಲರ್ಾಖಾದರ್ ಸಾಬ್ ತಮ್ಮ ತತ್ವ ಪದಗಳಲ್ಲಿ ಹೇಳಿದ್ದಾರೆ.

"ಹರಪೂಜೆ ಗುರುಸೇವಾ ಹರ್‌ವಖ್ತ್ ಮಾಡೋ
ಮರವೀಗಿ ಬಿದ್ದು ನೀ ಮರೆಯ ಬ್ಯಾಡೊ
ಶ್ರಾವಣ ಮನನ ನಿಜ ಧ್ಯಾನ ಮಾಡೊ
ತನು ಮನ ಧನ ಶ್ರೀ ಗುರುವಿಗಿ ನೀಡೊ
ತನ್ಮನಿ ಬಾಗಿಲಲಿ ಚಿನ್ಮಯನ ನೋಡೊ
ಅರುವಿನ ಗುರುವಿಂದ ಲಿಂಗವ ನೋಡೊ
ನೂರಾರು ಸಾವಿರ ಜಪಗಳ ಮಾಡೊ
ಇನ್ನೂರು ಹದಿನಾರು ಸಕಿಲಗಳು ನೋಡೊ
ಗುರುವಿನ ಗುಲಾಮ ಗುರು ಭೇದ ನೀಡೊ
ಗುರುವಿನ ಮಂತ್ರವನು ಹೃದಯದಿ ನೋಡೊ
ಗುರು ಲಘು ತಿಳಿದು ಗುಣವಂತರ ಕೊಂಡಾಡೊ
ಧರೆಯೊಳು ಹಿರೇಸಾವಳಗಿ ಕಲ್ಬುರ್ಗಿ ನೋಡೊ
ಜಗದ್ಗುರು ಶಿವಯೋಗಿ ಅಲಹಾನ ನೋಡೊ
ಮಹಮ್ಮದ್ ಹೇಳಿದ ಹಾಡು ಶಿಸ್ತೀಲಿ ಹಾಡೊ"[೩೬]

ಮನುಜ ತಾನು ಮಾಡಿದ ತಪ್ಪುಗಳನ್ನು ಅರಿಯುವ ಶಕ್ತಿ ಅವನಲ್ಲಿಲ್ಲದಾಗ 'ತಾನು', 'ತನ್ನತನ'ದ ಅಹಂಗಳನ್ನು ತೋರೆಯುವ ಮಾತುಗಳನ್ನಾಡದೆ ಎಲ್ಲವೂ ನನ್ನಿಂದಲೇ ಎನ್ನುವ ಬಿಂಕಬಿನ್ನಾಣಗಳಲ್ಲಿ ತೇಲಾಡುತ್ತಿರುತ್ತಾನೆ. ಅಂಥವನನ್ನು ದೇವರು ಮೆಚ್ಚನು. ತನ್ನ ದಾರಿಯಲ್ಲಿ ತಾನೇ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿಕೊಂಡಾಗ ಅರಿವಿನ ಕಡೆ ಮುಖ ತಿರುವುತ್ತಾನೆ. ಗುರುವಿನ ಮೊರೆಹೋಗುತ್ತಾನೆ. ತಪ್ಪನ್ನು ಒಪ್ಪಿ ಬಾಳುವ ದಾರಿಯನ್ನು ಕಾಣಲು ಹಂಬಲಿಸುತ್ತಾನೆ. ಆ ವೇಳೆಯಲ್ಲಿ ಅವನಿಗೆ ಸಿಕ್ಕ ಗುರು "ಹುಚ್ಚ ನೀನು ನಿನ್ನ ದಾರಿಯನ್ನು ತೋರುವ ಗುರು

ನಿನ್ನಲ್ಲೇ ಇದ್ದಾನೆ. ಅವನನ್ನು ಅರಿಯದೆ ನೀನು ಹೀಗೇಕೆ ಅಲೆಯುತ್ತಿರುವೆ. ಶಿವನಿಲ್ಲದ ಸ್ಥಳವಿಲ್ಲ. ಅವನಿಲ್ಲದ ಜಾಗವಿಲ್ಲ. ಅವನು ಸರ್ವಾಂತರ್ಯಾಮಿ; ಅವನನ್ನು ಹುಡುಕಬೇಡ, ಹುಡುಕಿದರೆ ಸಿಗನು. ಕರೆಯಬೇಕು. ನೀನು ಅವನನ್ನು ಕರೆದರೆ ಬರುವನು, ಅವನು ಇಷ್ಟದಂತೆ ನೀನು ನಡೆದರೆ ನುಡಿದರೆ ಬಾಳಿದರೆ ನೀನಿದ್ದಲ್ಲಿಗೆ ಬಂದು ಆಶೀರ್ವದಿಸುವನೆಂಬುದನ್ನು ಸಾವಳಿಗಿ ಮಹಮದ್ ಅವರು ತಮ್ಮ ತತ್ವಪದಗಳಲ್ಲಿ ಹೇಳುತ್ತಾರೆ.

"ಗುರುತಾ ತೋರಿದ ಗುರುವಿನ
ಮರೆತು ನಾನಿರಲಿ ಹ್ಯಾಂಗ?
ಗುರುವಿನಂದ ಅಧಿಕ ಉಂಟೆ?
ಪರಕೆ ಪರವಾದ ವಸ್ತು.

ಆಧಾರ ಅಗ್ನಿಯ ಸ್ಥಳದ
ಭೇದ ಅರುಹಿ ಕೊಟ್ಟಾ
ನಾದ - ಬಿಂದು - ಕಳೆಯ
ಹಾದಿ ತೋರಿಸಿ ಬಿಟ್ಟಾ
ಸಾಧಿಸಿ ಮೂಲ ಮಂತ್ರ
ಕರ್ಣದೊಳು ಊದಿಬಿಟ್ಟಾ.

ನಾಸಿಕ ಕೊನೆಯೊಳು
ಸೂಸುವ ವಾಯುಗಳೈದು
ಭಾಸ್ಕರ - ಕೋಟಿ
ಪ್ರಕಾಶದಿ ಮೆರೆವುದು
ಸಾಸಿರ ದಳದೊಳು
ಸುಳಿ ಸುಳಿದಾಡುವುದು.

ಅಂಗ - ಲಿಂಗದ ಸಂ -
ಯೋಗವ ಹೇಳಿದನು
ಹೀಂಗದಿರೆಂದು ಎ -
ಚ್ಚರಕೊಟ್ಟು ಹೋದನು
ಕಂಗಳಾಗ್ರದಿ ಶಿವ -
ಲಿಂಗ ತೋರಿಸಿಕೊಟ್ಟನು.

ಕುಂಟಲ ಮಧ್ಯದಿ
ಜ್ಯೋತಿ ಕುಣಿದಾಡುವುದು
ಅಣುರೇಣು ತೃಣಕಾಷ್ಠದಿ

ಸಮನಾಗಿ ನಿಲ್ಲುವುದು
ಪ್ರಣವ ಸ್ವರೂಪ ಪರ
ಬ್ರಹ್ಮ ತಾನಾದ ಮೇಲೆ.

ಭವ ತೊಲಗಿಹೋಯಿತು
ಬಹು ಪುಣ್ಯ ದೊರಕಿತು
ಭುವನ ಕಂದರವಾಯಿತು
ಗವ್ಹರವ ತೋರಿತು
ಅವಿರಲಾತ್ಮಕ ಗುರು -
ಲಿಂಗ ಜಂಗಮನಲ್ಲಿ”.[೩೨]

ಮನುಷ್ಯನು ಅನುಭವಿಸುವ ಸುಖ - ಭೋಗ, ಬಯಕೆಗಳೆಲ್ಲವೂ ಕ್ಷಣಿಕವಾದವುಗಳು. ಇವುಗಳನ್ನು ಹಿಂಬಾಲಿಸಿಕೊಂಡು ಹೋಗುವುದು ಕೆಟ್ಟಗುಣ. ಇದನ್ನರಿಯದೆ ಮನುಜ ಆಮಿಷಗಳಿಗೆ ಬಲಿಯಾಗಿ ತನ್ನನ್ನು ತಾನೇ ಹಾಳು ಮಾಡಿಕೊಳ್ಳುತ್ತಾನೆ. ಹಾಗಾಗಿ ಶಾಶ್ವತ ಸುಖದ ಅರಿವಿನ ಪ್ರಜ್ಞೆ ಮನುಜ ತನ್ನಲ್ಲಿ ತಾನು ಮಾಡಿಸಿಕೊಳ್ಳಬೇಕು. ಅದರಿಂದ ಅವನಲ್ಲಿರುವ ವಿಕೃತ ಗುಣಗಳಿಗೆ ಕೊನೆ ಸಿಗುತ್ತದೆ. ಮನುಜನು ಅರಿವಿನ ಹಾದಿಗಾಗಿ ಗುರುವನ್ನು ಹುಡುಕಿಕೊಂಡು ಹೋಗಿ ಪಡೆಯುವ ಜ್ಞಾನದಲ್ಲಿ ಭಗವಂತನ ಕೃಪೆ ಸಿಗುತ್ತದೆ. ಅದರಿಂದ ಅವನು ಕ್ಷಣಿಕ ಸುಖದ ದಾರಿಯನ್ನು ತೊರೆದು ಶಾಶ್ವತ ಸುಖದಿಂದ ಸಂಪೂರ್ಣವಾಗಿ ಭಗವಂತನ ಕೃಪೆಗೆ ಒಳಪಡುತ್ತಾನೆಂದು ನಿಂಬೆರಗಿ ಮಹಾರಾಜರು ತಮ್ಮ ತತ್ವಪದಗಳಲ್ಲಿ ತಿಳಿಹೇಳಿದ್ದಾರೆ.

“ಮಾಡುವೆ ಶರಣು ಮಾಡುವೆ
ಕೂಡಲಸಂಗನ ಶರಣರ ಪಾದಕೆ
ಕಂಬಳಿ ಮರುಳಾರು ಕಕ್ಕಯ್ಯಗೆ
ಉಂಬುವ ಪ್ರಸಾದವನು ಉದ್ಭವಿಸಿದಾತಗೆ
ಅಂಬಿಗರ ಚೌಡಯ್ಯ ಘನ ಘಟ್ಟಿವಾಳಗೆ
ಹಂಬಲಿಸಿ ಎರಗುವ ಶರಣರಿಗೆ
ಮಲ್ಲೀ ಬೊಮ್ಮಯ್ಯ ಮಧುವರಸ ಹರಳಯ್ಯ
ಬಿಲ್ಲಮ ಬಂಕದ ಮಾರಯ್ಯಗೆ
ಗೊಲ್ಲಾಳ ಬಲ್ಲಾಳ ಕಲಕೇತ ಕಣ್ಣಪ್ಪ
ನುಲಿಯ ಚಂದಯ್ಯ ಮೋಳಿಗೆ ಮಾರಯ್ಯಗೆ
ಮೇದಾರ ಕೇತಯ್ಯ ಮೆರೆಮಿಂಡ ಚಿಕ್ಕಯ್ಯ
ಆಯ್ದಕ್ಕಿ ಮಾರಯ್ಯ ಅಜಗಣ್ಣಗೆ
ಮೈದುನ ರಾಮಯ್ಯ ಮಡಿವಾಳ ಮಲುಹಣ
ಸಾಧು ಮರುಳಶಂಕರ ಸಿದ್ಧರಾಮಗೆ

ಸತ್ಯಕ್ಕ ಪಿಟ್ಟವ್ವ ಶ್ರೀ ನೀಲಲೋಚನೆ
ಮುಕ್ತವ್ವೆ ಚಂಗುಳಿ ಗೊಗ್ಗವ್ವೆಗೆ
ಹೆತ್ತಮಗನ ಕೊಂದಾಕೆಗೆ ಸತ್ಯಗಂಡನ ಪಡೆದು
ಬತ್ತಲೆ ಕದಳಿಯ ಪೊಕ್ಕಂಥ ಅಕ್ಕಮಹಾದೇವಿಗೆ
ಕರೆಯುವೆನು ಏಳನೂರದೆಪ್ಪತ್ತು ಗಣಂಗಳ
ಮರೆಯದೆ ಅರವತ್ಮೂರು ಪುರಾತನ
ಪರಿಪೂರ್ಣ ಶ್ರೀ ಗುರುಪಾದ ಭಕ್ತಿಯಿಂದ
ಪರಿಪರಿ ಪೂಜಿಪ ಪರವನ ಒಡಗೂಡಿ"[೩೮]

ಈ ತತ್ವಪದಗಳಲ್ಲಿ ಶರಣರನ್ನು ಸ್ಮರಿಸುವುದನ್ನು ಕಾಣಬಹುದು. ಈ ತತ್ವಪದಗಳ ಮೂಲಭಕ್ತಿ ಎಲ್ಲವೂ ಶಿವನ ಇಚ್ಛೆಯಂತೆ ನಡೆಯುವುದೆಂದು ಅರ್ಥವಾಗುತ್ತದೆ. ನಡೆಸುವವನು ಅವನೇ! ನುಡಿಸುವವನು ಅವನೇ! ಅವನು ನಡೆಸಿ ನುಡಿಸಿದಂತೆ ಮುನ್ನಡೆಯುವರು ಮನುಜರು. ಶರಣಾರ್ಥಿ ಮನುಜನಿಗಿರುವ ಒಂದು ಉತ್ತಮ ನಡತೆಯನ್ನು ತೋರಿಸುತ್ತದೆ. ಭಗವಂತನಿಗೆ ಶರಣಾಗಿ ಬಾಳಿದರೆ ಅವನು ತನ್ನಲ್ಲಿರುವ ನಾನು ನನ್ನದೆಂಬುವುದನ್ನು ಬಿಟ್ಟು ನಡೆಯಬಹುದು. ಭಗವಂತನ ಕೃಪೆಯಲ್ಲಿ ಬಾಳಬಹುದೆಂಬುದನ್ನು ಗೂಗಲ್ಲು ಪರಪ್ಪಯ್ಯನವರು ತಮ್ಮ ತತ್ವಪದಗಳಲ್ಲಿ ತಿಳಿಸುತ್ತಾರೆ.

- ಆತ್ಮ ಮತ್ತು ಪರಮಾತ್ಮನ ಪರಿಕಲ್ಪನೆಗಳನ್ನು ತತ್ವಪದಗಳಲ್ಲಿ ತರಲಾಗಿದೆ.
- ಕೆಲವು ತತ್ವಪದಗಳು ದೇಹವನ್ನು ಸಾಧನವೆಂದು ಪರಿಗಣಿಸಿ ದೇಹಕ್ಕೆ ಮಹತ್ವವನ್ನು ಕೊಟ್ಟರೆ, ಕೆಲವು ತತ್ವಪದಕಾರರು ಶರೀರ ನಶ್ವರ ಆತ್ಮ ಅವಿನಾಶಿ ಎಂದು ಹೇಳುತ್ತಾರೆ.
- ತತ್ವ ಎಂದರೆ ಈ ಜೀವನವನ್ನು ಅರಿತುಕೊಳ್ಳುವ ವಿಧಾನವೇ ಆಗಿದೆ. ಅಲೌಕಿಕವಾದ - ಆಧ್ಯಾತ್ಮಿಕವಾದ ವಿಚಾರಗಳನ್ನು ಹೇಳುವುದಕ್ಕೆ ಲೌಕಿಕ ಪರಿಭಾಷೆಗಳನ್ನು ಬಳಸುತ್ತಾರೆ.
- ತತ್ವಪದಕಾರರಲ್ಲಿ ಗುರುವಿಗೆ ವಿಶಿಷ್ಟವಾದ ಸ್ಥಾನವಿದೆ. ಸಾಧಕನಿಗೆ ಪರಮಾತ್ಮನನ್ನು ಕಾಣಲು ಗುರುವೇ ದಾರಿ ತೋರಬೇಕೆಂದು ಹೇಳುತ್ತಾರೆ.
- ಗುರುಶಿಷ್ಯರ ಸಂಬಂಧ ಸುಲಭವಾಗಿ ಘಟಿಸುವುದಿಲ್ಲ; ಅದು ಶಿಷ್ಯನ ಸಾಧನೆಯನ್ನು ಅವಲಂಬಿಸಿರುತ್ತದೆ. ಇವು ಜಾತಿ, ಮತ, ಧರ್ಮವನ್ನು ಮೀರಿದವುಗಳಾಗಿವೆ ಮೇಲು ಕೀಳು, ಒಳ್ಳೆಯದು, ಕೆಟ್ಟದು ಇತ್ಯಾದಿ.
- ಸಾರ್ವತ್ರಿಕ ಗುಣ ಹೊಂದಿರುತ್ತದೆ.
- ಸಮಾನತೆಯ ಸೌಹಾರ್ದತೆಯ ಗುಣಗಳು ಇರುವಂಥದಾಗಿದೆ.

ತತ್ವ ಎಂಬುಬು ಆಧ್ಯಾತ್ಮದ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವಂಥದ್ದು. ಪ್ರಪಂಚ ನಶ್ವರ, ನರಜನ್ಮ ಸ್ಥಿರವಲ್ಲ ಕಾಯವ ನಂಬಬೇಡ, ಇದು ಮೂರು ದಿನದ ಬದುಕು ಮೋಕ್ಷವೊಂದೇ

ಶಾಶ್ವತ, ಮೋಕ್ಷ ಸಾಧನೆಗಾಗಿ ಇಲ್ಲಿ ಏನಾದರೂ ಒಳ್ಳೆಯದನ್ನು ಮಾಡು ಎಂಬ ಹಿನ್ನೆಲೆಯಲ್ಲಿ ದೈವ ಚಿಂತನ ಮಾಡುವ ಒಂದು ಮನೋಧರ್ಮವನ್ನು ರೂಪಿಸುವುದು ತತ್ವದ ಕೆಲಸ. ಭೂಲೋಕದ ಆರ್ಥಿಕ ವ್ಯವಹಾರಗಳನ್ನು ಮೀರಿ ನೈತಿಕತೆಯನ್ನು ಪ್ರಚುರಪಡಿಸುತ್ತ ಜನರೊಳಗೆ ಒಂದು ಸಾಮರಸ್ಯ ಮೂಡಿಸುತ್ತ ಬದುಕನ್ನು ಹಸನು ಮಾಡುವ ಕಡೆಗೆ ಇದರ ಗಮನವಿರುತ್ತದೆ.

ಸಮಾಜದಲ್ಲಿ ಜನಸಾಮಾನ್ಯರಿಗೆ ಬುದ್ಧಿ ಮಾತನ್ನು ತತ್ವಪದಗಳು ಹೇಳುತ್ತದೆ. ತತ್ವಪದಕಾರರು ಹೋರಾಟ, ತತ್ವಪದಗಳ ಮೂಲಕ ಜನಸಾಮಾನ್ಯರನ್ನು ಸರಿದೂರಿಗೆ ತರಲು ಶ್ರಮಿಸುತ್ತಾರೆ.

ಎಲ್ಲವನ್ನು ಸೃಷ್ಟಿಸುವ ಪರಮಾತ್ಮ ಪ್ರಪಂಚದಲ್ಲಿ ಮನುಷ್ಯನಿಗೆ ವಿಶೇಷವಾದ ಸ್ಥಾನವನ್ನು ಕೊಟ್ಟಿದ್ದಾನೆ. ವಿದ್ಯೆ, ಬುದ್ಧಿ, ಜ್ಞಾನ, ಅರಿವು, ಸಂಸಾರ, ಸಂಬಂಧ ಹೀಗೆ ಇವೆಲ್ಲದರ ಅರಿವಿನಲ್ಲಿ ಕುಟುಂಬದೊಳಗೆ, ಸಮಾಜದೊಳಗೆ, ಬಾಳಿಬದುಕುತ್ತಿರುವ ಮನುಜ ಕೆಲವು ಮೂಢನಂಬಿಕೆಗಳಿಗೆ ಮಾರುಹೋಗುವುದು ವಿಪರ್ಯಾಸದ ಸಂಗತಿ ಎನಿಸುತ್ತದೆ.

ಎಲ್ಲಾ ತತ್ವಪದಕಾರರ ತತ್ವಪದಗಳಲ್ಲಿ ಸಮಾಜದ ಕಾಳಜಿ ಅಡಗಿರುತ್ತದೆ. ತತ್ವಪದಕಾರರು ಸಮಾಜದ ವಿಭಿನ್ನ ವರ್ಗದವರು ಮತ್ತು ವಿವಿಧ ವೃತ್ತಿಯವರು. ಸಮಾಜದಲ್ಲಿ ಜನಸಾಮಾನ್ಯರಿಗೆ ಮಾರಕವಾಗಿರುವ ಧರ್ಮ, ಜಾತಿ, ಮತಗಳೆಂಬ ಅಂತರವನ್ನು ದೂರವಾಗಿಸಿ ಆಧ್ಯಾತ್ಮಿಕತೆಯಿಂದ ಸಮಾನತೆ ಸಾಧಿಸಿದ ಶ್ರೀಸಾಮಾನ್ಯರು.

ವ್ಯಕ್ತಿಯು ಸಾಧನೆಯ ಮೂಲಕ, ತಮ್ಮ ನಡೆನುಡಿಯ ಮೂಲಕ ದೇವಮಾನವ ನಾಗಬಲ್ಲನೆಂಬುದನ್ನು ತತ್ವಪದಕಾರರು ತೋರಿಸಿಕೊಟ್ಟಿದ್ದಾರೆ. ಮಾನವ ಸಹಬಾಳ್ವೆಯ ಮುಖಾಂತರ ಸಾಮರಸ್ಯದಿಂದ ಬದುಕಿ ಬಾಳಬೇಕೆಂದು ಉಪದೇಶಿಸುತ್ತಾರೆ. ಮತ, ಧರ್ಮ ದೇವರುಗಳ ಹೆಸರಿನಲ್ಲಿ ನಡೆಯುತ್ತಿರುವ ಮೌಢ್ಯತೆಯನ್ನು ಖಂಡಿಸುತ್ತಿದ್ದಾರೆ.

ತತ್ವಪದಕಾರರ ರಚನೆಗಳಲ್ಲಿ ಭಕ್ತಿ, ಜ್ಞಾನ, ವೈರಾಗ್ಯ, ಜೀವನದ ಅಗತ್ಯತೆ, ಹಂಬಲ, ಆಧ್ಯಾತ್ಮ, ನೀತಿ, ಯೋಗ, ಸಾಮಾಜಿಕ ವಿಡಂಬನೆ ಹೀಗೆ ಬದುಕಿನ ವಿವಿಧ ಅನುಭವಗಳನ್ನು ಕಾಣಬಹುದು.

ಅಷ್ಟೇ ಮುಖ್ಯವಾಗಿ ಜೀವ ಪರಮಾತ್ಮರ ಹೊಂದಾಣಿಕೆ ಶಿವ ಜೀವರ ಐಕ್ಯತೆ, ಲಿಂಗಾಂಗ ಸಮರಸದ ಬದುಕಿನ ಎಲ್ಲ ಅನುಭವಗಳನ್ನು ಸಾಂಕೇತಿಕವಾಗಿ ಆಧ್ಯಾತ್ಮದ ನೆಲೆಗೆ ಏರಿಸಿದ ಸಾಧನೆ ತತ್ವಪದಕಾರರದು.

ಆರೂಢ, ಅವಧೂತ, ಶರಣ, ಸಂತ, ಸೂಫಿ ಮೊದಲಾದ ಅನುಭಾವಿಗಳ ಮಾರ್ಗದಲ್ಲಿ ನಡೆದು, ಜಾತಿ, ಮತ, ಧರ್ಮಗಳ ಎಲ್ಲೆಯನ್ನು ಮೀರಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಾಮರಸ್ಯದಿಂದ ನಡೆದು ನುಡಿದವರಲ್ಲಿ ತತ್ವಪದಕಾರರು ಮತ್ತು ಅವರ ಸಾಹಿತ್ಯಗಳು ಪ್ರಮುಖವಾದವುಗಳು. ತತ್ವಪದಗಳು ಜನಸಾಮಾನ್ಯರ ಬದುಕನ್ನು ಪ್ರವೇಶಿಸಿದವು. ಇಂದಿಗೂ

ಕೂಡ ಗ್ರಾಮೀಣ ಭಾಗದಲ್ಲಿ ತತ್ವಪದಗಳನ್ನು ಭಜನೆ ಪದಗಳಾಗಿ ಗಂಡು ಹೆಣ್ಣು ಎಂಬ ಭೇದವಿಲ್ಲದೆ ಒಂದಾಗಿ ಹಾಡುತ್ತಾರೆ.

ಯಾವುದೇ ಮಾರ್ಗವನ್ನು ನಾವು ನೋಡಿದರೆ ನಮಗಿಲ್ಲಿ ಸಿಗುವುದು ಒಂದೇ ತೆರನಾದ ಜ್ಞಾನ, ಭಕ್ತಿ, ಸಾಧನೆ. ಮುಕ್ತಿ ಮತ್ತು ಆರೂಢರು ಅವಧೂತರು, ಸಿದ್ಧರು, ಸಂತರು, ಶರಣರು ಇವರೆಲ್ಲ ಭಗವಂತನ ಅನುಭೂತಿಯನ್ನು ಅನುಭವಿಸಿ ತಮ್ಮ ಸಾಧನೆಯ ಸಿದ್ಧಿಯನ್ನು ಪಡೆದಂಥವರಾಗಿದ್ದಾರೆ. ಇದನ್ನೇ ಸೂಫಿಗಳು ಕೂಡ ಹೇಳುವುದು "ಒಂದು ಧರ್ಮದ ಸಾಧಕನು ಇನ್ನೊಂದು ಯಾವುದೇ ಧರ್ಮದ ಸಾಧಕನಿಗಿಂತ ಭಿನ್ನವಾಗಿರುವುದಿಲ್ಲ; ಯಾವ ಧರ್ಮಕ್ಕೆ ಸೇರಿದವರಾಗಿದ್ದರೂ ಸಾಧಕರೆಲ್ಲ ಒಂದೇ."[೯]

ಸೂಫಿಗಳ ಪ್ರಕಾರ ಪ್ರಪಂಚದಲ್ಲಿರುವ ಪ್ರತಿ ಸೃಷ್ಟಿಯೂ ಪರಮಾತ್ಮನ ಕೃಪೆಯಿಂದಾಗಿರುವುದು. ಈ ಪ್ರಪಂಚವೆಲ್ಲ ಪರಮಾತ್ಮನ ಮಾಯೆ. ಅವನಿಲ್ಲದಿದ್ದರೆ ಬೇರೇನು ಇಲ್ಲ. ಎಲ್ಲವೂ ಅವನಿಂದಲೇ ಸೃಷ್ಟಿಯಾಗಿವೆ. ಪ್ರಪಂಚದ ಪ್ರತಿಭಾಗ, ಪ್ರತಿಕಣದಲ್ಲೂ ಭಗವಂತ ಇದ್ದಾನೆ; ಅವನು ನಿರಾಕಾರನಾದ ಕಾರಣ ಕಣ್ಣಿಗೆ ಕಾಣಿಸನು ಎನ್ನುವುದು ಸೂಫಿಗಳ ಹೇಳಿಕೆಯಾಗಿದೆ.

ಸೂಫಿ ಸಿದ್ಧಾಂತದ ಪ್ರಕಾರ ನೋಡಿದರೆ ಅದನ್ನು ತಿಳಿಸುವ ವಿಚಾರ ಅಥವಾ ತತ್ವ "ಆಧ್ಯಾತ್ಮಿಕ ಕ್ಷೇತ್ರದಲ್ಲಿ ಕಂಡುಬರುವ ಬೇರೆ ಬೇರೆ ನಂಬಿಕೆಗಳು ಸಂಪ್ರದಾಯಗಳು, ದರ್ಶನಗಳು ಪ್ರಮುಖವಾಗಿ ಮೂರು ತತ್ವಗಳ ವಿವೇಚನೆಯನ್ನು ಆಧರಿಸಿ ರೂಪುಗೊಂಡಿವೆ. ಅವು ಬ್ರಹ್ಮ, ಜೀವ, ಜಗತ್ತು".[೧೦]

ಈ ಮೂರು ತತ್ವಗಳನ್ನು ನಮ್ಮ ದೃಷ್ಟಿಕೋನದಲ್ಲಿ ಗ್ರಹಿಸಬಹುದು.

**ಬ್ರಹ್ಮ:** ಭಗವಂತನ ಶಕ್ತಿಯು ಈ ಪ್ರಪಂಚದಲ್ಲಿದೆ. ಅವನು ಕಣ್ಣಿಗೆ ಕಾಣುವುದಿಲ್ಲವೆಂದರೂ ಅವನ ಭವ್ಯವಾದ ಶಕ್ತಿ ಈ ಜಗತ್ತಿನ ತುಂಬೆಲ್ಲ ವ್ಯಾಪಿಸಿದೆ. ಅವನು ಅಗೋಚರನಾಗಿದ್ದಾನೆ. ಆ ಕಾಣದ ಅಗೋಚರ ಶಕ್ತಿಯನ್ನು ನಾವು ನಮ್ಮ ಆಧ್ಯಾತ್ಮದ ಮೂಲಕ ನೇರವಾಗಿ ಪಡೆದುಕೊಳ್ಳುವುದೇ ಸಾಧನೆ.

**ಜೀವ:** ಜೀವ ಮತ್ತು ಬ್ರಹ್ಮ ಇವೆರಡರಲ್ಲಿ ಯಾವುದೇ ವ್ಯತ್ಯಾಸವಾಗಲಿ, ವಿಭಿನ್ನತೆಯಾಗಲಿ, ಭೇದವಾಗಲಿ ಕಾಣುವುದಿಲ್ಲ. ಯಾಕೆಂದರೆ ಪ್ರತಿ ಸಾಧಕನು ತನ್ನ ಕಠಿಣ ಶ್ರಮದಿಂದ ಭಗವಂತನ ದರ್ಶನದ ಅನುಭೂತಿಯನ್ನು ಪಡೆದ ಮೇಲೆ ಅವನಲ್ಲಿ ಸೇರಿಕೊಂಡ ಸಾಧಕನ ಆತ್ಮ ಪರಮಾತ್ಮನಲ್ಲಿ ಬೆರೆತಂತೆ ಎಂಬುದಾಗಿ ಭಾವಿಸುತ್ತಾನೆ. ಸಾಧಕ ತನ್ನ ದೇಹದ ಹಂಗನ್ನು ತೊರೆದು 'ಅಹಂಕಾರ'ವನ್ನು, 'ತಾನು', 'ತನ್ನದೆನ್ನುವುದನ್ನು' ಮರೆತು ಭಗವಂತನ ಕೃಪೆಗೆ ಅರ್ಹನಾದ ಮೇಲೆ ಆತ್ಮ ಪರಮಾತ್ಮನಲ್ಲಿ ಲೀನವಾಗುವ ಅಂಶವೇ ಹೆಚ್ಚಾಗಿರುತ್ತದೆ; ಬೇರೆ ಬೇರೆಯಾಗಿ ಇಲ್ಲಿ ಕಾಣಿಸುವುದಿಲ್ಲ.

**ಜಗತ್ತು:** ಸಾಧಕರ ದೃಷ್ಟಿಯಲ್ಲಿ ಜಗತ್ತು ಅಸತ್ಯ ಮಾಯೆಯಾಗಿ ಕಾಣಿಸುತ್ತದೆ. ತನ್ನ ಸಾಧನೆಯ ಸಿದ್ಧಿಯಿಂದ ಕಾಣುವ ಅಗೋಚರ ಶಕ್ತಿಯೊಂದೇ ಸತ್ಯ ಈ ಜಗತ್ತಿನಲ್ಲಿ; ಉಳಿದೆಲ್ಲ ಬಯಕೆಗಳು ಮಾಯೆ ಅಸತ್ಯ.

"ಸೂಫಿಗಳು, ನಾಲ್ಕು ಅಂತಸ್ತುಗಳನ್ನು ಗುರುತಿಸಿದ್ದಾರೆ; ಅವುಗಳೆಂದರೆ ಶರೀಯತ್, ತರೀಕತ್, ಮಾರೀಫತ್ ಮತ್ತು ಹಕೀಕತ್.

**ಶರೀಯತ್** ಅಂದರೆ ಇಸ್ಲಾಂ ಧರ್ಮಗ್ರಂಥಗಳಲ್ಲಿ ಉಲ್ಲೇಖಸಿರುವ ವಿಧಿ ನಿಷೇಧಗಳನ್ನು ಚಾಚು ತಪ್ಪದೇ ಪಾಲಿಸುವುದು ಪವಿತ್ರ ಗ್ರಂಥವಾದ ಕುರಾನ್ ಮತ್ತು ಕುರಾನಿನ ವ್ಯಾಖ್ಯಾನಗಳಾಗಿರುವ ಹದೀಸಗಳನ್ನು ಅಕ್ಷರಶಃ ನಂಬಿ ಅವುಗಳನ್ನು ಆಚರಣೆಗೆ ತರುವುದು. ಅವುಗಳ ಕುರಿತು ಪ್ರಶ್ನಿಸುವ ಹಾಗಿಲ್ಲ.

**ತರೀಕತ್:** ತರೀಕತ್‌ನ್ನು ಭಕ್ತಿಯ ಸೋಪಾನವೆನ್ನುತ್ತಾರೆ. ತರೀಕತ್‌ನಲ್ಲಿ ಸಾಧಕನು ಬಾಹ್ಯ ಕ್ರಿಯೆಗಳಿಂದ ಮುಕ್ತನಾಗಿ ಶುದ್ಧ ಮನಸ್ಸಿನಿಂದ ಕೇವಲ ಪರಮಾತ್ಮನ ಧ್ಯಾನದಲ್ಲಿಯೇ ಮಗ್ನನಾಗಿರುತ್ತಾನೆ.

**ಮಾರಿಫತ್:** ಮಾರಿಫತ್ತನ್ನು ಗುಪ್ತ ವಿದ್ಯಾಸ್ತರವೆಂತಲೂ ಕರೆಯುತ್ತಾರೆ. ಇದನ್ನು ವೇದಾಂತದ ಜ್ಞಾನ ಕುಂಡವೆನ್ನಬಹುದು.

**ಹಕೀಕತ್** : ಇದು ಐಕ್ಯಾವಸ್ಥೆಯ ಕೊನೆಯ ಹಂತವಾಗಿದೆ. ಪರಮಸತ್ಯದ ಸಾಕ್ಷಾತ್ಕಾರ. ಜೀವಾತ್ಮನು ಪರಮಾತ್ಮನಲ್ಲಿ ಬೆರೆತು ತನ್ನ ಜೀವಾತ್ಮ ಸ್ವರೂಪವನ್ನು ನಾಶಗೊಳಿಸಿಕೊಂಡು ಪರಮಾತ್ಮನ ಸ್ವರೂಪವನ್ನು ಉಳಿಸಿಕೊಳ್ಳುತ್ತಾನೆ."[೪೧]

ಈ ಹಂತಗಳನ್ನು ನೋಡಿದರೆ ಒಬ್ಬ ಸಾಧಕ ತಾನು ತನ್ನ ಪ್ರಿಯ ಪರಮಾತ್ಮನಲ್ಲಿ ಒಂದಾಗಲು ಇರುವ ಅಡೆತಡೆಗಳನ್ನು, ಕಠಿಣ ಕ್ರಮಗಳನ್ನೆಲ್ಲ ದಾಟಿ ಆ ಕಠಿಣತೆಯಲ್ಲೂ ಒಂದು ಅಪರೂಪದ ಅನುಭಾವವನ್ನು ಪಡೆಯುತ್ತಾನೆ. ತನ್ನ ದೇಹದ ಪ್ರತಿ ಅಂಗವನ್ನು ಸಾಧನೆಗೆ ಸಮರ್ಪಿಸುತ್ತಾನೆ. ಇದೆಲ್ಲ ಮೆಟ್ಟಿನಿಂತ ಮೇಲೆ ಸಾಧಕನಿಗೆ ರಹಸ್ಯವಾದ ನಿಗೂಢವಾದ ಜ್ಞಾನ ಪ್ರಾಪ್ತಿಯಾಗುತ್ತದೆ. ರಹಸ್ಯಜ್ಞಾನ ಪ್ರಾಪ್ತವಾದ ಮೇಲೆ ಸಾಧಕನ ಸಂತೋಷಕ್ಕೆ ಕೊನೆಯೇ ಇಲ್ಲದಂತಾಗುತ್ತದೆ. ಇಂತಹ ಜ್ಞಾನವನ್ನು ಪಡೆದ ಸಾಧಕ ಬರೀ ಸಾಧಕನಲ್ಲ ಸಾಧನೆಯ ಸಾಧಕ. ಪರಿಪೂರ್ಣ ಜ್ಞಾನಿ, ಭಗವಂತನಿಗೆ ಸಂಪೂರ್ಣವಾಗಿ ಪ್ರಿಯನಾದವನು. ಈ ಎಲ್ಲ ಹಂತಗಳನ್ನು ದಾಟಿ ಬಂದು ಪರಿಪೂರ್ಣ ಸಾಧಕನಾಗಿ ರಹಸ್ಯ ಜ್ಞಾನ ಪ್ರಾಪ್ತವಾದಾಗ ಸಾಧಕನ ದೇಹಭಾವವು ನಾಶವಾಗಿ ಅವನಲ್ಲಿ ದೈವತ್ವ ಅಥವಾ ಬ್ರಹ್ಮತ್ವವು ಮಾತ್ರ ಉಳಿದಿರುತ್ತದೆ.

"ಡಾ. ತಾರಾಚಂದರು ಸೂಫೀ ನಂಬಿಕೆಗಳಿಗೆ ಐದು ಆಕರಗಳನ್ನು ಗುರುತಿಸಿದ್ದಾರೆ. ಪವಿತ್ರವಾದ ಕುರಾನ್ ಶರೀಫ್; ಮೊಹಮ್ಮದರ ಜೀವ; ಕ್ರಿಶ್ಚಿಯನ್ ಮತ್ತು ಆಧುನಿಕ ಪ್ಲೆಟೋನಿಕ್

ಮತ; ಹಿಂದುತ್ವ ಮತ್ತು ಬೌದ್ಧ ಮತ ಮತ್ತು ಜರತ್ತಾಷ್ಟ್ರ ಮತ ಡಾ. ಬುಕೆಟ್ ಎನ್ನುವ ವಿದ್ವಾಂಸರು ಈ ಆಕರಗಳ ಆಧಾರ ಮೇಲೆ ಸೂಫಿಗಳ ಈ ಕೆಳಕಂಡ ನಂಬಿಕೆಗಳನ್ನು ಪಟ್ಟಿ ಮಾಡಿದ್ದಾರೆ.

೧. ಈ ಸೃಷ್ಟಿಯ ಸಕಲ ಚರಾಚರ ವಸ್ತುಗಳಲ್ಲಿ ಪರಮಾತ್ಮನ ಅಸ್ತಿತ್ವವಿದೆ ಮತ್ತು ಎಲ್ಲ ವಸ್ತುಗಳೂ ಪರಮಾತ್ಮನಲ್ಲಿಯೇ ಇವೆ.

೨. ವಿಶ್ವದ ಎಲ್ಲ ವಸ್ತುಗಳೂ ಪರಮಾತ್ಮನಿಂದ ಹೊರಡುತ್ತವೆ. ಆತನಲ್ಲದೆ ಯಾರೂ ಯಾವ ವಸ್ತುವನ್ನು ಸೃಷ್ಟಿಸಲಾರರು.

೩. ಎಲ್ಲ ಮತ ಧರ್ಮಗಳೂ ವ್ಯರ್ಥ. ಆದರೆ ಅವುಗಳಿಂದ ಒಂದೇ ಒಂದು ಪ್ರಯೋಜನವೆಂದರೆ ಎಲ್ಲ ಧರ್ಮಗಳೂ ಒಂದೇ ಸತ್ಯದ ಕಡೆಗೆ ತಮ್ಮ ಇಂಗಿತವನ್ನು ವ್ಯಕ್ತಪಡಿಸುತ್ತವೆ. ಇವುಗಳಲ್ಲಿ ಎಲ್ಲಕ್ಕಿಂತ ಉತ್ತಮ ಧರ್ಮವೆಂದರೆ ಇಸ್ಲಾಂ ಆಗಿದೆ. ಆದರಲ್ಲಿ ಸೂಫೀ ದರ್ಶನವು ಉನ್ನತ ದರ್ಶನವಾಗಿದೆ.

೪. ಪುಣ್ಯ ಮತ್ತು ಪಾಪಗಳಲ್ಲಿ ಯಾವುದೇ ಭೇದವೂ ಇಲ್ಲ. ಏಕೆಂದರೆ ಎರಡರ ಸೃಷ್ಟಿಯು ಭಗವಂತನಿಂದಲೇ ಆಗಿದೆ.

೫. ಮಾನವನ ಸಂಕಲ್ಪಗಳಿಗೆ ಪ್ರೇರಣೆಯನ್ನು ಕೊಡುವವನು ಅಲ್ಲಾಹನೇ ಆಗಿದ್ದಾನೆ. ಆತನಿಲ್ಲದೆ ಯಾವ ಸಂಕಲ್ಪವೂ ಆಗುವುದಿಲ್ಲ. ಮನುಷ್ಯನು ತನ್ನ ಕರ್ಮಗಳ ಅಧೀನನಲ್ಲ.

೬. ಆತ್ಮವು ಶರೀರವೆಂಬ ಪಂಜರದಲ್ಲಿ ಕೈದಿಯಾಗಿದೆ. ಪಂಜರಕ್ಕಿಂತ ಮೊದಲೇ ಪಕ್ಷಿಯ ಸೃಷ್ಟಿಯಾಗಿದೆ. ಆದ್ದರಿಂದ ಪಂಜರ ನಾಶವಾಗದ ಹೊರತು ಪಕ್ಷಿ (ಆತ್ಮ) ಸ್ವತಂತ್ರವಾಗುವುದಿಲ್ಲ. ಸಾವು ಅನಿವಾರ್ಯ ಮತ್ತು ಕಾಮ್ಯವಾಗಿದೆ. ಸಾವಿನ ನಂತರವೇ ಆತ್ಮವು ಪರಮಾತ್ಮನಲ್ಲಿ ವಿಲೀನವಾಗಲು ಸಾಧ್ಯ.

೭. ಸೂಫಿಗಳ ಮುಖ್ಯ ಕರ್ತವ್ಯವೆಂದರೆ ಧ್ಯಾನ ಮತ್ತು ಸಮಾಧಿ ಹಾಗೂ ಪ್ರಾರ್ಥನೆ ಮತ್ತು ನಾಮಸ್ಮರಣೆ."[೪೨]

ಸೂಫಿಗಳ ನಂಬಿಕೆಯ ಈ ಅಂಶಗಳನ್ನು ಗಮನಿಸಿದರೆ ಒಪ್ಪಲೇಬೇಕಾದ ಅಂಶಗಳೆಂದರೆ; ಜಗತ್ತು ನಿಸರ್ಗ, ಜೀವ ಜಲ, ಪ್ರಾಣಿ, ಪಕ್ಷಿ ಪ್ರತಿಯೊಂದು ಭೂಮಂಡಲ ಮತ್ತು ಅದರಲ್ಲಿರುವ ಪ್ರತಿಯೊಂದರ ಸೃಷ್ಟಿಗೆ ಪರಮಾತ್ಮನೇ ಕಾರಣ. ಆತನ ಕೃಪೆಯಿಲ್ಲದೆ ಯಾವುದೂ ಸಾಧ್ಯವಿಲ್ಲ. ಸೃಷ್ಟಿಯಲ್ಲಿರುವ ಎಲ್ಲ ವಸ್ತುಗಳು ಪರಮಾತ್ಮನಿಗೆ ಸಂಬಂಧಿಸಿದವುಗಳಾಗಿವೆ. ಧರ್ಮ, ಮತ, ಪುಣ್ಯ, ಪಾಪ, ನಿಜ ಇವುಗಳಲ್ಲಿ ಯಾವ ವ್ಯತ್ಯಾಸವಿಲ್ಲವೆನ್ನಬಹುದು. ಯಾಕೆಂದರೆ ಇವೆರಡರ ಹುಟ್ಟು ಭಗವಂತನಿಂದಾದುದು. ಶರೀರವನ್ನು ಪಂಜರಕ್ಕೆ ಹೋಲಿಸಿರುವುದು ಸತ್ಯಾಂಶವಾಗಿದೆ. ಆತ್ಮ ಶರೀರವೆಂಬ ಪಂಜರದಲ್ಲಿ ಸೆರೆಯಾಗಿರುತ್ತದೆ. ಈ ಪಂಜರವೆಂಬ ಶರೀರವು ಯಾವಾಗ

ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆಯೋ ಆಗ ಈ ಸೆರೆಯಾಗಿರುವ ಆತ್ಮವು ಪಂಜರದಿಂದ ಹೊರಬಂದು ಸ್ವತಂತ್ರವಾಗುತ್ತದೆ. ಪರಮಾತ್ಮನಲ್ಲಿ ಲೀನವಾಗುತ್ತದೆ.

ಸೂಫಿಗಳಿಗೆ ಯಾವ ಬಯಕೆಗಳು ಇರುವುದಿಲ್ಲ. ಅನುಭವಿಗಳಾದವರಿಗಿರುವ ಬಯಕೆಗಳೆಂದರೆ ಧ್ಯಾನ, ಯೋಗ, ಸಮಾಧಿ, ಪ್ರಾರ್ಥನೆ. ಇದರ ಹಂಬಲದಲ್ಲಿರುವ ಸೂಫಿಗಳು ಸದಾ ಭಗವಂತನ ನಾಮಸ್ಮರಣೆಯಲ್ಲಿಯೇ ತಮ್ಮನ್ನು ತೊಡಗಿಸಿಕೊಂಡಿರುತ್ತಾರೆ. ಇದನ್ನು ತೊರೆದು ಮತ್ತಾವುದರ ಚಿಂತನೆಗಳು ಅವರಲ್ಲಿರುವುದಿಲ್ಲ.

ಸೂಫಿಗಳು ಯಾವಾಗಲೂ ಉಣ್ಣೆಯ ನಿಲುವಂಗಿಯನ್ನು ಧರಿಸುತ್ತಿದ್ದರು. ಇದನ್ನು ಸೂಫಿಗಳಲ್ಲಿರುವ ಒಂದು ನಿಯಮವೆನ್ನಬೇಕೇ? ಅಥವಾ ಅವರವರ ಇಚ್ಛೆಯನ್ನಬೇಕೇ? ಇದಕ್ಕೆ ಅರ್ಥಪೂರ್ಣವಾದ ವಾಕ್ಯವೊಂದಿದೆ.

"ಯಾವಾಗಲೂ ಉಣ್ಣೆಯ ಉದ್ದವಾದ ನಿಲುವಂಗಿಯನ್ನೇ ತೊಡಬೇಕೆಂಬ ನಿಯಮವಿದೆ. ಇಂತಹ ತೊಡುಗೆಯಿಂದ ಮಹಮದ್ ಪೈಗಂಬರರು ಸಂತುಷ್ಟರಾಗುತ್ತಿದ್ದರು ಹಾಗೂ ಅವರೂ ತೊಡುತ್ತಿದ್ದರು. ಪೈಗಂಬರರು ಹೀಗೆ ಆಜ್ಞಾಪಿಸಿದ್ದಾರೆ. "ಅಲೈಕುಂ ಬಿಲಬಿಸ್ ಅಸ್ಸೌಫ ತಜಿದೂನ ಹಲಾವತುಲ್ ಈ ಮಾನಿ ಫೀ ಕುಲೂಬಕುಂ" ಅಂದರೆ–ನಿಮ್ಮ ಉಡುಗೆ ತೊಡುಗೆಗಳಲ್ಲಿ ಉಣ್ಣೆಯ ಬಟ್ಟೆಗಳನ್ನು ಧರಿಸಿರಿ. ಇದರಿಂದ ನಿಮ್ಮ ಅಲ್ಲಾಹ್‌ನಡೆಗೆ ವಿಶ್ವಾಸವು ದೃಢವಾಗುವುದಲ್ಲದೆ ಮನಸ್ಸಿಗೆ ಹಿತವೂ ಉಂಟಾಗುತ್ತದೆ".[೪೩]

ಶ್ರೀಮಂತರು ತಮ್ಮ ಶ್ರೀಮಂತಿಕೆಯನ್ನು ತೋರಿಸಿಕೊಳ್ಳಲು ಸಾವಿರಾರುಗಟ್ಟಲೆ ದುಡ್ಡನ್ನು ಸುರಿದು ಬಟ್ಟೆಯನ್ನು ಕೊಂಡುಕೊಳ್ಳುತ್ತಾರೆ. ಒಂದು ದಿನ ಬಿದ್ದುಹೋಗುವ ಈ ದೇಹವನ್ನು ಮುಚ್ಚಿಕೊಳ್ಳಲು ಹರಿದ ಬಟ್ಟೆಗೆ ತೇಪೆಯನ್ನು ಹಾಕಿ ಮುಚ್ಚಿಕೊಳ್ಳಬಹುದು ಎಂಬುದನ್ನು ಸೂಫಿಗಳು ತೋರಿಸಿಕೊಟ್ಟಿದ್ದಾರೆ. ತಾವು ತೇಪೆ ಹಾಕಿದ ಬಟ್ಟೆಯನ್ನು ಧರಿಸುವುದರ ಮೂಲಕ ಸೂಫಿಗಳು ತೋರಿಸಿಕೊಟ್ಟಿದ್ದಾರೆ.

"ಮಾನವನ ಹೃದಯವು ಸ್ವಾಭಾವಿಕವಾಗಿ ಪ್ರೇಮವನ್ನೇ ಬಯಸುತ್ತದೆ. ಭಗವಂತನೂ ಭಕ್ತನನ್ನು ಪ್ರೇಮಿಸಬೇಕೆಂಬುದೇ ಆತನ ಇಚ್ಛೆ. ಮಾನವನೊಂದಿಗೆ ಭಗವಂತನು ನಗಬೇಕು, ಅಳಬೇಕು, ಕುಣಿಯಬೇಕು, ಮಾತನಾಡಬೇಕೆಂಬ ಹಲವು ಆಸೆಗಳನ್ನು ಬಯಸುತ್ತಾನೆ ಎಂಬ ಭಾವನೆ ಸೂಫಿಗಳಲ್ಲಿದೆ".[೪೪]

ಪ್ರತಿಯೊಬ್ಬ ಮನುಷ್ಯನ ಮನಸ್ಸು ಮತ್ತು ಹೃದಯ ಪ್ರೇಮವನ್ನು ಬಯಸುವುದು ಸಹಜ. ಸಾಮಾನ್ಯವಾಗಿ ಸ್ವಲ್ಪ ಆಲೋಚನೆ ಮಾಡಿ ನೋಡಿದರೆ ಒಬ್ಬ ವ್ಯಕ್ತಿ ತಾನು ಮತ್ತೊಬ್ಬನೊಂದಿಗೆ ಮುಗುಳು ನಗೆ ನಕ್ಕರೆ ಅವನು ಹಾಗೆ ಮಾಡುವನು. ಹಿತಮಿತವಾಗಿ ಮಾತನಾಡಿದರೆ ಎದುರಿರುವ ವ್ಯಕ್ತಿ ತಾನು ಕೂಡ ಹಾಗೆ ಮಾತನಾಡುತ್ತಾನೆ. ಪಕ್ಕದ ಮನೆಯವರೊಂದಿಗೆ ಚೆನ್ನಾಗಿದ್ದರೆ ಅವರು ನಮ್ಮೊಂದಿಗೆ ಚೆನ್ನಾಗಿರುತ್ತಾರೆ. ಹಾಗೆಯೇ ಇಲ್ಲಿ ಸೂಫಿಗಳು ಹೇಳುವ

ಅವರ ಒಂದು ವಾಕ್ಯ ಏನೆಂದರೆ ಭಗವಂತ ನಮ್ಮನ್ನು ಪ್ರೀತಿಸಬೇಕು. ಭಗವಂತನು ಸೃಷ್ಟಿಯಲ್ಲಿರುವ ಪ್ರತಿಯೊಂದನ್ನು ಪ್ರೀತಿಸುತ್ತಾನೆ. ಅವನೆಂದಿಗೂ ಯಾರನ್ನು ದ್ವೇಷಿಸುವುದಿಲ್ಲ; ಭಗವಂತ ನಮ್ಮ ಜೊತೆ ನಗಬೇಕು, ಅಳಬೇಕು, ಕುಣಿಯಬೇಕು, ಮಾತನಾಡಬೇಕು ಎಂಬ ಬಯಕೆ ಅವನಲ್ಲಿದೆ ಎಂಬ ಭಾವನೆಯನ್ನು ಸೂಫಿಗಳು ವ್ಯಕ್ತಪಡಿಸಿರುವುದು ಅಷ್ಟೊಂದು ಸಮಂಜಸವಲ್ಲವೆನಿಸುತ್ತದೆ. ಯಾಕೆಂದರೆ ಭಗವಂತನ ದರ್ಶನದ ಅನುಭೂತಿಗಾಗಿ ಹಗಲಿರುಳು ಊಟ, ನೀರು, ಸಂಸಾರದಿಂದ ದೂರವಿದ್ದು ಧ್ಯಾನ, ಯೋಗ, ಆಧ್ಯಾತ್ಮ ಸಾಧನೆಯನ್ನು ಮಾಡಿದ ಅನೇಕ ಜನರನ್ನು ನೋಡಿದರೆ ವ್ಯರ್ಥವೆನಿಸುತ್ತದೆ. ಯಾಕೆಂದರೆ ಮಾನವನಿಗೂ ಭಗವಂತನಿಗೂ ಯಾವ ವ್ಯತ್ಯಾಸವಿರುವುದಿಲ್ಲ. ಭಗವಂತ ಭಗವಂತನಾಗಿದ್ದು, ಮನುಷ್ಯ ಮನುಷ್ಯನಾಗಿದ್ದರೇನೇ ಈ ಪ್ರಪಂಚಕ್ಕೆ ಇದರ ಸರ್ವಸೃಷ್ಟಿಗೆ ಕಾರಣ ಭಗವಂತ ಅವನೊಬ್ಬನಿದ್ದಾನೆಂಬ ಅರಿವು ಜನರಲ್ಲಿ ಸದಾ ಇರುತ್ತದೆ.

ಸೂಫಿಗಳ ಅನುಭಾವ ಪ್ರೇಮಮಯವಾಗಿದೆ. ಸೂಫಿಗಳು ಸದಾ ಪ್ರೀತಿಯಲ್ಲಿಯೇ ಇರುವುದಲ್ಲದೆ ಅವರ ದೇಹದ ತುಂಬೆಲ್ಲ ಬರೀ ಪ್ರೀತಿಯನ್ನೇ ತುಂಬಿಕೊಂಡಿರುತ್ತಾರೆ. ಸೂಫಿಗಳಲ್ಲಿ ಭಯ ಎಂಬ ಪದಕ್ಕೆ ಜಾಗವಿರಲಿಲ್ಲ. ಪ್ರೀತಿಗೆ ಇಡೀ ದೇಹವೇ ಭಾವವನ್ನು ಕೊಡುತ್ತಿತ್ತು. ಈ ಸೂಫಿಗಳ ಪ್ರೇಮದ ಬಗ್ಗೆ ಅರಿಯಲು ಇಲ್ಲಿ ಒಂದು ಉದಾಹರಣೆ ನೋಡಬಹುದು.

ಸೂಫಿ ಸಂತ ರಬಿಯಾಳಿಗೆ ಯಾರೋ ಪ್ರಶ್ನೆ ಮಾಡಿದರಂತೆ;

"ನೀನು ದೇವರನ್ನು ಪ್ರೀತಿಸುವೆಯಾ?
ಹೌದು ಪ್ರೀತಿಸುತ್ತೇನೆ.
ಹಾಗಾದರೆ ಸೈತಾನನನ್ನು ದ್ವೇಷಿಸುವೆಯಾ?
ನನ್ನ ಹೃದಯದಲ್ಲಿ ದೈವೀ ಪ್ರೇಮ ಎಷ್ಟೊಂದು ತುಂಬಿದೆ
ಎಂದರೆ ಸೈತಾನನನ್ನು ದ್ವೇಷಿಸಲು ಅಲ್ಲಿ ಎಡೆಯೇ ಇಲ್ಲ"[೪೫]

ಸೂಫಿಗಳು ಪ್ರೇಮಮಯಿಗಳು; ಅವರು ಯಾವಾಗಲು ಪರಮಾತ್ಮನ ಪ್ರೇಮದಲ್ಲಿಯೇ ತೇಲಾಡುವವರು. ಸೂಫಿಗಳಲ್ಲಿ ಪರಮಾತ್ಮನ ಪ್ರೀತಿ ಬಿಟ್ಟರೆ ಬೇರೊಂದು ಇರಲಿಲ್ಲ. ಹಾಗಾಗಿ ಅವರು ಯಾವಾಗ ಬೋಧಿಸುತ್ತಿದ್ದರೂ ಪ್ರತಿಯೊಬ್ಬರು ನಿಮ್ಮನ್ನು ನೀವರಿಯಬೇಕು. ಇನ್ನೊಬ್ಬನನ್ನು ನೋಡಿ ಮರುಮಾತನಾಡದೆ ನಿಮ್ಮನ್ನು ನೀವರಿತನಂತರ ಮುಂದಿನ ಕೆಲಸ ಮಾಡಲು ಸರಳವಾಗುತ್ತದೆ. ಪರಮಾತ್ಮನ ಕೃಪೆಗೆ ಒಳಗಾಗಬೇಕಾದರೆ ನಿಮ್ಮನ್ನು ನೀವರಿಯಬೇಕು. ನಿಮ್ಮಲ್ಲಿರುವ ಕೆಲ ನಡತೆಗಳೊಂದಿಗೆ ಅಹಂಕಾರವನ್ನು, ನಾನು ನನ್ನದೆನ್ನುವ ದುರಹಂಕಾರವನ್ನು ತ್ಯಜಿಸಬೇಕು. ಆಗ ನೀನು ಪರಿಪೂರ್ಣ ಮನುಜನಾಗುವೆ. ಪರಮಾತ್ಮನ ಪ್ರೀತಿಗೆ ಒಳಗಾಗುವೆ. ನನ್ನನ್ನು ನಾನು ಹೇಗೆ ಅರಿಯುವುದು? ನನ್ನ ಅಹಂಕಾರ ದೂರವಾಗಿಸಲೇನು ಮಾಡುವುದು? ಎಂಬ ಪ್ರಶ್ನೆಗಳು ಮನದಲ್ಲಿ ಮೂಡುವುದು ಸಹಜ; ಇದಕ್ಕೆ ಸರಿಯಾದ ಉತ್ತರವೊಂದಿದೆ. ಅದನ್ನು ನೋಡಬಹುದು.

"ಪ್ರಿಯತಮೆಯ ಮನೆಯ ಕದವನ್ನು ಯಾರೋ ತಟ್ಟಿದರು. ಧ್ವನಿ ಬಂತು" ಯಾರು?

"ನಾನು" ಉತ್ತರ ಬಂತು

ಒಳಗಿನಿಂದ ಧ್ವನಿ ಬಂದಿತು ಈ ಮನೆಯಲ್ಲಿ ನಾನು ಮತ್ತು ನೀನು ಇಬ್ಬರೂ ಒಟ್ಟಿಗೆ ಇರುವುದು ಸಾಧ್ಯವಿಲ್ಲ.

ಬಾಗಿಲು ತೆರೆಯಲೇ ಇಲ್ಲ. ಪ್ರೇಮಿ ನಿರಾಶನಾಗಿ ಹೊರಟು ಹೋದ. ವರ್ಷವಿಡೀ ಅವನು ಕಾಡುಮೇಡುಗಳಲ್ಲಿ ಅಲೆದ; ತಪಸ್ಸು ಮಾಡಿದ. ನೇಮ, ವ್ರತ ಎಲ್ಲ ಮಾಡಿದ ಕೊನೆಗೆ ವರ್ಷ ಕಳೆದ ಬಳಿಕ ಆ ಪ್ರೇಮಿ ಪುನಃ ಬಂದ ಪ್ರಿಯತಮೆಯ ಮನೆ ಬಾಗಿಲನ್ನು ತಟ್ಟಿದ.

"ಯಾರು"? ಒಳಗಿನಿಂದ ಧ್ವನಿಬಂತು

"ನೀನು" ಪ್ರೇಮಿ ಉತ್ತರ ಕೊಟ್ಟ

ಬಾಗಿಲು ತೆರೆಯಿತು. ಪ್ರಿಯ ಪ್ರೇಯಸಿಯರು ಕೂಡಿದರು, ಕೂಡಿ ಒಂದಾದರು."೪೬

ಇದನ್ನೇ ಸೂಫಿಗಳು ಸಾರಿ ಸಾರಿ ಹೇಳುವುದು. ಮೊದಲು ನೀನು ನೀನಾಗು, ನಂತರ ಪರಮಾತ್ಮನನ್ನು ಕಾಣಲು ಅನುಗ್ರಹಕ್ಕೆ ಒಳಗಾಗಲು ಪ್ರಯತ್ನಿಸು. ನಾನು ಎಂಬ ಅಂಶದಿಂದ ಮನುಜನಾದವನು ಮರೆಯುವವರೆಗೆ ವ್ಯಕ್ತಿ ಜೀವನದಲ್ಲಿ ಸಾಧನೆ ಮಾಡಲು ಸಾಧ್ಯವಿಲ್ಲ ಪರಮಾತ್ಮನ ಅನುಗ್ರಹಕ್ಕೆ 'ನಾನು' ಎಂಬ ಪದ ತೊರೆದು ಬಾ.

ಪ್ರೀತಿಯ ಆರಾಧನೆಯಂದರೇನೆಂಬುದನ್ನು ಸೂಫಿ ಧರ್ಮದಿಂದ ಕಲಿಯಬಹುದಾಗಿದೆ. ಜನಸಾಮಾನ್ಯರು ಪರಮಾತ್ಮನನ್ನು ಕಂಡರೆ 'ಭಯಭಕ್ತಿ'ಯಿಂದ ಪೂಜಿಸುತ್ತಾರೆ. ಅಂದರೆ ಇದರರ್ಥ ಜನಸಾಮಾನ್ಯನ ಭಕ್ತಿಯಲ್ಲೂ ಭಯವಿದೆ ಎಂಬುದು ತಿಳಿಯುತ್ತದೆ. ಇದನ್ನೇ ಸೂಫಿಗಳು ಹೇಳುವುದು; ಮನುಜನಿಗೆ ಭಗವಂತನನ್ನು ಪೂಜಿಸಲು ಭಯ ಬೇಡ. ಭಯದಿಂದ ಮಾಡುವ ಪೂಜೆಯಲ್ಲಿ ಭಕ್ತಿಯಿರುವುದಿಲ್ಲ. ಭಯದ ಒತ್ತಡಕ್ಕೆ ಮಣಿದು ಪೂಜಿಸುವಂಥದ್ದು. ಭಗವಂತನನ್ನು ಪ್ರೀತಿಸಿದರೆ ಸಾಕು ಅದರಲ್ಲಿಯೇ ಅವನಿಗೆ ಪೂಜಿಸಿದಂತಾಗುತದೆ. ಪರಮಾತ್ಮನ ಪ್ರೀತಿ ಅನುಗ್ರಹಕ್ಕೆ ಒಳಗಾಲು ಪ್ರೀತಿಯಿಂದ ಭಜಿಸಿ; ಭಯದಿಂದಲ್ಲ. ಪ್ರೀತಿ ಮಾಡಿದಾಗ ಪರಮಾತ್ಮನು ನಮ್ಮನ್ನು ಪ್ರೀತಿಯಿಂದ ಕಾಣುತ್ತಾನೆ; ಆಶೀರ್ವದಿಸುತ್ತಾನೆ. ನಾವು ಅವನನ್ನು ಪ್ರೀತಿಸಿ ಅವನಲ್ಲಿ ಒಂದಾಗಿದ್ದೇವೆ. ಪ್ರೀತಿಗೆ ಇರುವ ಫಲ ಭಯಕ್ಕೆ ಇಲ್ಲ ಎನ್ನುವುದು ಸೂಫಿಗಳ ಧ್ಯೇಯವಾಗಿದೆ. ನಾವು ಪ್ರೀತಿಸಿದರೆ ಅವನಲ್ಲಿ ಒಂದಾಗುತ್ತೇವೆ ನಮ್ಮಿಬ್ಬರಲ್ಲಿ ಯಾವ ಭೇದಭಾವವಿರಕೂಡದು ಎಂದು ಹೇಳುತ್ತಾರೆ. ಸೂಫಿಗಳು ಹೇಳುವ ಪರಿ ಹೀಗಿದೆ.

"ಶಿವ ಜೀವರ ಬಗ್ಗೆ ಸೂಫಿ ಧರ್ಮದಲ್ಲಿ ಆತ್ಮ ಪರಮಾತ್ಮರಲ್ಲಿ ಭೇದವಿಲ್ಲ. ಭೇದ ಕೇವಲ ವ್ಯವಹಾರಿಕವಾಗಿದ್ದು ವಾಸ್ತವವಲ್ಲ ಮಾನವ ಈಶ್ವರನ ಪ್ರತಿರೂಪ, ಜಗತ್ತು ದೇವನ ಅಂಶದ ಬೆಳಕು ಎಂದು ಅಭಿಪ್ರಾಯ ವ್ಯಕ್ತವಾಗಿದೆ."೪೭

ಪರಮಾತ್ಮ ಸೃಷ್ಟಿಸಿದ ಈ ಜೀವವನ್ನು ಪರಮಾತ್ಮನಲ್ಲಿ ಬೆರೆಸುವುದಕ್ಕೆ ಭೇದವೇಕೆ? ಪರಮಾತ್ಮನ ಸ್ವತ್ತುಗಳು ನಾವೆಲ್ಲ; ನಮ್ಮರ ಮಧ್ಯ ಅಂತರವೇಕೆ? ಇಬ್ಬರ ಮಧ್ಯ ಅಂತರವಿದೆಯೆಂದರೆ ಅದು ಅವರಿಬ್ಬರೂ ಬೇರೆ ಬೇರೆಯಾಗಿದ್ದು ಅವರಲ್ಲಿ ಯಾವ ಸಂಬಂಧವಿಲ್ಲವೆಂಬುದನ್ನು ತೋರಿಸುತ್ತದೆ. ಆಗ ಅಲ್ಲಿ ವ್ಯವಹಾರಿಕ ವಾತಾವರಣ ಸೃಷ್ಟಿಯಾಗುತ್ತದೆ. ಆದರೆ ನಾವುಗಳು ಪರಮಾತ್ಮ ಸೃಷ್ಟಿಸಿದ ಜೀವಿಗಳು; ಜೀವ ಮತ್ತು ಆತ್ಮದ ಮಧ್ಯ ಮಾತೇ ಇಲ್ಲ ಎಂಬುದು ಸೂಫಿಗಳ ಅಭಿಪ್ರಾಯವಾಗಿದೆ.

ಸೂಫಿಗಳು ಹೇಳುವ ಮಾತಿನಲ್ಲಿ ಪರಮಾತ್ಮನ ಬಗೆಗಿನ ಒಲವು ಕಣ್ಮುಂದೆ ಕಾಣಸಿಗುತ್ತದೆ. ಸೂಫಿಗಳಲ್ಲಿರುವ ಒಂದು ಧ್ಯೇಯ ಎಂದರೆ ವ್ಯಕ್ತಿ ತಾನು ತನ್ನನ್ನು ಮೊದಲು ಅರಿತರೆ ನಂತರ ದೇವರನ್ನು ಕಾಣುವ ಮಾರ್ಗವನ್ನು ಅರಿಯಲು ಸಾಧ್ಯ. ತನ್ನನ್ನು ತಾನು ಅರಿಯದವ ಮತ್ತೊಬ್ಬರನ್ನರಿಯಲು ಹೇಗೆ ಸಾಧ್ಯ.

ಸೂಫಿ ಎಲ್ಲಿರುತ್ತಾರೋ ಅಲ್ಲಿ ಪ್ರೀತಿ ಇರುತ್ತದೆ. ಪ್ರೀತಿಯೆಂಬುದು ಸೂಫಿಗಳ ಮೂಲ ಧ್ಯೇಯ. ಸಮಾಜದಲ್ಲಿನ ಪ್ರೀತಿಯನ್ನರಿಯಲು ಇತರರನ್ನು ಪ್ರೀತಿಸಲು ವ್ಯಕ್ತಿ ಮೊದಲು ತನ್ನನ್ನು ತಾನು ಪ್ರೀತಿಸಬೇಕು. ಆಗ ತನುಮನದಲ್ಲಿ ಪ್ರೀತಿಯೆಂಬ ವಸ್ತು ಬೆಳೆಯುತ್ತದೆ. ಆಗ ತನ್ನೆದುರಿಗಿರುವ ವ್ಯಕ್ತಿಯನ್ನು ಪ್ರೀತಿಸಲು ಸಾಧ್ಯ. ಪ್ರೀತಿ ಪ್ರೀತಿಯಿಂದ ಸ್ನೇಹ ಸಂಬಂಧಗಳು ಬೆಳೆಯುತ್ತವೆ. ಪ್ರೀತಿಯ ಸಂಬಂಧಗಳನ್ನು ತುಂಬಿಕೊಂಡ ವ್ಯಕ್ತಿಯ ಮನಸ್ಸಿನಲ್ಲಿ ದ್ವೇಷ ಅಸೂಯೆ, ಕೋಪ, ಭಯ ಇವೆಲ್ಲವೂ ನಾಶವಾಗುತ್ತವೆ. ಆಗ ವ್ಯಕ್ತಿ ಆ ಪ್ರೀತಿ ತುಂಬಿದ ಹೃದಯ ಮನಸ್ಸಿನಿಂದ ಪರಮಾತ್ಮನನ್ನು ಪ್ರಾರ್ಥಿಸಿದರೆ, ಪೂಜಿಸಿ ಭಜಿಸಿದರೆ, ಅವನ ಆಶೀರ್ವಾದದಿಂದ ಅವನ ಸಾಮೀಪ್ಯ ಪಡೆಯಲು ಅನುಕೂಲವಾಗುತ್ತದೆ. ಆ ಮೂಲಕ ಅನುಭಾವ ಮಾರ್ಗದಲ್ಲಿ ನಡೆಯಲು ಅನುಭಾವವನ್ನು ಪಡೆಯಲು ಸಾಧ್ಯವಾಗುತ್ತದೆ.

ಪ್ರಪಂಚದಲ್ಲಿ ಬಾಳಿ ಬದುಕುವ ಮನುಜನಿಗೆ ಒಂದಲ್ಲಾ ಒಂದು ದಿನ ಬದುಕು ಸಾಕೆನಿಸುತ್ತದೆ. ಅದು ಅವನಿಗಿರುವ ಬದುಕಿನ ಸಮಸ್ಯೆಗಳಿಂದ. ಆಗ ವ್ಯಕ್ತಿ ಈ ಜಗತ್ತಿನಿಂದ ಮುಕ್ತಿ ಬೇಕೆಂದು ಬಯಸುತ್ತಾನೆ. ಪರಮಾತ್ಮನ ಸೃಷ್ಟಿಯಾದ ಈ ಜಗತ್ತಿನಲ್ಲಿ ಪ್ರಾಣಿ, ಪಕ್ಷಿ, ಜಲಚರ, ನಿಸರ್ಗ ಇತ್ಯಾದಿಗಳಿಂದ ತೊಂದರೆಯುಂಟಾದಾಗ ಮನುಷ್ಯ ಮುಕ್ತಿಗಾಗಿ ಹಾತೊರೆಯುತ್ತಾನೆ. ಜಗತ್ತು ಮನುಷ್ಯನಿಗೆ ಆಸರೆಯನ್ನು ಕೊಡುತ್ತದೆ. ಮನುಷ್ಯ ಮನುಷ್ಯನ ಮಧ್ಯೆ ದ್ವೇಷ, ಆಸೆ, ಬಯಕೆಗಳನ್ನು ಹುಟ್ಟುಹಾಕುತ್ತಾನೆ. ಈ ಸಂಬಂಧದ ಜೊತೆ ಮುನ್ನಡೆಯಲು ಆಗದಿದ್ದಾಗ ಮನುಷ್ಯರೊಂದಿಗಿನ ಸಂಬಂಧದೊಂದಿಗೆ ಮುಕ್ತಿಯನ್ನು ಬಯಸಬೇಕೇ ಹೊರತು ಜಗತ್ತಿನಿಂದಲ್ಲ. ಆತ್ಮದ ದೃಷ್ಟಿಯಲ್ಲಿ ಸಂಬಂಧಗಳು ಶಾಶ್ವತ; ದೇಹದ ದೃಷ್ಟಿಯಲ್ಲಿ ಸಂಬಂಧಗಳು ಅಶಾಶ್ವತ. "ಜೀವಿಗೂ ಜಗತ್ತಿಗೂ ತಾತ್ವಿಕ ಸಂಬಂಧವಿಲ್ಲ ಭ್ರಮೆಯೇ ಬಂಧನ, ಭ್ರಮೆ ಬಯಲಾದಾಗ ಜೀವಾತ್ಮ ಮೃತ್ಯುವಿನಿಂದ ಪಾರಾಗಿ ಮುಕ್ತಿ ಪಡೆಯುತ್ತದೆ."[೮೮]

ಸೂಫಿಗಳ ಪ್ರೇಮಕ್ಕೆ ಒಂದು ಸೌಂದರ್ಯವಿದೆ; ಆ ಸೌಂದರ್ಯ ಮೂರ್ತಿಯೇ ಹೆಣ್ಣು. ಆ ಹೆಣ್ಣನ್ನೇ ಸೂಫಿಗಳು ದೇವರೆಂದು ಭಾವಿಸಿದರು. ಸೂಫಿಗಳು ಪರಮಾತ್ಮನನ್ನು ಸ್ತ್ರೀ ರೂಪದಲ್ಲಿ ಪೂಜಿಸುತ್ತಾರೆ. ಶರಣರು ಪರಮಾತ್ಮನನ್ನು ಪತಿ ಎಂದರೆ ಸೂಫಿಗಳು ಪರಮಾತ್ಮನನ್ನು ಸತಿ ಎಂದು ಪೂಜಿಸುತ್ತಾರೆ. ಹೆಣ್ಣಿನ ಸೌಂದರ್ಯಕ್ಕೆ ಮರುಳಾದ ಇವರನ್ನು ಪ್ರೇಮ ಪೂಜಾರಿಗಳೆಂದರೂ ತಪ್ಪಿಲ್ಲ. ತಾವು ಪ್ರೀತಿಸಿ, ಪೂಜಿಸುವ ಹೆಣ್ಣಿನಲ್ಲಿ ಸದಾ ಲೀನವಾಗಿರುತ್ತಾರೆ. ಆ ಹೆಣ್ಣಿನಿಂದಾಗಿ ಇವರಲ್ಲಿ ಪ್ರೀತಿ ಬಂದಿತೋ, ಇವರಲ್ಲಿನ ಪ್ರೀತಿಗೆ ಆ ಹೆಣ್ಣೂ ಒಲಿಯಿತೋ ಎನ್ನುವಷ್ಟರಮಟ್ಟಿಗೆ ಇವರು ಹೆಣ್ಣನ್ನು ಪ್ರೀತಿಯಿಂದ ಆರಾಧಿಸುತ್ತಾರೆ. ಶರಣಸತಿ ಲಿಂಗ ಪತಿಯಾದ, ಸೂಫಿಗಳು ತಾವು ಪತಿಯಾಗಿ ಪರಮಾತ್ಮನನ್ನು ಸತಿಯಾಗಿಸಿದ್ದಾರೆ.

ಸೂಫಿಗಳು ಬೇಡಿ ತಿನ್ನುವುದನ್ನು ಒಪ್ಪುವುದಿಲ್ಲ. ಬೇಡುವುದಾದರೆ ಭಗವಂತನಲ್ಲಿಯೇ ಬೇಡಬೇಕು, ಇತರರನ್ನಲ್ಲ. ಕಾರಣ ಅವನೊಬ್ಬ ನಮ್ಮಂತೆಯೇ ಮನುಷ್ಯ. ಮನುಜನಾದವನು ಮನುಜನಲ್ಲ ಬೇಡಿ ತಿನ್ನುವುದು ಮನುಷ್ಯಕುಲಕ್ಕೆ ಅವಮಾನ ನಾಚಿಕೆಗೇಡಿನ ವಿಷಯವೆನ್ನುವುದು ಸೂಫಿಯ ವಾದವಾಗಿದೆ. ಭಗವಂತನು ಭೂಮಿಯ ಮೇಲೆ ಸೃಷ್ಟಿಸಿದ ಮೇಲೆ ಪ್ರತಿಯೊಂದು ಜೀವಿಗೆ ಏನನ್ನು ಯಾವ ಸಮಯಕ್ಕೆ ಹೇಗೆ ಕೊಡಬೇಕೆನ್ನುವುದು ಅವನಿಗೆ ಗೊತ್ತಿರುವ ವಿಷಯ ಅವನೇ ಕಾಪಾಡುತ್ತಾನೆಂದು ನಂಬಿದವರು.

ಅನುಭಾವಿಗಳಿಗೆ ಅತಿ ಆಸೆ, ಬಯಕೆಗಳಿರುವುದಿಲ್ಲ. ಅವರು ತಮ್ಮ ಅವಶ್ಯಕತೆಗೆ ಬೇಕಾದದನ್ನು ಮಾತ್ರ ತೆಗೆದುಕೊಳ್ಳುತ್ತಿದ್ದರು. ಅವರಿಗಿರುವುದು ಅಂತಾರಾತ್ಮದ ಅನುಭೂತಿಯ ಆಸೆ, ದೇಹಕ್ಕೆ ಬೇಕಾದ ಯಾವ ವೈಭೋಗವೂ ಇವರಿಗೆ ಬೇಡ. ಆತ್ಮ ಪರಮಾತ್ಮನನ್ನು ಕಾಣುವ ವಿರಹ; ಸಾಮೀಪ್ಯದ ಬಯಕೆ.

ಸೂಫಿ ಎನ್ನುವ ಪದ ಈ ಸಂತರಿಗೆ ಹೇಗೆ ಬಂತು ಎಂಬ ಪ್ರಶ್ನೆ ಮೂಡುವುದು ಸಹಜ. ಸೂಫಿ ಶಬ್ದವು ಹಲವಾರು ಕೃತಿಗಳಲ್ಲಿ ಹೇಳಲ್ಪಟ್ಟಿದೆ. ಫಕೀರ ಎಂಬ ಪದ ತೀರ ಹಳೆಯ ಪದವಾಗಿದೆ. ಸೂಫಿ ಪದಕ್ಕೆ ಇಲ್ಲಿ ಸರಿಯಾದ ಸಂದರ್ಭವಿದೆ.

"ಅರಬ್ಬೀ ಭಾಷೆಯ ಲೇಖಕರಲ್ಲಿ ಈ ಪ್ರಸಿದ್ಧವಾದ ಬಸ್ರಾ (ಇರಾಕ್) ನಗರದ ಜಾಹಿಜ್ (೮೬೯) ಎಂಬುವವನು ಪ್ರಪ್ರಥಮವಾಗಿ ಸೂಫಿ ಶಬ್ದ ಬಳಕೆಯನ್ನು ಮಾಡಿದ್ದನೆಂದೂ ಹೇಳುತ್ತಾರೆ. ಸೂಫೀ ನಂತರ ಸನ್ಯಾಸ ಜೀವನ ಮತ್ತು ರಹಸ್ಯ ಜ್ಞಾನದ ಪ್ರವೃತ್ತಿಯ ಸಮನ್ವಯವನ್ನು ಅರಬ್ ಇತಿಹಾಸದ ಪ್ರಸಿದ್ಧ ವಂಶ, ಉಮ್ಮೆಯಖಾನ್‌ದಾನ್‌ನ ಖಲೀಫರುಗಳ ಅಂತಿಮ ಶಾಸನ ಕಾಲದಲ್ಲಿ ಸೂಫಿ ಶಬ್ದ ಅತ್ಯಧಿಕ ಬಳಕೆ ಕಾಣಸಿಗುತ್ತದೆ. ಪ್ರಾರಂಭದಲ್ಲಿ ಪ್ರತಿಯೊಬ್ಬ ಸಾಧಕನ ಹೆಸರಿನ ಅಂತ್ಯದಲ್ಲಿ ಸೂಫೀ ಶಬ್ದವನ್ನು ಸೇರಿಸಿಕೊಳ್ಳುತ್ತಿದ್ದರು. ಕೊನೆಗೆ ಈ ಶಬ್ದವು ಇಡೀ ಸನ್ಯಾಸಿಗಳ ಗುಂಪಿಗೆ ಅನ್ವಯವಾಯಿತು".[೪೮]

ಸೂಫಿ ಸದಾ ಪ್ರೇಮಮಯಿ; ಪ್ರೀತಿ ಎನ್ನುವ ಪದಕ್ಕೆ ಸಂಕೇತವೆಂದು ಕೂಡ ಹೇಳಬಹುದು. ಸೂಫಿ ಎಂದರೆ ಪರಮಾತ್ಮನಿಗೆ ಪ್ರಿಯನಾದ ವ್ಯಕ್ತಿ. ಜಗತ್ತಿನ ಸರ್ವವೂ ಪರಮಾತ್ಮನಿಂದಲೇ ಸೃಷ್ಟಿಯಾಗಿರುವುದೆಂದು ನಂಬಿರುವ ವ್ಯಕ್ತಿ ಮನಸ್ಸಿನಲ್ಲಿ ಸದಾ ಪ್ರೀತಿಯನ್ನು ತುಂಬಿಕೊಂಡು ಪ್ರೀತಿಯಿಂದಲೇ ಆರಾಧಿಸುವವ. ಸದಾ ಭಗವಂತನ ಧ್ಯಾನದಲ್ಲಿ ತಲ್ಲೀನನಾಗಿರುವವನೇ ಸೂಫಿ.

ಸೂಫಿಗಳು ಭಕ್ತಿಗೆ ಪ್ರಾಧಾನ್ಯತೆಯನ್ನು ನೀಡಿದರು. ಈ ಪ್ರಪಂಚದ ಸೃಷ್ಟಿಯೇ ಅವನಿರುವಾಗ ಪ್ರತಿ ಕ್ರಿಯೆಯಲ್ಲೂ ಅವನಿದ್ದಾನೆ ಎಂದು ಹೇಳಿದರು. ವಿರಹವೆಂಬುದು ಸೂಫಿಗಳಲ್ಲಿರುವ ಭಗವಂತನ ಕಾಣುವ ತವಕ. ಮನುಷ್ಯ ಸ್ವರೂಪ ಅವನಲ್ಲಿರುವ ಲಕ್ಷಣ. ಅವನ ಪ್ರತಿ ಕ್ರಿಯೆಯು ದೇವರೇ ಆಗಿದ್ದಾನೆ. ಆಧ್ಯಾತ್ಮಿಕತೆಯ ಪ್ರೇಮವನ್ನು ಸೂಫಿಗಳು ಎಲ್ಲದಕ್ಕಿಂತ ಮಿಗಿಲಾದ ಪ್ರೇಮವೆಂದು ಭಾವಿಸುತ್ತಾರೆ. ಶುದ್ಧ ಮನಸ್ಸಿನಿಂದ ಯಾರು ಪರಮಾತ್ಮನನ್ನು ಪೂಜಿಸುವರೋ ಅವರು ನಿಜರೂಪದಲ್ಲಿ ದೈವತ್ವವನ್ನು ಪಡೆದವರಾಗಿರುತ್ತಾರೆ. ಸ್ವಚ್ಛ ಮನಸ್ಸಿನ ಭಕ್ತನೇ ಸೂಫಿ, ಪರಿಶುದ್ಧವಾದ ಮನಸ್ಸಿನಿಂದ ಭಗವಂತನನ್ನು ದಿನನಿತ್ಯ ಪೂಜಿಸಿ ಬಯಸುವವನೇ ಅನುಭಾವಿ.

ಸೂಫಿಗಳು ಸಂಗೀತ ಪ್ರಿಯರು. ಹಾಗಾಗಿ ಇವರು ಸಂಗೀತ ನೃತ್ಯಗಳನ್ನು ಗೌರವಿಸಿದರು. ಸಾಮಾನ್ಯವಾಗಿ ಇತರ ದಾರ್ಶನಿಕರು ಈ ಸಂಗೀತ ನೃತ್ಯಗಳು ತಮ್ಮ ಸಾಧನೆಗೆ ಅಡ್ಡಿ ಬರುತ್ತೆಂದು ಭಾವಿಸಿ ಮಹತ್ವವನ್ನು ನೀಡದವರು. ಸಂಗೀತ ನೃತ್ಯ ವಿಲಾಸದ ಸಾಧನೆಗಳೆಂದು ಅವರ ಗ್ರಹಿಕೆ, ಆದರೆ ಸೂಫಿಗಳು ಸಂಗೀತವನ್ನು ಗೌರವಿಸಿದರು.

"ಸೂಫಿಗಳು ಸಂಗೀತವನ್ನು ಹೆಚ್ಚಾಗಿ ಸ್ವೀಕರಿಸಿ ಖವ್ವಾಲಿ ಎಂಬ ಒಂದು ಸಂಗೀತ ಪ್ರಕಾರವನ್ನೇ ಸೃಷ್ಟಿಸಿದರು. ಇದರ ಮೂಲ ಪುರುಷನೇ ಅಮೀರ್ ಖುಸ್ರೋ".[೫೦]

ಪ್ರಸ್ತುತ ಅನೇಕ ದರ್ಗಾಗಳಲ್ಲಿ ಸೂಫಿಗಳ ಉರುಸು ನಡೆಯುವ ದಿನದಂದು ರಾತ್ರಿ ಖವ್ವಾಲಿ ಕಾರ್ಯಕ್ರಮವನ್ನು ಹಮ್ಮಿಕೊಂಡಿರುತ್ತಾರೆ. ಖವ್ವಾಲಿಯ ಮೂಲಕ ಸೂಫಿಸಂತನಿಗೆ ಗೌರವವನ್ನು ಸೂಚಿಸುತ್ತಾರೆ.

**ಮಧ್ಯಕಾಲೀನ ಸಾಂಸ್ಕೃತಿಕ ಸಂದರ್ಭ**

೧. ಧರ್ಮಗಳು ಸಾಂಸ್ಥಿಕತೆ ಹೊಂದಿದ ಸಂದರ್ಭದಲ್ಲಿ ಅದರಿಂದ ಹೊರಬಂದ ಅನೇಕ ಅನುಭಾವಿಗಳು ಹೊಸ ಮಾರ್ಗವನ್ನು ಹುಟ್ಟುಹಾಕಿದ್ದರ ಪರಿಣಾಮ ಹತ್ತಾರು ಪಂಥಗಳು ಹುಟ್ಟಿಕೊಂಡವು.

೨. ಶಿಷ್ಟಧರ್ಮಕ್ಕೆ ಪ್ರತಿಯಾಗಿ ಬೆಳೆದ ಇಂಥ ಮಾರ್ಗದಲ್ಲಿ ಶರಣರು, ಅವಧೂತರು, ಆರೂಢರು, ಸಿದ್ಧರು, ಸೂಫಿಗಳು, ತತ್ವಪದಕಾರರು ಮೊದಲಾದ ಅನುಭಾವಿಗಳು ಮಧ್ಯಕಾಲೀನ ಭಕ್ತಿ ಪಂಥದ ಶಿಷ್ಟ ಧರ್ಮಕ್ಕೆ ಭುಜಕೊಟ್ಟು ಸೆಣಸಿದ ಇತಿಹಾಸವಿದೆ.

೩. ಜಾತಿ, ಮತ, ಧರ್ಮಗಳ ಎಲ್ಲೆಯನ್ನು ಮೀರಿದ ಇವರು ಹಣ, ಅಧಿಕಾರ, ಅಹಂಕಾರ, ಸತಿ, ಸುತ, ತಂದೆ, ತಾಯಿ, ಬಂಧು ಬಳಗ ಮುಂತಾದ ಸಂಬಂಧಗಳಿಂದ, ಬದುಕಿನ ಸಂಘರ್ಷಗಳಿಂದ ದೂರವಾಗಿ ಅನುಭಾವಿಕ ಶಕ್ತಿಯ ಮುಂದೆ ಉಳಿದೆಲ್ಲವು ತೃಣಸಮಾನವೆಂದು ತಿಳಿದವರು.

೪. ಲೌಕಿಕ ಜೀವನದ ಬಗ್ಗೆ ಜಿಗುಪ್ಸೆ ಹೊಂದಿದ್ದು ಜಗತ್ತಿನ ಸಂಕಟಗಳ ಆಸೆ, ನಿರಾಸೆಗಳ ದುಃಖ ದುಮ್ಮಾನಗಳು, ಚಂಚಲಿತೆ ಅತೃಪ್ತಿ ಅಸಮಾಧಾನ, ಅರ್ಥಹೀನ ಆಚರಣೆಗಳಿಂದ ಬೇಸತ್ತು ಸಾಮಾಜಿಕ ಜೀವನದ ಬಗ್ಗೆ ವಿಮುಖರಾಗಿರುತ್ತಾರೆ.

೫. ತಮ್ಮ ಸಾಧನೆಯಿಂದ ಸಿದ್ಧಿಗೇರಿದ ಮೇಲೆ ತಮ್ಮ ನಡೆ-ನುಡಿಯಿಂದಲೇ ಶಾಶ್ವತ ಸುಖದ ಮಹತ್ವವನ್ನು ಸಾರುತ್ತ ತಮ್ಮ ಆತ್ಮೋನ್ನತಿಯ ಜೊತೆಗೆ ಅನುಭಾವಿಕ ವ್ಯಕ್ತಿತ್ವದಿಂದಲೇ ಜನಸಾಮಾನ್ಯರನ್ನು ತಮ್ಮೆಡೆಗೆ ಸೆಳೆದುಕೊಂಡು ಸರ್ವವರ್ಗದವರಿಂದ ಸರ್ವಧರ್ಮದವರಿಂದ ಭಕ್ತಿಪೂರ್ವಕ ಮನ್ನಣೆ ಪಡೆದಿದ್ದಾರೆ.

**ಅನುಭಾವ ಮಾರ್ಗ**

ಮಧ್ಯಕಾಲೀನ ಭಕ್ತಿ ಪಂಥದ ಅನುಭಾವಿಗಳಿಗೆ ಮೂಲಪ್ರೇರಣೆಯಾಗಿ ನಿಂತದ್ದು ಜನಸಾಮಾನ್ಯರ ಬದುಕು. ಅದನ್ನು ಹಸನುಗೊಳಿಸಬೇಕೆಂಬ ಹಂಬಲ ಹಾಗೂ ಜಡಗಟ್ಟಿದ ವ್ಯವಸ್ಥೆಯನ್ನು ಒಡೆದು ಹಾಕಿ ಸರ್ವಸಮಾನತೆಯ ಸುಂದರ ಸುಖಿಸಮಾಜವನ್ನು ನಿರ್ಮಿಸಬೇಕೆಂಬ ಉತ್ಕಟತೆ. ಹೀಗಾಗಿ ಅನುಭಾವ ಮಾರ್ಗದ ಎಲ್ಲಾ ಅನುಭಾವಿಗಳು ಗಹನವಾದ, ಗೂಢವಾದ ಪರತತ್ವದ ರಹಸ್ಯವನ್ನು ಬದುಕನ್ನು ಬೆಡಗನ್ನು ಹೇಳಲು ಪ್ರಯತ್ನಿಸಿದ್ದಾರೆ.

ಅನುಭಾವ ಸಾಹಿತ್ಯವನ್ನು ಅವಲೋಕಿಸಿದಾಗ ಸತಿ-ಪತಿ ಭಾವದಿಂದ ದೈವವನ್ನು ಉಪಾಸನೆ ಮಾಡಿದ ಅನುಭಾವಿಗಳೂ ನಮಗೆ ದೊರೆಯುತ್ತಾರೆ. ಇಂಥ ಅನುಭಾವಿಗಳಲ್ಲಿ ಇಸ್ಲಾಂ ಧರ್ಮದ ಸೂಫಿಗಳು, ವೀರಶೈವ ಧರ್ಮದ ಶರಣರು ನಮಗೆ ಕಾಣುತ್ತಾರೆ. ದೇಶ ಕಾಲ-ಸಂಸ್ಕೃತಿ ಪರಂಪರೆಗಳು ಈ ಅನುಭಾವಿಗಳಲ್ಲಿ ವಿಭಿನ್ನವಾಗಿದ್ದರೂ ಅವರ ಸಾಧನ ಪಥದ ಮಧುರ ಭಕ್ತಿ ಒಂದೇ ರೀತಿಯಾಗಿದೆ. ಶರಣರು ತಾವು ಸತಿಯಾಗಿ ಲಿಂಗವನ್ನು ಪತಿ ಎಂದು ಉಪಾಸನೆ ಮಾಡಿದರೆ, ಸೂಫಿಗಳು ತಾವು ಪತಿಯಾಗಿ ಭಗವಂತನನ್ನು ಸತಿ ಎಂದು ಆರಾಧಿಸುತ್ತಾರೆ. ಶರಣರು ಸತಿ-ಪತಿ ಭಾವ ಲೋಕದಲ್ಲಿ ಉಪಾಸನೆ ಮಾಡಿದ್ದಾರೆ. ಮಧುರ ಭಾವನೆಯ ಅನುಭಾವ ಪಥದಲ್ಲಿ ಇಬ್ಬರ ಸಾಧನೆಯೂ ಒಂದೇ ರೀತಿಯಾಗಿದೆ. ಆದರೂ ಸೂಫಿಗಳ ಅನುಭಾವ ಪಥದಲ್ಲಿ ಶರಣರ ಆಳವಾದ ಆಧ್ಯಾತ್ಮಿಕ ಹಿನ್ನೆಲೆ ಇಲ್ಲ. ಶರಣರ ವಿಚಾರಧಾರೆ, ಧಾರ್ಮಿಕ, ಸುಧಾರಣೆ, ಕಾಯಕ, ದಾಸೋಹ ಮೊದಲಾದ ಉದಾತ್ತ ವಿಚಾರ ಪ್ರಣಾಳಿಯನ್ನು ಸೂಫಿ ತತ್ವದಲ್ಲಿ ನಾವು ಕಾಣಲು ಸಾಧ್ಯವಿಲ್ಲ. ಅನೇಕ ಅಂಶಗಳಲ್ಲಿ ವಿಭಿನ್ನತೆ ಕಂಡುಬರುತ್ತದೆ. ಆದರೂ ಶರಣರ ಲಿಂಗಾಂಗ ಸಾಮರಸ್ಯದ ನಿಲುವು ಸತಿ, ಪತಿ, ಮಧುರಭಾವ

ಸೂಫಿಗಳ ಅನಲ್‌ಹಕ್ ಸ್ಥಿತಿ ಪ್ರೇಮೈಕ್ಯ ಭಾವದ ನಿಲುವು ಒಂದೇ ಆಗಿದೆ. ದೈವದ ಅರಿವು ಅನುಭವ ಅದರ ಅನ್ವೇಷಣೆ ಅನುಭಾವ. ಕೊನೆಯ ಹಂತದಲ್ಲಿ ದೈವೀ ಸಾಕ್ಷಾತ್ಕಾರವೇ ಅನುಭೂತಿಯಾಗುತ್ತದೆ. ಈ ಅರ್ಥದಲ್ಲಿ ಇಸ್ಲಾಂ ಧರ್ಮದ ಸೂಫಿಗಳು ವೀರಶೈವ ಧರ್ಮದ ಶರಣರು ಸಾಗಿದ ಅನುಭಾವ ಪಥದಲ್ಲಿ ವಿಭಿನ್ನತೆ ಕಂಡರೂ ಅವರು ಪಡೆದ ಅನುಭೂತಿ ಒಂದೇ ರೀತಿಯಾಗಿದೆ.

**ಸೂಫಿಗಳು**

ಸೂಫಿಗಳೆಂದರೆ ಯಾರೂ? ಸೂಫಿಗಳ ಲಕ್ಷಣ ಏನು? ಇವರು ಯಾಕೆ ಅನುಭಾವ ಮಾರ್ಗವನ್ನು ಅನುಸರಿಸಿದರು? ಪರಮಾತ್ಮನನ್ನು ಪ್ರಿಯತಮೆಯ ರೂಪದಲ್ಲಿ ಉಪಾಸನೆ ಮಾಡುವವನೇ ಸೂಫಿ. ಸೂಫಿ ಎಂದರೆ ಅನುಭಾವಿ ಸಿದ್ಧ. ಈ ಮೊದಲು ಪ್ರಸ್ತಾಪಿಸಿದಂತೆ ಒಬ್ಬ ಸೂಫಿ ದೈವಪ್ರೇಮದ ಹಂತವನ್ನು ತಲುಪಲು ಆರು ಅವಸ್ಥೆಗಳು ಹೀಗಿವೆ. ತರತ್, ಶರೀರತ್, ಮಾರಿಫತ್, ಹರೀಕತ್, ಹಕಿದತ್, ಆಗ ಆ ಸೂಫಿ ಅನಲ್‌ಹಕ್ ಸ್ಥಿತಿ ಹೊಂದುತ್ತಾನೆ. ಇದು ಅವನಲ್ಲಿರುವ ನಂಬಿಕೆಯಾಗಿದೆ. ಇವರು ಜೀವನದಲ್ಲಿ ಜಿಗುಪ್ಸೆ ತಾಳಿ ವಿರಕ್ತರಾಗಿ ಏಕಾಂತವಾಸಿಗಳಾದಾಗ ಈ ಅನುಭಾವ ಮಾರ್ಗವನ್ನು ಅನುಸರಿಸುತ್ತಾರೆ. ಇವರ ಲಕ್ಷಣಗಳೆಂದರೆ;

೧. ಇವರು ಉಣ್ಣೆಯ ಬಟ್ಟೆಯನ್ನು ಧರಿಸುತ್ತಾರೆ.

೨. ಏಕೇಶ್ವರವಾದಿಗಳು

೩. ನಿರಾಕಾರ ದೇವರ ಆರಾಧನೆ

೪. ಸರ್ವರಲ್ಲಿ ಸಮಾನತೆ ದಯಪರತೆವುಳ್ಳವರು, ಸದಾಚಾರ ಮತ್ತು ಸರಳತೆ ಉಳ್ಳವರು.

೫. ಇವರು ದಿವ್ಯಜ್ಞಾನದ ಮೂಲಕ ಭವಿಷ್ಯ ಹೇಳುವುದಲ್ಲದೆ ಸಂಕೇತ ಸೂಚನೆಗಳ ಮೂಲಕ ಮುಂದೆ ಆಗಬಹುದಾದುದನ್ನು ಸೂಚಿಸುತ್ತಿದ್ದರು.

೬. ಭಗವಂತನನ್ನು ಭಯದಿಂದ ಭಜಿಸುವುದಕ್ಕಿಂತ ಪ್ರೇಮದಿಂದ ಆರಾಧಿಸುವವರು. ತನ್ನನ್ನು ತಾನು ತಿಳಿಯುವ ಸ್ವರೂಪ ಆತ್ಮಜ್ಞಾನಕ್ಕೆ ಇವರು ಮಹತ್ವ ನೀಡುತ್ತಾರೆ.

೭. ಸೂಫಿಗಳದು ಅನುಭಾವದ ಹಾದಿ, ಸೂಫಿ ಅನುಭಾವಿಗಳು ಸಂಪ್ರದಾಯ ಶರಣರಾಗದಿದ್ದರೂ ಅವರಲ್ಲಿ ಅಪ್ಪಟ ವೈಚಾರಿಕತೆಯ ಬೆಳಗಿನ ಶಕ್ತಿಯೂ ಅಡಕವಾಗಿದೆ.

೮. ಉದಾತ್ತ ಬದುಕನ್ನು ಬದುಕಿದ ಸೂಫಿಗಳು ನುಡಿದ ನುಡಿಗಳು ಅತ್ಯಂತ ಉನ್ನತವಾದವುಗಳೇ ಆಗಿವೆ.

೯. ಸೂಫಿಗಳು ಆಧ್ಯಾತ್ಮ, ಪ್ರೇಮ ಇರದಿದ್ದರೆ ಈ ಜಗತ್ತು ರೂಪುಗೊಳ್ಳುತ್ತಿರಲಿಲ್ಲ ಎನ್ನುತ್ತಾರೆ. ಪ್ರೇಮವಿಲ್ಲದ ಬದುಕು ಶೂನ್ಯ ಎಂದರಿತಿದ್ದರು.

೧೦. ಸೂಫಿಗಳು ಸತ್ಸಂಗಕ್ಕೆ ಹೆಚ್ಚು ಒತ್ತು ಕೊಟ್ಟವರು. ಅದೇ ಒಂದು ಪ್ರಾರ್ಥನೆ. ಅದೇ ಒಂದು ಭಕ್ತಿ.

೧೧. ಭಾರತದ ತತ್ವಜ್ಞಾನದಲ್ಲಿ ಸೂಫಿಗಳ ವಿಚಾರಗಳು ಅಡಕವಾಗಿವೆ. ಅವರ ಮಾತುಗಳು ಜಗತ್ತಿನ ಬೆಳಕಿನ ದರ್ಶನ ಮಾಡಿಸುತ್ತವೆ.

“ತೊರೆಯದಿರೆನ್ನ ತೊರೆಯದಿರೆನ್ನ ರಾಮೈಯ ।
ನನ್ನ ಮೇಲೆಲ್ಲ ಮುನಿದಿಹರು, ನಿನ್ನ ಭಕ್ತನ ಮಾನ ಕಾಪಾಡೈಯ ।
ಶೂದ್ರ ಶೂದ್ರನೆಂದು ದಂಡಿಸುತಿಹರು, ಏನ ಮಾಡಲಿ ವಿಠಲ ।
ಸತ್ತ ಮೇಲೆ ದೊರೆವ ಮುಕುತಿಹ ಬಲ್ಲವರಾರು ವ್ಯರ್ಥವಲಾ ।
ಅಸ್ಪೃಶ್ಯನೆಂಬೆಯಾ ಪಂಡಿತ ಎಲ್ಲಿ ಹೋಯಿತು ನಿನ್ನ ಪ್ರಾಣ ।
ನೀ ದಯಾಳುವೆಂಬ ತಡವೆ ಅಪಾರ ಬಲ ಬಂದಿತೆನ್ನ ಭುಜಕೆ ಕಣ ।
ದೇಗುಲವನೇ ನೀ ಹಿನ್ನ ಮುನ್ನ ಮಾಡಿದೆ, ಪಂಡಿತರು ಕಂಡರವರ ಬೆನ್ನ ।”[೫೧]

ಸಂತರನ್ನು ಗೌರವದಿಂದ ಕಾಣಬೇಕಾಗಿರುವ ಬದಲು ಅವನನ್ನು ಜಾತಿಯೆಂಬ ಪದದಿಂದ ಹೀನ ಕುಲದವನೆಂದು ಅವಮಾನಿಸಿದರು. ಜಾತಿಯೆಂಬುದು ಸಂತನನ್ನು ಬಿಡಲಿಲ್ಲವೆಂಬುದು ಈ ಸಮಾಜದ ಜನರ ಮೌಢ್ಯತೆಗೆ ಸಾಕ್ಷಿ. ಈ ಸಮಾಜದಲ್ಲಿನ ಮೇಲುವರ್ಗದವರಿಂದ ಅವಮಾನಿತನಾದ ಸಂತನು ನೊಂದ ಮನಸ್ಸಿನಿಂದ ನೋವನ್ನು ಈ ಪದದಲ್ಲಿ ಹೇಳಿಕೊಂಡಿದ್ದಾನೆ. ಜಾತಿಯೆಂಬುದು ಕೂಡ ಈ ಮನಸ್ಸಿಗೆ ಎಷ್ಟು ನೋವುಂಟು ಮಾಡುತ್ತದೆಂದು ಸಂತ ನಾಮದೇವನು ಹೀಗೆ ಹೇಳಿದ್ದಾನೆ.

“ಇರಲಾರೆ ನಾನೀ ಊರಲಿ ಒಡೆಯ, ನಿನ್ನ ನೌಕರರು ನಿಂತಿಹರು ರಾಮ ಕಂಡಯ್ಯ।
ಒಂದೂರಿನಲ್ಲಿತ್ತು ಜೀವ ಒಂದು, ಐವರು ರೈತರಯ್ಯ ।..
ಕಣ್ಣ ಬಳಿಯಿಹುದು ನಾಲಿಗೆ, ಇಂದ್ರಿಯಗಳು, ಮಾತ ಕೇಳವಯ್ಯ ।
ದೂರದಲಿದೆ ರೈತನ ಹೊಲ, ಗುಮಾಸ್ತರು ಜೀತ ಮಾಡಿಸಿಕೊಂಬರಯ್ಯ ।
ಹೊಲ ದೊಡ್ಡದು, ನೊಗ ಹಿರಿದು, ಎಲ್ಲರೂ ಮಾಡುವರಯ್ಯ ಕೈಯ ।
ದೂರನಾರೂ ಕಿವಿಯ ಮೇಲೆ ಹಾಕಿಕೊಳ್ಳರಯ್ಯ ।
ಒಬ್ಬ ಕಟ್ಟಿಹಾಕುವ, ಒಬ್ಬ ಬಡಿವ ದೆಯ್ಯ ।
ಲೆಕ್ಕ ಒಪ್ಪಿಸಬೇಕು ಕೇಳಿದಾಗ ಧರ್ಮರಾಯ ।
ಐವರು ರೈತರೂ ಓಡಿ ಹೋದರಯ್ಯ ।
ಜೀವವ ಕಟ್ಟಿ ಬಂಧಿಸಿಹರಯ್ಯ ಕೇಳು ರಾಮಯ್ಯ ।”[೫೨]

ಶ್ರೀಮಂತರ ದಬ್ಬಾಳಿಕೆಗೆ ಬಡವರು ಹೇಗೆ ಒಳಗಾಗುತ್ತಿದ್ದರು; ಇವರಿಬ್ಬರಲ್ಲಿರುವ ತಾರತಮ್ಯವನ್ನು ಇಲ್ಲಿ ಕಾಣಬಹುದು. ದುಡಿವ ಜನಕ್ಕೆ ತಕ್ಕ ಫಲ ಸಿಗದು. ಅದರ ಜೊತೆಯಲ್ಲಿಯೇ ನಿಂದನೆಯ ಮಾತುಗಳು. ದುಡಿಯುವ ವರ್ಗದ ಜನರಿಗೆ ಕಷ್ಟವನ್ನು ಕೊಡುವುದರ ಜೊತೆಗೆ

ಅವರ ಬಡತನವನ್ನು ತಿಳಿದು ಅವರಿಗೆ ಸಹಾಯಕರಾಗಿರುವ ಬದಲು ತಮ್ಮ ಕೆಲಸ ಕಾರ್ಯಗಳಿಗೆ ಅವರನ್ನು ದುಡಿಸಿಕೊಳ್ಳುತ್ತಿದ್ದರು. ಬಡವರ್ಗವು ಶೋಷಣೆಗೆ ಒಳಗಾಗುತ್ತಿತ್ತು. ಶ್ರಮಜೀವಿಗಳ ಶ್ರಮಕ್ಕೆ ತಕ್ಕ ಫಲವಿಲ್ಲದೆ ನೊಂದು ನೀರಾಗುತ್ತಿರುವ ಆ ಜೀವಿಗಳನ್ನು ಕಂಡ ಕಬೀರರು ತಮ್ಮ ಪದದಲ್ಲಿ ಹೀಗೆ ತಿಳಿಸಿದ್ದಾರೆ.

"ಇರುಳ ನುಂಗಿತ ನಿದ್ದೆ ಹಗಲ ನುಂಗಿತ ಆಶನ ।
ವಜ್ರದಂಥ ಬದುಕು ಬಿಡುಗಾಸಿಗೆ ಮಾರದಿರೊ ಅದನ ।
ಅರಿವಿಗೆ ಬರಲಿಲ್ಲ ರಾಮ ನಾಮವಯ್ಯ ।
ಮೂಳ, ನಾಳೆ ಹಿಸುಕಿಕೊಳುವೆ ಕೈಯ ।
ಬೇರೆ ನೆನೆದು ಬದುಕಿಹೆ, ಬಯಸಲಾರೆ ಬೇರೆ ।
ಕರ್ಮದ ಮೇಲೆ ನಿಂತಿದೆ ಎಲ್ಲ, ಬಯಕೆ ಬೇರೆ ಬೇರೆ ।
ನಾನಕನೆಂದ ಮಾಡಿದುಣ್ಣೊ ಮಹರಾಯ ।
ನೆನೆಯಲಿಲ್ಲ ದೇವನ, ನಿನ್ನ ಹೆಗ್ಗಳಿಕೆಯೇನಯ್ಯ ।"[೫೩]

ಬದುಕೆಂಬುದು ಎಷ್ಟು ಪ್ರಮುಖವಾದದ್ದು ಎಂಬುದನ್ನಿಲ್ಲಿ ಕಾಣಬಹುದು. ಬದುಕೆಂಬುದು ನಶ್ವರ; ಮನುಜ ಜೀವನದ ಪಯಣವನ್ನು ಕೆಲದಿನಗಳ ಮಟ್ಟಿಗೆ ಮಾಡಲು ಬಂದಿರುವನು. ಅದು ಒಂದು ದಿನ ಕೊನೆಗೊಳ್ಳುತ್ತದೆ. ಅದಕ್ಕಾಗಿ ಎಷ್ಟೆಲ್ಲ ಬಡಿದಾಡುವನು. ಈ ಬಡಿದಾಟದ ನಡುವೆ ನೋವು - ನಲಿವನ್ನು ಉಂಡು ಜೀವನದ ಕೊನೆಗಾಗಿ ಹಂಬಲಿಸುತ್ತಿರುತ್ತದೆ. ಶಾಶ್ವತವಲ್ಲದ ಈ ಜೀವನದ ಬದುಕಿಗಾಗಿ ಎಷ್ಟೆಲ್ಲ ಮನುಷ್ಯ ಪರದಾಡುತ್ತಾನೆ. ಈ ಬದುಕೆಂಬುದು ನಶ್ವರ. ಇಲ್ಲೇನಿದೆ? ಇದರ ಸುಖ ಕ್ಷಣಿಕ. ಇದನ್ನರಿತು ಮನುಜ ವಿರಾಗಿಯಾಗುತ್ತಾನೆ. ತಿಳಿಯದವ ಇದೇ ಸಂಸಾರ ಬದುಕೆಂದು ಬಡಿದಾಡಿಕೊಂಡಿರುತ್ತಾನೆ. ನಶ್ವರದ ಬದುಕಿಗಿಂತ ಮುಕ್ತಿ ಹೊಂದುವ ಮಾರ್ಗವೇ ಮೌಲ್ಯಯುತವಾದುದೆಂದು ನಾನಕರು ತಮ್ಮ ಪದದಲ್ಲಿ ತಿಳಿಸಿದ್ದಾರೆ.

"ಕಾಯಾನಗರಿಯಲಿಹನೊಬ್ಬ ಪೋರ, ಚಣವೂ ಇರಲೊಲ್ಲ ಸ್ಥಿರ ।
ಹಲವು ಉಪಾಯ ಮಾಡಿ ಬಳಲಿದೆ ಮತ್ತೆ ಸುತ್ತುತಿಹ ದೂರ ಹತ್ತಿರ ।
ತಂದು ಕೂರಿಸೋ ದೇವ, ಈ ಕೂಸನು ಒಂದು ಕಡೆ ।
ಸದ್ಗುರುವಿಲ್ಲದೆ ಪೂರೈಸದಾಸೆ, ಬಾಜಿಸುತಿದೆ ರಾಮನಾಮ ಎಲ್ಲೆಡೆ ।
ರಾಮನಾಮವಿಲ್ಲದ ಮಂದಿಯ ಮೈ ಮಸಣದ ಒಂದು ಮಣ್ಣ ಹೆಂಟೆ ।
ರಾಮನಾಮ ಜಲವ ಗುರುಸಿಡಿಸೆ ಅಲ್ಲಿ ನಳ ನಳಿಪುದು ಗಿಡಗಂಟೆ ।
ನಾ ನೋಡ ನೋಡುತ ಶರೀರದಲೆ ಕಂಡೆ ದೊರೆಯ, ಗುರುತೋರಿದನವನ ।
ಹೊರ ಹುಡುಕಿ ಸತ್ತರು ನಾಸ್ತಿಕರೆಲ್ಲ, ಗುರುಕೃಪೆಯಿಂದ ಮನದಲೆ ಕಂಡೆನವನ ।
ದೀನ ದಯಾಳು ಬಂದ ಮನೆಗೆ ಮಿಧುರನ ಮನೆಗೆ ಕೃಷ್ಣ ಬಂದಂತೆ ।
ಬಂದು ಸುಧಾಮನ ಮನೆಗೆ ನೀಗಿದವನವನ ಬಡತನದ ತೊಲಗಿತು ಚಿಂತೆ ।
ರಾಮನಾಮದ ಪ್ರತಿಜ್ಞೆ ಹಿರಿದು, ಉಳಿಸಿಕೊಂಡನೆನ್ನ ದೊರೆ ।

ನಾಸ್ತಿಕರೆಲ್ಲ ಕೂಗಿ ಬಗುಳಿದರೂ, ಆಗದೆನ್ನ ದೊರೆಯ ಮಹಿಮೆಗೆ ಕೊರೆ ।
ಭಕುತನ ರಾಮನಾಮ ಸ್ಮರಣೆಯ ಸಿರಿ ಹಬ್ಬಿದೆ ದಶದಿಶೆಗಳಲಿ ನಿಚ್ಚ ।
ನಿಂದಕ ನಾಸ್ತಿಕರು ತಡೆಯಲಾರರು, ತಮ್ಮ ಮನೆಗೆ ಹಚ್ಚಿ ಕಿಚ್ಚ ।
ಭಕ್ತನ ಕೂಡಿ ಭಕ್ತ ಕಂಗೊಳಿಪ, ಹೊಳೆವುದು ಗುಣವ ಕೂಡಿಗುಣ ।
ನನ್ನೊಡೆಯನ ಭಕ್ತ ದೇವಗೆ ಬಲು ಪ್ರಿಯ, ದಾಸನದಾಸ ಕಣ ।
ಭಗವಂತ ಅಪರಂಪಾರ ಸಾಗರ ತಾನೆಗೈವನನ್ನೊಡನೆ ಮಿಲನ ।
ನಾನಕ ಗುರು ಕೃಪೆಯಿಂದ ಸಹಜದಿ ಕೂಡಿದರು ನೀರಿಗಾಯಿತು ನೀರ ಮಿಲನ ।"[೫೪]

ಮನುಜನ ಮನಸ್ಸು ಅವನ ಸಾಧನೆಗೆ ಪೂರಕವಾದುದು. ಅದು ಎಷ್ಟು ಶುದ್ಧವಿರುತ್ತದೆಯೋ ಅಷ್ಟು ಅವನು ಸಾಧನೆಯನ್ನು ಮಾಡಬಹುದಾಗಿದೆ. ಮನಸ್ಸು ಹಿಡಿತಕ್ಕೆ ಸಿಕ್ಕುವುದು ಕಷ್ಟ ಸಿಕ್ಕಾಗ ಸಾಧನೆಯ ಸಾಧಕನಾಗುತ್ತಾನೆ. ದೇಹದೊಳಗಿನ ಮನಸ್ಸು ಸ್ಥಿರವಲ್ಲದ್ದು. ಚಾಂಚಲ್ಯವಾಗಿರುವಂಥದ್ದು. ಬಯಕೆಗಳ ಮೇಲೆ ಬಯಕೆಗಳನ್ನು ಬಯಸುವಂಥದ್ದು; ಹಾಗಾಗಿ ಭಗವಂತನಲ್ಲಿ ಪ್ರಾರ್ಥಿಸುತ್ತಿದೆ ಆ ಚಾಂಚಲ್ಯದ ಮನಸ್ಸನ್ನು ಒಂದು ಕಡೆ ಸ್ಥಿರವಾಗಿ ನಿಲ್ಲಿಸು. ಮನಸ್ಸಿನ ಚಂಚಲತೆಯನ್ನು ಮಗುವಿಗೆ ಹೋಲಿಕೆ ಮಾಡಿ ತಮ್ಮ ಪದದಲ್ಲಿ ಗುರು ರಾಮದಾಸರು ಹೇಳುತ್ತಾರೆ.

"ನಾಮ ನಮ್ಮ ಮಣ್ಣು, ನಾವು ಮಣ್ಣ ಬಂಟರು ।
ಮಣ್ಣಿನಿಂದ ಜನಿಸಿದರು ಮೂರ್ಖ ಕೊಳಚೆಯ ನಂಟರು ।
ಭಜಿಸರೆಂದೂ, ಜಗದಲಿ ತಪ್ಪಿಹರು ದಾರಿ ।
ಗಗನವ ನೋಡುವನು, ಕುದುರೆಯನೇರಿ ಹೋಹರು ಹಾರಿ ।
ಮಡದಿ ಮಕ್ಕಳನೊಲಿಸಿದರು ಮರೆತರು ದೊರೆಯ ।
ತೊರೆದು ಒಳಿತಿನ ದಾರಿ ಗಳಿಸಿದರು ಕೆಟ್ಟ ಸಿರಿಯ ।
ನೆನೆ ಅವನ ಚಣ ಚಣ ಅವನಿಂದ ಬದುಕು ಸರಳ ।
ಎಲ್ಲ ಮಣ್ಣು, ಮೇಲೆ ಮಣ್ಣು, ತಿಳಿಯೊ ಮರುಳ ।
ಆನೆ ಕುದುರೆಯೆಲ್ಲ ಮಣ್ಣಿನದು, ಮಣ್ಣು ಸಿರಿ ।
ಮಲೂಕನೆಂಬ ಉಳಿವುದು ಮಣ್ಣು ಹಿರಿ ।"[೫೫]

ಮನುಜನ ನಾಮದಲ್ಲೇನು ಪ್ರಯೋಜನವಿದೆ. ಮನುಜನ ನಾಮ ಮಣ್ಣು. ಮನುಜ ಮಣ್ಣು. ಜೀವನವೇ ಮಣ್ಣು, ಆಸೆ ಬಯಕೆಗಳೇ ಮಣ್ಣು. ಎಲ್ಲವು ಮಣ್ಣು. ಈ ದೇಹವೇ ಮಣ್ಣು ಇದಕ್ಕೆ ನಾಮ ಅವಶ್ಯವೇನಿದೆ. ದೇಹದ ಜೊತೆ ಇದೆಲ್ಲವು ಮಣ್ಣು ಆದರೂ ಬದುಕುವ ಮನುಜನಿಗೆ ಬದುಕಿರುವವರೆಗೆಷ್ಟು ಪ್ರಯೋಜನ ಈ ನಾಮದ ನಂಟು. ಈ ನಂಟಿನೊಂದಿಗೆ ಮನುಜನ ಬದುಕು ಬಾಳುವವರೆಗೆಂಬುದು ಸಂತ ಮಲೂಕದಾಸ ಅವರು ತಮ್ಮ ಪದಗಳಲ್ಲಿ ಹೇಳುತ್ತಾರೆ.

"ದೃಷ್ಟಿಯಿಲ್ಲ, ಇಲ್ಲ ಮುಕ್ತಿ ಅಮಗ, ಅಗೋಚರ ।
ಹೊತ್ತಿಗೆಯಲಿ ಬರೆಯಲಾಗದು ।
ಆದಮೇಲೆ ಅವನ ಕೃಪೆ ಅವನೆ ಉತ್ತಮ ।
ಹೇಳಿದರೆ ನಂಬುವರಾರು ।
ಹೊರಗೆ ಮಿಂದೊಡೆ ಸದ್ಗುರುಗೆ ಅಪಮಾನ ।
ಒಳಗೆ ಮಿಂದೊಡೆ ಹುಸಿ ಕೋ ।
ಹೊರಗು ಒಳಗು ಸಕಲ ನಿರಂತರ ।
ಸದ್ಗುರು ನೋಡಿಹ ಶಬ್ದವ ।
ಮೀನು ಚಲಿಪುದು ಜಲದಲಿ, ಹಾದಿಕಾಣದು ।
ರೂಪ ವರ್ಣ ಬಾಹಿರ ।
ಪುಷ್ಪ ಗಂಧದೊಲು ಇಹ ನಿರಂತರ ।
ಪ್ರೇಮ ತತ್ತ್ವವಿಹುದು ಇಂತು ॥

ಆಗಸಕೆ ಹಾರಿ ಹೋಹುದು ವಿಹಂಗಮ ।
ಹಿಂದೆ ಹುಡುಕಿದಡೆ ಕಾಣದು ।
ಬಾಲಯತಿ ಹಣವಂತನಿಂತು ನಮಿತ ।
ನಿಜತತ್ತ್ವ ಪ್ರಸಾರ ವಿರಳ ।
ತತ್ತ್ವ ಬಳ್ಳಿಯಿದ ಕೋ, ಇದಕೋ ।
ಅಲಕ್ಷ ವೃಕ್ಷ ಬಿಲಕೆ ಸೇರಿಸು ।
ಬೇಲಿ ಬೀಜ ವಿರಹ ಕಾಡಿಪುದು ।
ಗಗನದಲಿ ನೆಲಸಿಹುದು ॥

ಅಮೃತ ಕುಂಡದಲಿ ಕಟ್ಟಿಹುದು ತುರಂಗ ।
ಊರ್ಧ್ವ ಕೂಪವ ತುಂಬಿಕೊ ।

ಚೇತನ ಪ್ರಣತಿಯ ಪಾವನಗೊಳಿಸು ।
ಅಂಬರವ ಭೇದಿಸಿ, ಹೊಡೆ,
ಮರದಿಂದ ಪಾವಕತೆ ಪುಷ್ಟಿ ।
ಹೂವಿನಿಂದ ಅಮೃತದ ಹನಿ ।

ರೂಪ, ವರ್ಣ ಒಂದು ಇಲ್ಲ ಅದಕ್ಕೆ
ದೇಹವಿಲ್ಲದೆ ಮೇಯುತಿಹ ಮೃಗ ॥
ತನ್ನ ಸಂಪಾದನೆ ತನಗೆ ಮೇಲು
ಅದರ ಫಲವೊಂದ ಕೋ ॥

ಸಹಜ ಅರಳಿಹುದು

ಹಣವಂತನೆಂದ ಅವಧೂ, ಅಮರಫಲವೊಂದ ಕೋ ॥"[೫೬]

ಮುಕ್ತಿಯ ಬಗೆಗಿನ ವಿಚಾರ ಯಾರ ದೃಷ್ಟಿಯಲ್ಲಿ ಇಲ್ಲ. ಅದು ಮನುಜನಿಗೆ ಬರುವ ಆರಂಭದ ಸುಳಿವು. ಯಾರಲ್ಲೂ ಇಲ್ಲ - ಇರುವುದಿಲ್ಲವೆಂಬ ವಿಚಾರವಾಗಿ ಯಾವ ಪಂಚಾಂಗದಲ್ಲೂ ಬರೆಯುವುದಿಲ್ಲ. ಹೇಳುವುದು ಇಲ್ಲ; ಎಲ್ಲವನ್ನು ಅವನೇ ಬಲ್ಲ. ಆ ಮುಕ್ತಿಯು ಆದ ಮೇಲೆ ಅವನ ಕೃಪೆಯೆನ್ನುವುದೇ ಈ ಪದದ ವಿವರಣೆಯನ್ನು ನಾಥ ಸಿದ್ಧರ ಸ್ವರೂಪವನ್ನು ಹಣವಂತಜೀ ತಮ್ಮ ಪದಗಳಲ್ಲಿ ಹೇಳುತ್ತಾರೆ.

"ಇಂತು ಬಾರಯ್ಯ ಜೀವ,
ಅಯ್ಯ, ಹೋಗುತ ಬರುತ ಯುವ ಕಳೆಯಿತು ।
ಏನು ಬರಲಿಲ್ಲ ಕೈಗೆ ।
ಇಂದಿನ ಬರವು ಸುಫಲವನೀಯಿತು ।
ಪಡೆದೆ ನಿರಂಜನ ನಾಥನ ॥
ಇಂತು ಹೋಗಯ್ಯ ಜೀವ,
ಅಯ್ಯಾ ಹೋಹದೆ ಹೋಗಿ ಇಹ ದೂರದಲಿ ।
ಅದರಲೆಂತು ಸಂಶಯ ?
ವಿಯೋಗ ವೇಳೆ ಮರಣ ಭಯಂಕರ ।
ಯಾರು ಬಲ್ಲರು ಎಲ್ಲಿ ವಾಸ ? ।
ಇಂತು ಕೂರಯ್ಯ ಜೀವ,
ಅಯ್ಯಾ ಕುಳಿತು ಏಳು, ಏಳು ಕುಳಿತು ।
ಕುಳಿತು ಎದ್ದಡೆ ಜಗ ಕಾಂಬುದು ।
ಮನೆ ಮನೆಯಲಿ ಬಿಕ್ಕೆ ಬೇಡುವ ರಾವಲ ॥
ಅಮೃತ ಮಹಾರಸದಲಿ ॥
ಇಂತು ನಿಲ್ಲಯ್ಯ ಜೀವ,
ಅಯ್ಯಾ ಇಂತು ಎದ್ದೊಡೆ ಜಗ ನಿಲ್ಲುವುದು
ಶಂಭು ಸಮಾಧಿಯ ಹಾಕಿ
ನಿಂತೊಡೆ ಏನು ಲಾಭ?
ಮನ ಭ್ರಾಂತವಾದೊಡೆ ಏನು ಲಾಭ?"[೫೭]

ಮನುಷ್ಯನ ಹುಟ್ಟು ಮತ್ತು ಮರಣದ ನಡುವೆ ಇರುವುದೇ ಜೀವನ. ಅದರಲ್ಲಿರುವ ತೊಂದರೆ ಸಮಸ್ಯೆಗಳೇ ಜೀವನದ ಪಯಣ. ಇದನ್ನೆಲ್ಲ ಅರಿತ ಮನುಜ ಸಂಸಾರ ಜಂಜಾಟ ದಲ್ಲಿದ್ದು, ಅದರಿಂದ ಕೊನೆಗೊಳ್ಳಲು ತನ್ನ ಜೀವನದ ಅಂತ್ಯವನ್ನು ಕಾಣಲು ಬಯಸುವನು. ಅದನ್ನೇ ಜೀವ ಬಾ ಎಂದು, ಹೋಗು ಎಂದು ಹೇಳುತ್ತ ಜೀವ, ಜೀವನ, ವಾಸ ಇವೆಲ್ಲವೂ

ಎಲ್ಲಿಂದ ಎಲ್ಲಿಗೆ ಯಾರು ಕಾಣರೆಂಬುದು ಜೀವವೆಂಬುದು. ಇರುವವರೆಗೆ ದೇಹಕ್ಕೆ ಮೆರಗು. ಅದು ಹೋದ ಮೇಲೆ ಕಟ್ಟವರು ಕಟ್ಟಯೆಂಬುದರ ಅರಿವನ್ನು ಈ ಪದವು ತಿಳಿಸುತ್ತದೆಂದು ನಾಥ ಸಿದ್ಧರ ಲಕ್ಷಣವನ್ನು ಧೂಧಲೀಮ್ ತಮ್ಮ ಪದಗಳಲ್ಲಿ ಹೇಳುತ್ತಾರೆ.

"ಗುರುವಿನಾಜ್ಞೆಯನ್ನು । ಮೀರದೆ ನಡೆವವನ ।
ನರನೆನ್ನಬಹುದೆ ಪರಮಾತ್ಮನವನು ।
ಅರಿಯದಾ ಜ್ಞಾನಿ ಜನರವರೇನು ಬಲ್ಲರು
ಪರಕೆ ಪರತರವಾದ ನಿಜ ವಸ್ತುವವನು. ॥

ಮುತ್ತ ನೀರೊಳು ಹುಟ್ಟಿ
ಮತ್ತೆ ನೀರಾಗುವುದೆ?
ಮುತ್ತು ಲಕ್ಷಾಂತರಕ್ಕೆ ಬೆಲೆಯಾಯಿತು ।
ತತ್ವಜ್ಞಾನಿಯು ತಾ ಸತ್ತು ಹುಟ್ಟುವುದಿಲ್ಲ
ಸತ್ಯ ನಿತ್ಯಾನಂದನವನು ಮತ್ತೆ ಬೇರಿಲ್ಲ ॥

ನದಿ ಹರಿದು ಬೆಂದು
ಅದು ಸಾಗರವ ಕೂಡಿ
ನದಿ ಮತ್ತೆ ಹರಿಯುವುದೇ ತಾಪುಟ್ಟಿದೆಡೆಗೆ?
ಸದ ಮಲ ಸುಜ್ಞಾನಿ ಪ್ರಪಂಚ ಮಾಡಿದರೂ
ಅದರೊಳು ಅವನು ತೋರುವ ಬಗೆಯ ಬೇರಿಹುದು. ॥

ಗರುಡನ ಮಂತ್ರವನ್ನು
ಅರಿತಿಹ ಮನಜಂಗೆ
ಉರಗ ಕಚ್ಚಿದರೇನು ವಿಷವು ಏರುವುದೆ?
ಪರಿ ಪರಿಯ ಲೀಲೆಯಿಂದ ಲೋಕದಿ ಮೆರೆವಂಥ
ಶರಣಂಗೆ ಕರ್ಮಗಳು ಕಾಡುವವೇ? ॥

ಯಷ್ಟು ಹಾಲಿಗೆ ಕೂಡಲು
ತುಪ್ಪವಾಗುವುದು ನೋಡು
ತುಪ್ಪ ಮರಳಿ ತಾನು ಹಾಲಾಗುವುದೆ?
ಒಪ್ಪವಡೆದು ನಿಜ ರೂಪ ತಾನಾದ ಶರಣನು
ತಪ್ಪದೆ ಸಂಸಾರಕ್ಕೆ ಹೊರತಾಗುವನು. ॥

ಜಾತಿ ಹೀನರೊಳು ಹುಟ್ಟಿ
ಜ್ಯೋತಿ ತಾನಾಗಿರಲು

ಜಾತಿ ಭೇದಂಗಳು ಅವನ ಕಾಡಬಲ್ಲವೆ?
ಜ್ಯೋತಿ ಪ್ರಕಾಶ ಕೂಡಲೂರೇಶನ ದಯದಿ
ದಾತ ಪ್ರಖ್ಯಾತ ಅವದೂತನವನು ॥"೫೮

ಅವಧೂತನು ಜಾತಿ ಮತಗಳ ಕಟ್ಟುಪಾಡುಗಳನ್ನು ಬದಿಗೊತ್ತಿ ಅಜಾತನಾಗಿರುತ್ತಾನೆ. ಇವನು ಯಾವಾಗಲೂ ಆತ್ಮ ಜ್ಞಾನದಲ್ಲಿ ವಿಹರಿಸುವವನು. ಮನಸ್ಸಿನಲ್ಲಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡವನು. ಸದಾ ಮೌನಿಯಾಗಿದ್ದು, ಆತ್ಮತೃಪ್ತಿಯಲ್ಲಿರುವ ಅವಧೂತನನ್ನು ಅಜ್ಞಾನಿ ಜನರೇನು ಬಲ್ಲರು. ಅವಧೂತರೆಲ್ಲ ದೈವವನ್ನು ಬಾಹ್ಯದಲ್ಲಿ ಹುಡುಕದೇ ಅರಿವಿನ ಮುಖಾಂತರ ತಮ್ಮಂತರಂಗದಲ್ಲಿಯೇ ಹುಡುಕಿದರೆಂಬುದನ್ನು ಕೂಡಲೂರು ಬಸವಲಿಂಗ ಶರಣರು ಈ ಪದದಲ್ಲಿ ತಿಳಿಸುತ್ತಾರೆ.

**ಕೊನೆ ಟಿಪ್ಪಣಿಗಳು**

೧. ಡಾ. ಎಚ್. ತಿಪ್ಪೇರುದ್ರಸ್ವಾಮಿ, **ಶರಣರ ಅನುಭಾವ ಸಾಹಿತ್ಯ,** ಪುಟ ೪೭.

೨. ಅದೇ, ಪುಟ ೬೫.

೩. ಅದೇ, ಪುಟ ೮೨.

೪. ಜಿ.ಎಸ್. ಶಿವರುದ್ರಪ್ಪ, **ಶರಣ ಪಥ,** ಪುಟ ೨೬.

೫. ಅದೇ, ಪುಟ ೩೨.

೬. ಭಾಲಚಂದ್ರ ಜಯಶೆಟ್ಟಿ, **ಶರಣ ಚಿಂತನೆಯ ನೆಲೆಯಲ್ಲಿ,** ಪುಟ ೩೪.

೭. ಅದೇ, ಪುಟ ೧೧೪.

೮. ಅದೇ, ಪುಟ ''೧೬.

೯. ಎನ್.ಎಂ. ಗಿರಿಜಾಪತಿ, **ವಚನರತ್ನತ್ರಯರು,** ಪುಟ ೨೫.

೧೦. ಡಾ. ಚನ್ನಕ್ಕ ಪಾವಟೆ, **ವಚನ ಸಂಗಮ,** ಪುಟ ೧೪೧.

೧೧. ಎನ್.ಎಂ. ಗಿರಿಜಾಪತಿ, **ವಚನ ರತ್ನತ್ರಯರು,** ಪುಟ ೧೪.

೧೨. ಭಾಲಚಂದ್ರ ಜಯಶೆಟ್ಟಿ, **ಶರಣ ಸಾಹಿತ್ಯದ ಸುತ್ತಮುತ್ತ,** ಪುಟ ೭೯.

೧೩. ಚೆಲ್ಕಲಾರವಿ, **ಅನುಭಾವ ಜ್ಯೋತಿಗಳು,** ಪುಟ ೭೫

೧೪. ಅದೇ, ಪುಟ ೧೦

೧೫. ಡಾ.ಎಚ್. ತಿಪ್ಪೇರುದ್ರಸ್ವಾಮಿ; **ವಚನಗಳಲ್ಲಿ ವೀರಶೈವ ಧರ್ಮ,** ಪುಟ ೧೯೨

೧೬. ಅದೇ, ಪುಟ ೨೦೯

೧೭. ಅದೇ, ಪುಟ ೨೪೦

೧೮. ಅದೇ, ಪುಟ ೨೪೨

೧೯. ಬೇಲೂರು ಕೇಶವದಾಸರು, **ಶ್ರೀ ಕರ್ನಾಟಕ ಭಕ್ತ ವಿಜಯ,** ಪುಟ ೪೧.

೨೦. ಡಾ. ಕೆ. ಗೋಕುಲನಾಥ, **ವ್ಯಾಸರಾಯರು,** ಪುಟ ೩೪, ೩೫.

೨೧. ಬೇಲೂರು ಕೇಶವದಾಸರು, **ಶ್ರೀ ಕರ್ನಾಟಕ ಭಕ್ತ ವಿಜಯ,** ಪುಟ ೧೪೦.

೨೨. ಅದೇ, ಪುಟ ೧೮೦.

೨೩. ಅದೇ, ಪುಟ ೪೧೨, ೪೧೩.

೨೪. ಅದೇ, ಪುಟ ೩೪೭.

೨೫. ವಿವಿಧ ಲೇಖಕರು, **ಕನ್ನಡ ತತ್ವಪದಕಾರರು,** ಪುಟ ೧೪೦

೨೬. ಅದೇ, ಪುಟ ೫.

೨೭. ರಂಗಾರೆಡ್ಡಿ ಕೋಡಿರಾಂಪುರ(ಸಂ), **ತತ್ವಪದಗಳು,** ಪುಟ XXXI ಪ್ರಸ್ತಾವನೆ.

೨೮. ಅಮರೇಶ ನುಗಡೋಣಿ; **ತತ್ವಪದ ಸಾಹಿತ್ಯ ಅಧ್ಯಯನ,** ಪುಟ ೪೮.

೨೯. ಅಮರೇಶ ನುಗಡೋಣಿ; **ನುಡಿವ ಪಾಡು,** ಪುಟ ೧೬.

೩೦. ರಂಗಾರೆಡ್ಡಿ ಕೋಡಿರಾಂಪುರ(ಸಂ), **ತತ್ವಪದಗಳು,** ಪುಟ ೯೫.

೩೧. ಅದೇ, ಪುಟ ೮೮.

೩೨. ಅದೇ, ಪುಟ ೧೦೭.

೩೩. ಅದೇ, ಪುಟ ೧೬೩

೩೪. ಡಾ. ಗುರುಲಿಂಗಪ್ಪ ಧಬಾಲೆ(ಸಂ), **ಕಲ್ಯಾಣ ದೀಪ್ತಿ,** ಪುಟ ೩೪೭.

೩೫. ರಂಗಾರೆಡ್ಡಿ ಕೋಡಿರಾಂಪುರ(ಸಂ), **ತತ್ವಪದಗಳು,** ಪುಟ ೨೫೫.

೩೬. ರಂಗಾರೆಡ್ಡಿ ಕೋಡಿರಾಂಪುರ(ಸಂ), **ತತ್ವಪದಗಳು,** ಪುಟ ೨೧೮.

೩೭. ಅದೇ, ಪುಟ ೧೮೦, ೧೮೧.

೩೮. ಡಾ. ಗುರುಲಿಂಗಪ್ಪ ಧಬಾಲೆ, **ಕಲ್ಯಾಣ ದೀಪ್ತಿ,** ಪುಟ ೧೫೭.

೩೯. ಬಾಲಚಂದ್ರ ಜಯಶೆಟ್ಟಿ, **ಶರಣ ಚಿಂತನೆಯ ನೆಲೆಯಲ್ಲಿ,** ಪುಟ ೬೩.

೪೦. ಅದೇ, ಪುಟ ೬೭.

೪೧. ಅದೇ, ಪುಟ ೬೯, ೭೦, ೭೧.

೪೨. ಅದೇ, ಪುಟ ೭೨, ೭೩.

೪೩. ಅಬ್ದುಲ್ ಹಮೀದ್, **ಸೂಫಿಪಥ ಮತ್ತು ಶರಣಪಥಗಳ ತೌಲನಿಕ ಅಧ್ಯಯನ,** ಪುಟ ೮೭.

೪೪. ಅದೇ, ಪುಟ ೬೧.

೪೫. ಮ.ಸು. ಕೃಷ್ಣಮೂರ್ತಿ, **ಸೂಫೀ ಪ್ರೇಮಕಾವ್ಯ,** ಪುಟ ಬಿನ್ನಹ.

೪೬. ಅದೇ, ಪುಟ ೧.

೪೭. ಷಣ್ಮುಖಯ್ಯ ಅಕ್ಕೂರಮಠ, **ಸೂಫಿ ಮತ್ತು ಶರಣರ ಅನುಭಾವ ಪಥ,** ಪುಟ ೧೮.

೪೮. ಅದೇ, ಪುಟ ೧೮.

೪೯. ಅಬ್ದುಲ್ ಹಮೀದ್, **ಸೂಫಿಪಥ ಮತ್ತು ಶರಣಪಥಗಳ ತೌಲನಿಕ ಅಧ್ಯಯನ,** ಪುಟ ೩೫.

೫೦. ಅದೇ, ಪುಟ ೧೦೧, ೧೦೨.

೫೧. ಮ.ಸು. ಕೃಷ್ಣಮೂರ್ತಿ, **ಉತ್ತರದ ಸಂತ ಪರಂಪರೆ,** ಪುಟ ೧೦೪.

೫೨. ಅದೇ, ಪುಟ ೧೧೯.

೫೩. ಷಣ್ಮುಖಯ್ಯ ಅಕ್ಕೂರಮಠ, **ಸೂಫಿ ಮತ್ತು ಶರಣರ ಅನುಭಾವ ಪಥ,** ಪುಟ ೧೬೮.

೫೪. ಅದೇ, ಪುಟ ೧೮೪.

೫೫. ಅದೇ, ಪುಟ ೨೬೧.

೫೬. ಮ.ಸು. ಕೃಷ್ಣಮೂರ್ತಿ, **ಸಿದ್ಧ ಸಾಹಿತ್ಯ,** ಪುಟ ೨೬೧.

೫೭. ಅದೇ, ಪುಟ ೨೬೬.

೫೮. ರಂಗಾರೆಡ್ಡಿ ಕೋಡಿರಾಂಪುರ(ಸಂ), **ತತ್ವಪದಗಳು,** ಪುಟ ೪೧೩.



ಅಧ್ಯಾಯ : ನಾಲ್ಕು

# ತುಂಗಭದ್ರಾ ನದಿ ಪ್ರಾಂತ್ಯದ ಅನುಭಾವಿಗಳ ಕುರಿತ ಚರಿತ್ರೆ

ಅಧ್ಯಾಯ : ನಾಲ್ಕು

# ತುಂಗಭದ್ರಾ ನದಿ ಪ್ರಾಂತ್ಯದ ಅನುಭಾವಿಗಳ ಕುರಿತ ಚರಿತ್ರೆ

ಬಹುಮನಿ ಆದಿಲ್‌ಶಾಹಿ ಮತ್ತು ವಿಜಯನಗರ ಸಾಮ್ರಾಜ್ಯಗಳ ನಡುವೆ ನಿರಂತರ ಯುದ್ಧಗಳು ಸಂಘರ್ಷಗಳು ನಡೆದಾಗ ಜನಸಾಮಾನ್ಯರು ತತ್ತರಿಸಿಹೋಗಿದ್ದರು. ರಾಜಕೀಯ ಬದಲಾವಣೆಯಿಂದಾಗಿ ನಾಯಕತ್ವವೇ ಇಲ್ಲದಂತಾಯಿತು. ಜನರಲ್ಲಿ ಆಸ್ತಿ ಅಧಿಕಾರ ಆಸೆಯಿಂದಾಗಿ ತಮ್ಮ ತಮ್ಮಲ್ಲಿಯೇ ಒಳಜಗಳಗಳಲ್ಲಿ ನಿರತರಾದರು. ಜನರು ಹಲವಾರು ಸಂಕಷ್ಟಗಳಿಗೀಡಾಗಿ ನೆಮ್ಮದಿಯ ಬಾಳನ್ನು ಕಾಣದಂತಾದರು. ಮನಸ್ಸಿನ ಸ್ಥೈರ್ಯವು ಕುಸಿದುಹೋಯಿತು. ಇಂಥ ಸಂದರ್ಭವು ಜನರಿಗೆ ಬದುಕಿನ ಮೇಲೆ ಜಿಗುಪ್ಸೆಯನ್ನು ಹುಟ್ಟಿಸಿತು. ಜನರ ಮನದಲ್ಲಿ ಲೌಕಿಕ ಬದುಕು ವೈರಾಗ್ಯವನ್ನು ಹುಟ್ಟುಹಾಕಿತು. ಹಾಗಾಗಿ ಸಂತರು ಜನಸಾಮಾನ್ಯರನ್ನು ವಿರಕ್ತಿಯೆಡೆಗೆ, ಅವರ ಮನಸ್ಸು ವಾಲುವಂತೆ ಪ್ರೇರೇಪಿಸಿದರು. ವಿರಕ್ತಿಯೆಂದರೆ ಜನರನ್ನು ಸಮಾಜವನ್ನು ತೊರೆದು ಹೋಗುವಂತಹ ಸನ್ಯಾಸವಲ್ಲ. ದೇಹ ಬಯಸುವ ಲೌಕಿಕದ ವೈಭೋಗದ ಜೀವನದ ಬಗೆಗಿನ ವಿರಕ್ತಿಯನ್ನು ಅವರ ಮನಸ್ಸು ತಾಳುವಂತೆ ಮಾಡಿದರು. ಸೂಫಿಗಳು, ಯೋಗಿಗಳು, ಅನುಭಾವಿಗಳು, ತತ್ವಪದಕಾರರು ಬಹಳ ಶ್ರಮವಹಿಸಿದವರಾಗಿದ್ದಾರೆ.

ಒಂದು ಕಡೆ ಅವನತಿ ಹೊಂದಿದ ಸಾಮ್ರಾಜ್ಯಗಳು; ಮತ್ತೊಂದು ಕಡೆ ಸಮಾಜದಲ್ಲಿ ಕಳ್ಳತನ, ಬರಗಾಲ, ಸಾಂಕ್ರಾಮಿಕ ರೋಗಗಳಿಂದ ತಲ್ಲಣಿಸಿದ ಕಾಲ ೧೭, ೧೮, ೧೯ನೆಯ ಶತಮಾನ. ಈ ಕಾಲದಲ್ಲಿ ಜನರಿಗೆ ನೆಮ್ಮದಿಯೆಂಬುದು ಕನಸಿನ ಮಾತಾಗಿತ್ತು. ಇಂಥ ಸಮಯದಲ್ಲಿ ಈ ಪ್ರಾಂತ್ಯದೊಳಗೆ ಬಹುಸಂಖ್ಯೆಯಲ್ಲಿ ಯೋಗಿಗಳು, ಆರೂಢರು, ಅನುಭಾವಿಗಳು, ತತ್ವಪದಕಾರರು ಕಾಣಿಸಿಕೊಂಡರು. ಇವರುಗಳು ಯಾರಲ್ಲಿಯೂ ಯಾವ ತಾರತಮ್ಯ ತೋರದೆ ಜನಸಾಮಾನ್ಯರಲ್ಲಿ ತಾವು ಸಾಮಾನ್ಯವಾಗಿ ಬೆರೆತು ಬದುಕುವ ಸರಳ ಮಾರ್ಗವೊಂದನ್ನು ತಿಳಿಸುತ್ತ ಅದರಂತೆ ಸಂತರು ಕೂಡ ಬಾಳುತ್ತಿದ್ದರು. ದೇಹ ಅಶಾಶ್ವತವಾದುದು. ಅದರ ಮೇಲಿನ ಮೋಹವನ್ನು ತ್ಯಜಿಸಿ ಶಾಶ್ವತವಾದ ನೆಮ್ಮದಿಯ ಬದುಕನ್ನು ಕಾಣಲು ಹೊಸತನವನ್ನು ಅವರ ಮನದಲ್ಲಿ ತುಂಬುತ್ತ ಅಲೌಕಿಕವಾದ ಕಡೆ ಜನಸಾಮಾನ್ಯರ ಮನಸ್ಸು ವಾಲುವಂತೆ ಮಾಡುವುದರ ಜೊತೆ ಅವರ ನೊಂದ ಮನಗಳಲ್ಲಿ ನೆಮ್ಮದಿಯ ನಿಟ್ಟುಸಿರನ್ನು ಬಿಡಲು ಪ್ರಯತ್ನಿಸುತ್ತಿದ್ದರು.

ಮುಂದೆ ೧೮, ೧೯ನೆಯ ಶತಮಾನದಲ್ಲಿ ಕಾಣಿಸಿಕೊಂಡ ಯೋಗಿಗಳು, ಅನುಭಾವಿಗಳು, ತತ್ವಪದಕಾರರು ತಮ್ಮ ತತ್ವಜ್ಞಾನದಿಂದ ಜನಸಾಮಾನ್ಯರ ಮೇಲೆ ಶಾಶ್ವತವಾದ ಪ್ರಭಾವ ಬೀರಿ ಪವಾಡ ಪುರುಷರಾಗಿ ನಿಂತರು. ತಾವು ಬದುಕಿದಾಗಿನಿಂದ ಮತ್ತು ದೈವಾಧೀನರಾದ ಮೇಲೂ ಜನಸಾಮಾನ್ಯರ ದೃಷ್ಟಿಯಲ್ಲಿ ದೇವರ ಸ್ಥಾನವನ್ನು ಪಡೆದುಕೊಂಡರು. ದೇವರಿಗಿಂತ ಈ ಸಂತರೇ ಹೆಚ್ಚಾಗಿ ನೆಲೆನಿಂತು ಪೂಜಿಸಿಕೊಳ್ಳುವಂಥ ದೈವಗಳಾಗಿ ಜನಸಾಮಾನ್ಯರ ಮನದಲ್ಲಿ ದೈವಗಳಾಗಿ ನೆಲೆನಿಂತರು. ಎಲ್ಲರಿಂದಲೂ ರಾಜ್ಯವನ್ನಾಳುವ ರಾಜರುಗಳಿಂದಲೂ ಪೂಜಿಸಿಕೊಳ್ಳುವ ಮತ್ತು ಗೌರವಿಸಿಕೊಳ್ಳುವಂಥವರಾದರು.

ಮಧ್ಯಕಾಲೀನ ಭಕ್ತಿ ಪಂಥದ ಅನುಭಾವಿಗಳಿಗೆ ಮೂಲ ಪ್ರೇರಣೆಯಾಗಿ ನಿಂತದ್ದು ಜನಸಾಮಾನ್ಯರ ಬದುಕು. ಅದನ್ನು ಹಸನುಗೊಳಿಸಬೇಕೆಂಬ ಹಂಬಲ ಹಾಗೂ ಜಡಗಟ್ಟಿದ ವ್ಯವಸ್ಥೆ, ಅದನ್ನು ಒಡೆದು ಹಾಕಿ ಸರ್ವಸಮಾನತೆಯ ಸುಂದರ ಸುಖಿಸಮಾಜವನ್ನು ನಿರ್ಮಿಸಬೇಕೆಂಬ ಉತ್ಕಟತೆ. ಹೀಗಾಗಿ ಅನುಭಾವ ಮಾರ್ಗದ ಎಲ್ಲಾ ಅನುಭಾವಿಗಳು ಗಹನವಾದ, ಗೂಢವಾದ ಪರತತ್ವದ ರಹಸ್ಯವನ್ನು ಬದುಕನ್ನು, ಬೆಡಗನ್ನು ಹೇಳಲು ಪ್ರಯತ್ನಿಸಿದ್ದಾರೆ.

ತಮ್ಮ ಸಾಧನೆಯಿಂದ ಸಿದ್ಧಿಗೇರಿದ ಮೇಲೆ ತಮ್ಮ ನಡೆ ನುಡಿಯಿಂದಲೇ ಶಾಶ್ವತ ಸುಖದ ಮಹತ್ವವನ್ನು ಸಾರುತ್ತ ತಮ್ಮ ಆತ್ಮೋನ್ನತಿಯ ಜೊತೆಗೆ ಸಮಾಜದ ಉನ್ನತಿಯನ್ನು ಬಯಸಿದವರಾಗಿದ್ದಾರೆ. ತಮ್ಮ ಅನುಭಾವಿಕ ವ್ಯಕ್ತಿತ್ವದಿಂದಲೇ ಜನಸಾಮಾನ್ಯರನ್ನು ತಮ್ಮೆಡೆಗೆ ಸೆಳೆದುಕೊಂಡು ಸರ್ವವರ್ಗದವರಿಂದ ಸರ್ವಧರ್ಮದವರಿಂದ, ಭಕ್ತಿಪೂರ್ವಕ ಮನ್ನಣೆ ಪಡೆದಿದ್ದಾರೆ.

ಜಾತಿ, ಮತ, ಧರ್ಮಗಳ ಎಲ್ಲೆಯನ್ನು ಮೀರಿದ ಇವರು ಹಣ, ಅಧಿಕಾರ, ಅಹಂಕಾರ, ಸತಿ, ಸುತ, ತಂದೆ, ತಾಯಿ, ಬಂಧು, ಬಳಗ ಮುಂತಾದ ಬದುಕಿನ ಸಂಘರ್ಷಗಳಿಂದ ದೂರವಾಗಿ ಅನುಭಾವಿಕ ಶಕ್ತಿಯ ಮುಂದೆ ಉಳಿದೆಲ್ಲವೂ ತೃಣಸಮಾನವೆಂದು ತಿಳಿದವರು.

ಲೌಕಿಕ ಜೀವನದ ಬಗ್ಗೆ ಜಿಗುಪ್ಸೆ ಹೊಂದಿದ್ದು ಜಗತ್ತಿನ ಸಂಕಟಗಳು, ಆಸೆ ನಿರಾಸೆಗಳು, ದುಃಖ-ದುಮ್ಮಾನಗಳು, ಚಂಚಲತೆ, ಅತೃಪ್ತಿ, ಅಸಮಾಧಾನ, ಅರ್ಥಹೀನ ಆಚರಣೆಗಳು ಇವುಗಳಿಂದ ಬೇಸತ್ತು ಸಾಮಾಜಿಕ ಜೀವನದ ಬಗ್ಗೆ ವಿಮುಖರಾಗಿದ್ದರು.

ಶಿವಶರಣರುಗಳಾದ ಕುರುಗೋಡು ನೀಲಮ್ಮ, ಗದ್ದಿಕೆರೆ ದೊಡ್ಡಬಸಪ್ಪ, ಬಳ್ಳಾರಿ ಮರಿಸ್ವಾಮಿ, ಸಿಂಧಿಗೇರಿ ಮಲ್ಲಪ್ಪ, ಕಾನಾಮಡುಗು ಶರಣಪ್ಪ, ಇವರೆಲ್ಲ ಪವಾಡ ಪುರುಷರಾಗಿ ಬಳ್ಳಾರಿ ಜಿಲ್ಲೆಯಲ್ಲಿ ಅಜರಾಮರರಾಗಿದ್ದಾರೆ.

ತತ್ವಪದಕಾರರುಗಳಾದ ತಿಕ್ಕಯ್ಯ, ಮೈಲಾರ ಬಸವಲಿಂಗ ಶರಣರು, ಮಲ್ಲಿಕಾರ್ಜುನ ಎತ್ತಿನಹಟ್ಟಿ, ಶಿಲವೇರಿ ಶಿವಪ್ಪ, ಓರೆಬಾಯಿ ಲಕ್ಷ್ಮಿದೇವಮ್ಮ,

ಸೂಫಿಗಳಾದ – ಶಾ ಮುಸ್ತಫಾ ಖಾದ್ರಿ, ಬಡೇ ಸಾಹೇಬ್ ಖಾದ್ರಿ ಕಂಪ್ಲಿ, ಅಹಮದ್ ಶಾ ಖಾದ್ರಿ (ಮೀರ್ ಆಲಂ ನವಾಜ್) ಹೊಸಪೇಟೆ, ಮಕ್ದುಂ ಜಾನಿ ಬಾಬಾ ಬಳ್ಳಾರಿ, ಸಾದಿಕ್ ವಲಿ ಶಾ ಖಾದ್ರಿ ಲೋಲಂಗರ್ ಉಜ್ಜನಿ, ಲಂಗರ್ ಶಾ ವಲಿ ಕುಡುತಿನಿ ಹೀಗೆ ಹಲವಾರು ಶರಣರು, ತತ್ವಪದಕಾರರು ಸೂಫಿಗಳೆಂಬ ಅನುಭಾವಿಗಳು ಈ ತುಂಗಭದ್ರಾ ನದಿ ಪ್ರಾಂತ್ಯದ ಬಳ್ಳಾರಿ ಜಿಲ್ಲೆಯಲ್ಲಿ ಕಾಣಸಿಗುತ್ತಾರೆ.

### ೪.೧ ಶರಣರ ಜೀವನ ಚರಿತ್ರೆ

#### ಶರಣೆ ಕುರುಗೋಡು ನೀಲಮ್ಮ

ಕುರುಗೋಡಿನ ಮಹಾನ್ ಶರಣೆ ನೀಲಮ್ಮ ಅಲೌಕಿಕ ಬದುಕನ್ನು ವರವಾಗಿ ಪಡೆದು ಜನ್ಮತಾಳಿದ್ದಳೆನ್ನುವಷ್ಟು ತನ್ನನ್ನು ಪಾರಮಾರ್ಥಿಕವಾಗಿ ಲೀನವಾಗಿಸಿಕೊಂಡಿದ್ದಳು. ನೀಲಮ್ಮನಿಗೆ ಅಲೌಕಿಕದ ಸೆಳೆತ ಚಿಕ್ಕವಯಸ್ಸಿನಿಂದಲೇ ಅಂಟಿಕೊಂಡಿತ್ತು. ಯಾವುದೇ ಸಂದರ್ಭಕ್ಕೆ ತಕ್ಕಂತೆ ತನ್ನನ್ನು ಆಧ್ಯಾತ್ಮದ ಜಗತ್ತಿನೆಡೆಗೆ ವಾಲಿದವಳು ಎನ್ನುವ ಹಾಗಿಲ್ಲ. ಜಾತಿ - ಮತಗಳನ್ನು ಮೀರಿ ತಾನು ಮಾಡಬೇಕಾದ ಕಾರ್ಯ ಸಾಧಿಸಬೇಕಾದ ಸಿದ್ಧಿಯನ್ನು ಪಡೆದು ಸಮಾಜದ ಕಷ್ಟ ನಿವಾರಣೆಯಲ್ಲಿ ತಲ್ಲೀನಳಾದವಳು ಕುರುಗೋಡು ನೀಲಮ್ಮ. ಮಹೋನ್ನತ ಸಾಧನೆಯಿಂದ ಶರಣೆಯಾದ ಇವಳನ್ನು ಬರಿ ನೀಲಮ್ಮನೆಂದು ಕರೆಯದೆ ಕುರುಗೋಡು ಎಂಬ ಹೆಸರನ್ನು ಸೇರಿಸಿ ಕುರುಗೋಡು ನೀಲಮ್ಮನೆಂದು ಕರೆದರು. ನೀಲಮ್ಮನವರು ತನ್ನ ಶರಣತ್ವದಿಂದ ಕುರುಗೋಡಿನ ಜನರ ದುಃಖ ದುಮ್ಮಾನಗಳನ್ನು ನಿವಾರಿಸಿ ಉದ್ಧರಿಸಿದ್ದಾರೆ. ಅಲೌಕಿಕ ಶಕ್ತಿಯು ಇವಳಲ್ಲಿ ಅಪಾರವಾಗಿದ್ದಿತ್ತು.

ಯಾವುದೇ ಒಬ್ಬ ಅನುಭಾವಿಯನ್ನು ನಾವು ನೋಡಿದಾಗ ಅವರು ಆಧ್ಯಾತ್ಮ, ಯೋಗ, ಧ್ಯಾನ ಇತ್ಯಾದಿ ಸಾಧನೆಗಳಿಂದ ಸಿದ್ಧಿಸಿದ ಶಕ್ತಿಯನ್ನು ಸಮಾಜದಲ್ಲಿನ ಜನಸಾಮಾನ್ಯರ ಕಷ್ಟಕ್ಕಾಗಿ ಬಳಸುತ್ತಾರೆ. ಜನರಲ್ಲಿ ಒಬ್ಬರಾಗಿ ಸ್ಪಂದಿಸುತ್ತಾರೆ. ಆಗುಹೋಗುಗಳ ಅರಿವು ಈ ಅನುಭಾವಿಗಳಿಗೆ ಇರುತ್ತದೆ. ಶರಣೆ ನೀಲಮ್ಮ ಕೂಡ ಒಬ್ಬ ಅನುಭಾವಿ ಶರಣೆಯಾಗಿದ್ದರಿಂದ ತಾನು ನೆಲೆಸಿದ ಕುರುಗೋಡಿನ ಜನರ ಕಷ್ಟಗಳಿಗೆ ಸ್ಪಂದಿಸಿದ್ದಾಳೆ. ತನ್ನ ಶರಣತ್ವ ಶಕ್ತಿಯನ್ನು ಕುರುಗೋಡಿನ ಜನರೊಂದಿಗೆ ತೋರ್ಪಡಿಸಿದ್ದಾಳೆ. ತನ್ನ ಜೀವನದಲ್ಲಿ ನಡೆದ ಒಂದು ಘಟನೆಯಿಂದ ಪ್ರಭಾವಿತಳಾದ ನೀಲಮ್ಮ ಶರಣರ ಮತ್ತು ಸಾಧಕರೊಂದಿಗಿನ ಸಮನಾದ ಶಕ್ತಿಯಲ್ಲಿ ಸಮನಾದ ಸ್ಥಾನ ಪಡೆದ ನೀಲಮ್ಮ ಮಹಾನ್ ಯೋಗ ಸಾಧಕರ ಸರದಿಯಲ್ಲಿದ್ದವಳು. ಈ ಶರಣೆ ನೀಲಮ್ಮನ ಜೀವನ ಚರಿತ್ರೆ ಮತ್ತು ಅವಳು ಹೇಗೆ ಶರಣೆಯಾಗಿ ಸಾಧನೆಯ ಸಿದ್ಧಿಯನ್ನು ಪಡೆದಳೆಂಬುದು ತಿಳಿಯುವುದು ಕುತೂಹಲದ ಸಂಗತಿ.

**ಜೀವನ ಚರಿತ್ರೆ:** ನೀಲಮ್ಮನ ಮೂಲ ಹೆಸರು ಕೆಂಚಮ್ಮ. ಹುಟ್ಟಿದ ಊರು ಸಿಂದಿಗೇರಿ. ಇವಳು ಹುಟ್ಟಿದ ಮನೆತನದ ಹೆಸರು ಲಾಳಗೌಡರು. ಇವಳಿಗೆ ಒಬ್ಬ ಅಣ್ಣ ಕೂಡ ಇದ್ದನೆಂಬ

ಮಾಹಿತಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆಯಿತು. ತಂದೆಯ ಹೆಸರು ಕೆಂಚನ ಗೌಡ; ತಾಯಿ ಪೋರಮ್ಮ; ಸಿಂಧಿಗೇರಿಯಲ್ಲಿ ನೀಲಮ್ಮ ಅಂದರೆ ಕೆಂಚಮ್ಮನವರ ಮನೆ ತುಂಬ ದೊಡ್ಡದಾಗಿರುವುದರಿಂದ ಇವರು ಅನುಕೂಲಸ್ಥರಾಗಿದ್ದರೆಂಬುದು ತಿಳಿದುಬರುತ್ತದೆ. ಕೆಂಚಮ್ಮಳಿಗೆ ಚಿಕ್ಕಂದಿನಲ್ಲಿಯೇ ಆಧ್ಯಾತ್ಮ, ಪಾರಮಾರ್ಥದ ಬಗ್ಗೆ ಒಲವಿತ್ತೆಂಬುದು ತಿಳಿದುಬರುತ್ತದೆ. ಇವಳ ಗುಣ ಜನಸಾಮಾನ್ಯರಿಗಿಂತ ವೈಶಿಷ್ಟ್ಯತೆಯುಳ್ಳದ್ದಾಗಿತ್ತು. ನೀಲಮ್ಮ(ಕೆಂಚಮ್ಮ)ನಿಗೆ ಚಿಕ್ಕವಯಸ್ಸಿನಲ್ಲಿಯೇ ಪುರಾಣ ಪ್ರವಚನ ಕೀರ್ತನೆಗಳಲ್ಲಿ ಒಲವಿದ್ದಿತು. ತಮ್ಮ ಊರಿನಲ್ಲಿ ನಡೆಯುವ ಪುರಾಣ - ಪ್ರವಚನಗಳನ್ನು ನೋಡಲು, ಕೇಳಲು ಮನಸ್ಸು ತುಂಬಿ ಸಂತೋಷದಿಂದ ಪಾಲ್ಗೊಳ್ಳುತ್ತಿದ್ದಳು. ಶಿವಶರಣರ ಬಗ್ಗೆ ಕೆಂಚಮ್ಮನಿಗೆ ಎಲ್ಲಿಲ್ಲದ ಪ್ರೀತಿ - ಭಕ್ತಿ. ಕೆಂಚಮ್ಮನಿಗೆ ಶಿವಶರಣತ್ವದ ಭಕ್ತಿ - ಪ್ರೀತಿ ಮೂಡಿದ್ದು ಬಸವ ಪುರಾಣದ ಮೂಲಕವೆಂದು ಹೇಳಬಹುದು. ಕೆಂಚಮ್ಮ ಎಲ್ಲ ಮಕ್ಕಳಂತೆ ಓಡಾಡಿಕೊಂಡು ಬೆಳೆಯುವ ವಯಸ್ಸಿನಲ್ಲಿಯೇ ಧಾರ್ಮಿಕತೆ ಎಂದರೇನು? ಅದನ್ನು ಹೇಗೆ ಅನುಸರಿಸುವುದು? ಅದನ್ನು ಹೇಗೆ ಗೌರವಿಸುವುದೆಂಬುದನ್ನು ಅತಿ ಚಿಕ್ಕ ವಯಸ್ಸಿನಲ್ಲಿ ಬೆಳೆಸಿಕೊಂಡಿದ್ದಳು. ಇಂಥ ವಿಶಿಷ್ಟವಾದ ಸ್ವಭಾವ ಕೆಂಚಮ್ಮನಿಗೆ ಚಿಕ್ಕಂದಿನಲ್ಲಿಯೇ ಇದ್ದಿತು.

ಆಧ್ಯಾತ್ಮಿಕವಾಗಿ ತನ್ನನ್ನು ತೊಡಗಿಸಿಕೊಂಡು ಹೇಗೆ ಈ ಮಾರ್ಗದಲ್ಲಿ ಸಿದ್ಧಿಯನ್ನು ಪಡೆಯಬೇಕೆಂಬುದು ಕೆಂಚಮ್ಮನ ಮನಸ್ಸಿಗೆ ಬಂದಿತು. ಹತ್ತು ವರ್ಷದೊಳಗಿನ ಬಾಲಕಿಯಾಗಿರುವಾಗಲೇ ಅವಳು ಒಮ್ಮೆ ತನ್ನ ಸ್ನೇಹಿತೆಯರೊಂದಿಗೆ ಊರಿನಿಂದಾಚೆ ಇರುವ ಹೊಲಕ್ಕೆ ಹೋಗುತ್ತಿದ್ದಾಗ ಅಲ್ಲಿ ದಾರಿಯಲ್ಲಿ ಬಸವಣ್ಣ ಭವ್ಯವಾದ ಶಿಲ್ಪವನ್ನು ನೋಡಿ ಬೆಕ್ಕಸ ಬೆರಗಾಗುತ್ತಾಳೆ. ತಾನು ಪುರಾಣದಲ್ಲಿ ಕೇಳುತ್ತಿದ್ದ ಚಿತ್ರ ನೆನಪಾಗಿ ಒಳಮನಸ್ಸಿನಲ್ಲಿ ಏನೋ ಒಂದು ತುಡಿತ. ಈ ತುಡಿತದ ಮಿಡಿತವೇ ಬಹುಶಃ ಇವಳನ್ನು ಆಧ್ಯಾತ್ಮದ ಕಡೆಗೆ ಒಲಿಯಿತು. ಮನಸ್ಸು ಸಾಧನೆಯ ಹಾದಿಯಲ್ಲಿ ತೊಡಗಿಸಿಕೊಂಡಿರಬೇಕೆಂಬುದು ಅರ್ಥವಾಗುತ್ತದೆ.

ಕೆಂಚಮ್ಮನ ಆಧ್ಯಾತ್ಮ ಸಾಧನೆಗೆ ಸಾಕ್ಷಿಯೆಂಬಂತೆ ಒಂದು ಸ್ಫೂರ್ತಿದಾಯಕವಾದ ಘಟನೆಯೊಂದಿದೆ. ಒಮ್ಮೆ ಸಿಂಧಿಗೇರಿಯ ಕೆಂಚಮ್ಮನ ಮನೆಯ ಮುಂದೆ ಬಸವಣ್ಣ ಜಂಗಮ ವೇಷಧಾರಿಯಾಗಿ ಭಿಕ್ಷೆಗೆಂದು ಹೋಗಿ ಆಕೆಯ ಮನೆಬಾಗಿಲಲ್ಲಿ ನಿಲ್ಲುತ್ತಾನೆ. ಕೆಂಚಮ್ಮನಿಗೆ ಅವಳ ಪೋರಮ್ಮ ಸ್ನಾನ ಮಾಡಿಸುತ್ತಿರುವಾಗ ತಾಯಿಯೇ ಹೊರಗೆ ಬಂದು ಭಿಕ್ಷೆ ಹಾಕಿ ಒಳಗೆ ಹೋಗುತ್ತಾಳೆ. ಸ್ನಾನ ಮಾಡಿಸುತ್ತಿರುವ ತನ್ನ ಮಗಳ ಬಳಿ ಹೋದರೆ ಅಲ್ಲಿ ಮಗಳು ಮಂಗಮಾಯ. ಪೋರಮ್ಮ ಮತ್ತು ಆಕೆಯ ಗಂಡ ಕೆಂಚನಗೌಡ ಎಲ್ಲಿ ನೋಡಿದರೂ ಅವಳ ಸುಳಿವೇ ಇಲ್ಲ. ಯಾರನ್ನು ಕೇಳಿದರೂ ಗೊತ್ತಿಲ್ಲ ನೋಡಿಲ್ಲವೆಂಬ ಉತ್ತರ. ಕೊನೆಗೆ ಈ ಭಿಕ್ಷೆಗೆಂದು ಬಂದಿದ್ದವನೇ ಕರೆದುಕೊಂಡು ಹೋಗಿರಬೇಕೆಂಬ ಅನುಮಾನ ಬಂದು ತಂದೆ ತಾಯಿಗಳು ಊರಿನವರ ಮುಂದೆ ಬಂದು ಹೇಳಿದಾಗ ಎಲ್ಲ ಊರಿನ ಜನರೆಲ್ಲ ಹೌದೆಂಬ ಉತ್ತರವನ್ನೂ ಕೊಡುತ್ತಾರೆ. ಕೊನೆಗೆ ಕೆಂಚಮ್ಮ ಕುರುಗೋಡಿನಲ್ಲಿರುವುದು ಗೊತ್ತಾಗಿ ಪೋರಮ್ಮ-

ಕೆಂಚನಗೌಡ ಇವಳನ್ನು ಕರೆತರಲು ಅಲ್ಲಿಗೆ ಹೋದಾಗ ಅವಳು ಇವರು ಜೊತೆ ಬರಲು ಒಪ್ಪುವುದಿಲ್ಲ. ಈ ಸಮಯದಲ್ಲಿ ಕೆಂಚಮ್ಮನ ತಾಯಿ ಪೋರಮ್ಮ ಶಾಪ ಹಾಕುತ್ತಾಳೆ. ಕೆಂಚಮ್ಮ ತಾಯಿಯೊಂದಿಗೆ ಬರಲು ಒಪ್ಪದೆ ಹೀಗೆ ಹೇಳುತ್ತಾಳೆ.

"ನಾನು ಬರುವುದಿಲ್ಲ, ಬಸವನೇ ನನ್ನ ಪತಿ. ಕುರುಗೋಡಿನಲ್ಲಿಯೇ ಇನ್ನು ಮುಂದೆ ನನ್ನ ವಾಸ ಎನ್ನುತ್ತಾಳೆ. ನೊಂದ ತಾಯಿ ಪೋರಮ್ಮ ಬಸವಣ್ಣನೊಂದಿಗೆ ಸಂವಾದಿಸುತ್ತಾಳೆ. ಕೊನೆಗೆ ತನ್ನ ಸಂವಾದ ನಿರುಪಯುಕ್ತವಾದಾಗ ಬಸವಣ್ಣನಿಗೆ ಶಾಪ ಕೊಟ್ಟು ತಿಳಿಮನಸ್ಸಿನಿಂದ ಸಿಂಧಿಗೇರಿಗೆ ಹಿಂದಿರುಗುತ್ತಾಳೆ. ಇಲ್ಲಿಗೆ ಕೆಂಚಮ್ಮನ ವಿಷಯದಲ್ಲಿ ಸಿಂಧಿಗೇರಿ ಮತ್ತು ಈಕೆಯ ಮನೆಯವರ ಪಾತ್ರ ಮುಗಿಯಿತು."[೧]

ಸಿಂಧಿಗೇರಿಯಿಂದ ಬಂದು ಕುರುಗೋಡಿನಲ್ಲಿ ನೆಲೆಸಿದ ಮೇಲೆ ಕುರುಗೋಡಿನ ಮಗಳಾಗಿ ಕುರುಗೋಡು ನೀಲಮ್ಮ ಎಂಬ ಹೆಸರಿನಿಂದ ಜನ ಕರೆಯಲು ಪ್ರಾರಂಭಿಸಿದರು. ಹಾಗಾದರೆ ಕೆಂಚಮ್ಮ ನೀಲಮ್ಮನಾದ ಪರಿ ಹೇಗೆ ಎಂಬುದನ್ನು ಅರಿಯಲೇ ಬೇಕು. ಕೆಂಚಮ್ಮಳು ಆಧ್ಯಾತ್ಮದಿಂದ ಪಡೆದ ಭಕ್ತಿಯ ಶಕ್ತಿಯು ತುಂಬ ಪ್ರಭಾವ ಪಡೆದುದಾಗಿತ್ತು ತನ್ನ ಈ ಭಕ್ತಿಯೆಂಬ ಶಕ್ತಿಯಿಂದ ಕುರುಗೋಡಿನಾದ್ಯಂತ ಪ್ರಸಿದ್ಧಿಯನ್ನು ಪಡೆದಳು. ಇವಳಲ್ಲಿ ಮೌನವೇ ಮಾತಾಗಿತ್ತು. ಹೆಚ್ಚಾಗಿ ಮಾತನಾಡುತ್ತಿರಲಿಲ್ಲ.

"ಹೊಸಪೇಟೆ ಬಳ್ಳಾರಿಗಳಲ್ಲಿದ್ದ ಮಠಗಳಿಗೆ ಅಧಿಪತಿಯಾಗಿದ್ದ ಹೇಮಕೂಟ ಪೀಠ ನಿರಾಭಾರಿ ದೇಶಿಕಾಚಾರ್ಯರಾದ ಜಗದ್ಗುರು ದ್ವಿತೀಯ ಶಂಭುವೆನಿಸಿದ ಕಪ್ಪಿನ ಚನ್ನಬಸವ ಮಹಾಸ್ವಾಮಿಗಳು ಕುರುಗೋಡಿನ ಈ ಕೆಂಚಮ್ಮನ ಯೋಗ ವ್ಯಕ್ತಿತ್ವವನ್ನು ಅರಿತು ಆಕೆಗೆ ಇಷ್ಟಲಿಂಗ ಸಂಸ್ಕಾರ ನೀಡಿ, ದೊಡ್ಡ ಬಸವೇಶ್ವರನ ಹಿಂದೆ ಇದ್ದ ಬೇವಿನ ಮರದಡಿಯಲ್ಲಿ ಪೂಜಾದಿ ಆಚರಣೆಗಳಿಗೆ ಅನುಕೂಲ ಮಾಡಿ ಕೆಂಚಮ್ಮನಿಗೆ "ನೀಲಮ್ಮ" ಎಂದು ಪುನರ್ ನಾಮಕರಣ ಮಾಡುತ್ತಾರೆ."[೨]

ನೀಲಮ್ಮಳ ಭಕ್ತಿಯ ಸ್ವರೂಪವನ್ನು ಕಂಡ ಜನ ಆಕೆಗೆ ಶರಣು ಹೋಗಿದ್ದರು. ನೀಲಮ್ಮಳಲ್ಲಿದ್ದ ಭಕ್ತಿಯ ಶಕ್ತಿಯ ಮಹಿಮೆಯನ್ನು ಕಣ್ಣಾರೆ ಕಂಡು ಜನರೆಲ್ಲ ಮೂಕವಿಸ್ಮಿತರಾಗಿ ಹೋಗಿದ್ದಾರೆ.

**ಮಹಿಮೆಯ ಸ್ವರೂಪ:** ನೀಲಮ್ಮನ ಪವಾಡ ಶಕ್ತಿಯನ್ನು ಕಣ್ಣಾರೆ ಕಂಡ ಮುದ್ದಾಪುರದ ಭಕ್ತರು ಈಕೆಯನ್ನು ಹೊಗಳುತ್ತ ಭಯ - ಭಕ್ತಿಯಿಂದ ಪೂಜಿಸತೊಡಗಿದರು. ಕುರುಗೋಡಿಗೆ ಅತೀ ಸಮೀಪದಲ್ಲಿರುವ ಮುದ್ದಾಪುರ ಎಂಬ ಊರಿಗೆ ನೀಲಮ್ಮ ಹೋಗಿ ಬರುತ್ತಿದ್ದಳು. ನೀಲಮ್ಮನನ್ನು ಪೂಜಿಸುತ್ತಿದ್ದ ಆ ಊರಿನ ಗೌಡರಾದ ಮುಕ್ಕನಗೌಡರು ಮಠವನ್ನು ಕಟ್ಟಿಸುತ್ತಾರೆ. ಇದನ್ನು ಕುರುಗೋಡು ನೀಲಮ್ಮನ ಮಠವೆಂದು ಹೇಳುತ್ತಾರೆ. ನೀಲಮ್ಮನವರು ಕುರುಗೋಡಿನಿಂದ ಮುದ್ದಾಪುರಕ್ಕೆ ಎತ್ತಿನ ಮೇಲೆ ಕುಳಿತು ಸವಾರಿ ಮಾಡುತ್ತಿದ್ದರು. ಈ ಸವಾರಿ ಮಾಡುವಾಗ ನೀಲಮ್ಮನವರು ಎತ್ತಿನ ಮೇಲೆ ಕುಳಿತಿರುವುದು ಕಾಣಿಸುತ್ತಿರಲಿಲ್ಲ. ಎತ್ತು ಹೋಗುತ್ತಿರುವುದೊಂದೇ ಕಾಣಿಸುತ್ತಿತ್ತು. ಅದರ ಕಾಲಿಗೆ ಕಟ್ಟಿದ ಗೆಜ್ಜೆಯ ಶಬ್ದದಿಂದ ಮಾತ್ರ ನೀಲಮ್ಮನ ಸವಾರಿ

ಹೊರಟಿರುವುದು ತಿಳಿಯುತ್ತಿತ್ತು. ಎತ್ತಿನ ಮೇಲೆ ಕುಳಿತು ಸವಾರಿ ಮಾಡುವಾಗ ಎತ್ತಿನ ಮೇಲೆ ಕುಳಿತಿರುವ ನೀಲಮ್ಮ ಜನರ ಕಣ್ಣಿಗೆ ಕಾಣಿಸುತ್ತಿಲ್ಲವೆಂದರೆ ಅದು ಒಂದು ಪವಾಡವೇ ಎಂದು ಜನರು ನಂಬಿದ್ದರು.

"ಒಮ್ಮೆ ಸೊರಟೂರು ದೇಶಗತಿಯವರೊಂದಿಗೆ ಕೆಲವು ತಾತ್ವಿಕ ಕಾರಣಗಳಿಂದ ನೀಲಮ್ಮ ಮನಸ್ತಾಪ ತಾಳುತ್ತಾಳೆ. ಅದರ ಪರಿಣಾಮವಾಗಿ ಸೊರಟೂರು ದೇಶಗತಿ ಹಾನಿಯನ್ನು ಅನುಭವಿಸುತ್ತದೆ. ಈಕೆಯ ಮಹತ್ವವನ್ನು ಅರಿತ ದೇಶಗತಿ ಮನೆತನದ ಜಯಂತಿ ಬಾಯಿ ಎನ್ನುವ ಮಹಿಳೆ ಕದಡಿಯಲ್ಲಿ ಸುಮಾರು ಎರಡೂವರೆ ಎಕರೆ ವಿಸ್ತಾರದ ಪ್ರಶಸ್ತ ಜಾಗವೊಂದನ್ನು ನೀಡುತ್ತಾಳೆ. ಅಲ್ಲಿ ಈಗ ವಿಶಾಲ ಮಠವೊಂದು ಸ್ಥಾಪಿತವಾಗಿದ್ದು, ಆ ಮಠಕ್ಕೆ ಕುರುಗೋಡು ನೀಲಮ್ಮನ ಮಠವೆಂದು ಕರೆಯಲಾಗುತ್ತಿದೆ."[೩]

ಗೆಣಕಿಹಾಳದಲ್ಲಿ ಕಣ್ಣು ಹೋದವರಿಗೆ ಕಣ್ಣು ಬರಿಸುವಳು. ಕಲ್ಲುಕಂಬದಾಗ ಸತ್ತಿರುವ ಕೂಸನ್ನು ಬದುಕಿಸಿ ಮರುಜನ್ಮ ನೀಡುವಳು. ಇನ್ನು ಅನೇಕರಿಗೆ ಆಶೀರ್ವಾದವನ್ನು ಮಾಡಿರುವಳು. "ಬಳ್ಳಾರಿ ಗಡಿಗೆ ಪರಸಪ್ಪನವರಿಗೆ, ಸಕ್ಕರಿ ಕರಡೆಪ್ಪನವರಿಗೆ ಗೋಜನೂರು ಭರಮಪ್ಪ, ಸರಾಫದ ಶಿವಪ್ಪ, ಕುರುಬರ ಭೀಮಪ್ಪ, ಹೊಲೆಯರ ಗಿರಿಯಪ್ಪರಿಗೆ ವರವ ನೀಡಿ ಹರಸಿದಳು. ಸಂಶೀ, ಮಾಗಳ, ಹುಯಿಲಗೋಳ ಜನರಿಗೆ ವರವನ್ನು ಕೊಡುವಳು. ಬನದಟ್ಟಿಯ ಬ್ರಾಹ್ಮಣ ಮಾಧವರಾಯನಿಗೆ ಮಕ್ಕಳ ಫಲ ನೀಡುವಳು, ಗುತ್ತಿಗನೂರಿನಾಗ ಬರಡ ಎಮ್ಮೆಗಳಿಗೆ ಫಲವಂತಿಕೆ ನೀಡಿ ಹಾಲಿನ ಹೊಳೆ ಹರಿಸುವಳು."[೪]

ನೀಲಮ್ಮನ ಶರಣತ್ವವನ್ನು ತಿಳಿದಿದ್ದರೂ ಅವಳು ಶರಣೆ ಎಂಬುದನ್ನು ಮರೆತು ಅವಳ ಚೆಲುವಿಗೆ ಮನಸೋತ ಪುರುಷನು ಅವಳನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದ್ದಾನೆ. ಸಿಂಧಿಗೇರಿಯಿಂದ ಕುರುಗೋಡಿಗೆ ನೀಲಮ್ಮ ಬಂದ ನಂತರ ಕುರುಗೋಡಿನ ಗುಹೆಯೊಂದರಲ್ಲಿ ಸದಾ ಧ್ಯಾನ, ಆಧ್ಯಾತ್ಮದಲ್ಲಿ ತನ್ನನ್ನು ತೊಡಗಿಸಿಕೊಂಡು ಮಹಾನ್ ಶರಣೆಯೆನಿಸಿಕೊಂಡಳು. ಇವಳ ಶರಣತ್ವವನ್ನು ಪರೀಕ್ಷಿಸಲು ಹಂಪೆಯ ದಂಡನಾಯಕ ನೀಲಮ್ಮಳಿಗೆ ಪ್ರಸಾದವೆಂದು ಮಾಂಸವನ್ನು ತಟ್ಟೆಯಲ್ಲಿಟ್ಟು ಮುಚ್ಚಿ ಕಳುಹಿಸಿಕೊಡುವನು. ಅದನ್ನು ತನ್ನ ದಿವ್ಯದೃಷ್ಟಿಯಿಂದ ಕಂಡ ಅದನ್ನು ತಂದವರು ತೆಗೆದು ನೋಡುವಷ್ಟರಲ್ಲಿ ಹಾರವನ್ನಾಗಿಸಿದಳು. ನೀಲಮ್ಮಳಲ್ಲಿರುವ ಶರಣತ್ವವು ಭಗವಂತನ ಮೆಚ್ಚುಗೆಯನ್ನು ಪಡೆದುದಾಗಿತ್ತು.

ಈ ಮಹಾನ್ ಸಾಧ್ವಿ ನೀಲಮ್ಮ ತನ್ನ ಸಾಧನೆಯಿಂದ ಬಳ್ಳಾರಿ ಜಿಲ್ಲೆ ಮಾತ್ರವಲ್ಲದೆ ಗದಗ ಪ್ರದೇಶದ ಕದಡಿಯಲ್ಲಿಯೂ ಕೂಡ ಹೆಸರುವಾಸಿಯಾಗಿರುವಳು. ಎರಡು ಜಿಲ್ಲೆಯ ಪ್ರದೇಶಗಳಲ್ಲಿ ತನ್ನದೇ ಆದ ವೈಶಿಷ್ಟ್ಯತೆಯಿಂದ ಭಕ್ತರನ್ನು ಪಡೆದು ಪೂಜಿಸಿಕೊಳ್ಳುತ್ತಿದ್ದಾಳೆ.

ನೀಲಮ್ಮ ತಾನು ನೆಲೆಸಿದ ಊರಿನಲ್ಲಿ ತನ್ನನ್ನು ನಂಬಿ ಬಂದ ಭಕ್ತರಿಗೆ ಒಳಿತನ್ನುಂಟು ಮಾಡಿದ್ದಾಳೆ. ಆದರೆ ಯಾವತ್ತೂ ಯಾರಿಗೂ ರೂಪವನ್ನು ತೋರಿದವಳಲ್ಲ. ತಾನಿರುವ ಸ್ಥಳದಲ್ಲಿ ತನ್ನ ಮುಂದೆ ಪರಧಿಯನ್ನು ಹಾಕಿ ಅದರಿಂದಲೇ ಮಾತನಾಡುತ್ತಿದ್ದಳು. ನೀಲಮ್ಮನನ್ನು ನೋಡಬಯಸಿದ ಕೊಟ್ಟೂರು ಸ್ವಾಮಿಗೆ ಕಣ್ಣು ಹೋಗಲೆಂದು ಶಾಪವಿಟ್ಟಳು. ಇಲ್ಲಿ ಅರ್ಥೈಸಿಕೊಳ್ಳುವ ಒಂದು ಅಂಶವೆಂದರೆ ತಾನು ನಂಬಿದ, ಶರಣುಹೋದ ಭಗವಂತನಿಗೆ ಮಾತ್ರ ತನ್ನ ರೂಪ ನೋಡಲು ಮೀಸಲು. ವಿಕೃತ ಮನಸ್ಸಿನ ಕಾಮನೆಯ ಆಶಯ ಕಣ್ಣುಗಳ ಮನುಜರು ತನ್ನ ರೂಪ ನೋಡಲು ಅರ್ಹರಲ್ಲವೆಂಬ ತನ್ನ ಶರಣತ್ವವನ್ನು ಎತ್ತಿ ಜನತೆಗೆ ತೋರಿಸಿದ ಮಹಾನ್ ಶರಣೆ ಈ ನೀಲಮ್ಮ. ನೀಲಮ್ಮನವರು ಯಾರ ಕಣ್ಣಿಗೆ ಕಾಣದಿರುವುದಕ್ಕೆ ಬಲವಾದ ಶಕ್ತಿ ಆಕೆಯಲ್ಲಿತ್ತೆಂಬ ಮಾಹಿತಿ ದೊರೆಯುತ್ತದೆ. ಅದೆಂದರೆ "ವ್ಯೋಮಕಾಯ ಸಿದ್ಧಿಯನ್ನು ತನ್ನ ಯೋಗ ಸಾಧನೆಯಿಂದ ಸಂಪಾದಿಸಿರಬಹುದೆನಿಸುತ್ತದೆ. ಶಿವಯೋಗ ನಿಷ್ಠಳೂ, ವಿರಕ್ತ ಗುಣವಂತೆಯೂ ಆಗಿದ್ದ ನೀಲಮ್ಮನಿಗೆ ಇದು ಅಸಾಧ್ಯವೇನೂ ಅಲ್ಲ"[೫]

ಒಬ್ಬ ಸಾಧಕನು ತಾನೊಬ್ಬ ಸಾಧ್ವಿ ಸಿದ್ಧಿಯನ್ನು ಪಡೆದಿರುವವನೆನೆಸಿಕೊಳ್ಳಲು ಅವನಲ್ಲಿರುವ ಸಾಧನೆಯ ಶಕ್ತಿಯೇ ಕಾರಣ. ಆ ಶಕ್ತಿಯಿಂದಲೇ ತನ್ನನ್ನು ನಂಬಿದ ಜನರಿಗೆ ಅಭಿವೃದ್ಧಿಯ ಭಾಗ್ಯವನ್ನು ಕರುಣಿಸುತ್ತಿದ್ದ. ನೀಲಮ್ಮ ಕೂಡ ಇಂಥ ಶಕ್ತಿಯನ್ನು ಪಡೆದಿದ್ದಳು. ಅವಳ ಈ ವ್ಯೋಮಕಾಯ ಯೋಗ ಸಿದ್ಧಿಯಿಂದ ಮಾಯಾವಿಯಾಗಿ ಯಾರಿಗೂ ಕಾಣಿಸುತ್ತಿರಲಿಲ್ಲ. ಇಂಥ ಸಾಧನೆಯನ್ನು ಅಲ್ಲಮಪ್ರಭು ಕೂಡ ಪಡೆದಿದ್ದರೆಂಬುದು ತಿಳಿದುಬರುತ್ತದೆ. ಇವರ ಸಮನಾದ ವಿದ್ಯೆಯನ್ನು ಕಲಿತು ನೀಲಮ್ಮ ಒಬ್ಬ ಮಹಾನ್ ಶರಣೆಯಾಗಿ ಭಕ್ತರ ಭಕ್ತಿಯನ್ನು ಪಡೆದಿದ್ದಳು.

**ಶರಣ ಸಿಂಧಿಗೇರಿ ಮಲ್ಲಪ್ಪ**

ದಿವ್ಯ ತಪಸ್ವಿ ಯೋಗ ಸಾಧಕ, ಮಹಾಪುರುಷ ಶಿವಯೋಗಿ ಸಿಂಧಿಗೇರಿ ಮೆಲ್ಲಪ್ಪ ಶರಣರು ಗುರು ಗಾದಿಲಿಂಗಪ್ಪನವರ ಅನುಗ್ರಹದಿಂದ ಗುರುಬೋಧನೆಯನ್ನು ಪಡೆದವರು. ತನ್ನ ಸಾಧನೆಯಿಂದ ಸಿದ್ಧಿಯನ್ನು ಪಡೆದು ಮಹಾನ್ ಮಹಿಮೆಯುಳ್ಳ ಶರಣನಾಗಿ ತಾನಿದ್ದ ಊರು ಮತ್ತು ತನ್ನ ಸುತ್ತಮುತ್ತಲಿನೂರಿನ ಜನರನ್ನು ಮತ್ತು ನಂಬಿದ್ದ ಭಕ್ತರನ್ನು ಉದ್ಧರಿಸಿದ್ದಾರೆ.

**ಜೀವನ ಚರಿತ್ರೆ**

ಬಳ್ಳಾರಿ ಜಿಲ್ಲೆಯಲ್ಲಿ ಬರುವ ಒಂದು ಪುಟ್ಟ ಗ್ರಾಮವಾದ ಸಿಂಧಿಗೇರಿಯಲ್ಲಿ ನೆಲೆಸಿದ್ದ ಗುಂಡಪ್ಪ ಮತ್ತು ನೀಲಮ್ಮ ಎಂಬ ದಂಪತಿಗಳಿಬ್ಬರು ದೈವಭಕ್ತರು. ಕುಂಬಾರ ಮನೆತನದವರಾದ ಇವರು ಕುಲಕಸುಬಾದ ಮಡಿಕೆ ಮಾಡುವುದರ ಜೊತೆಯಲ್ಲಿಯೇ ಕೃಷಿ ಕೆಲಸವನ್ನು ಮಾಡುತ್ತಿದ್ದರು. ತಮಗೆಷ್ಟೇ ಕಷ್ಟವಿದ್ದರೂ ಮತ್ತೊಬ್ಬರ ಕಷ್ಟವನ್ನು ನೋಡಿ ಮರುಗುವಂಥ ಮನೋಭಾವವುಳ್ಳವರಾಗಿದ್ದರು. ತಮಗಿದ್ದದ್ದರಲ್ಲಿಯೇ ಇತರರಿಗೂ ನೀಡಿ ಅವರು ಹಸಿವಿಲ್ಲದ ಜೀವನದ ಜೊತೆ ಬಾಳಿ ಬದುಕಲಿ ಎನ್ನುವ ಸ್ವಭಾವದವರಾಗಿದ್ದರು. ಇಂಥ ಸರಳ ಮನಸ್ಸಿನ ಈ ದಂಪತಿಗಳಿಗೆ

ದೇವರು ಮಕ್ಕಳನ್ನು ಕರುಣಿಸಿರಲಿಲ್ಲ, ಇದೇ ಚಿಂತೆಯಲ್ಲಿದ್ದ ಇವರಿಗೆ ದಿಕ್ಕು ತೋಚದಾಗಿತ್ತು. ಒಂದು ದಿನ ಅವರ ಪಾಲಿಗೆ ಅದು ಶುಭದಿನವೆಂದೇ ಹೇಳಬಹುದು. ಆ ದಿನ ಅವರ ಮನೆಗೆ ಮನೆತನದ ಗುರುಗಳಾದ ಹಚ್ಚೊಳ್ಳಿಯ ಬಂಡೆಪ್ಪ ತಾತನವರು ಬಂದಾಗ ಇವರಿಬ್ಬರ ಮನದ ಬಯಕೆಯನ್ನು ಅರಿತು ಅವರಿಗೆ ನೀವು ಮಕ್ಕಳ ಭಾಗ್ಯವನ್ನು ಪಡೆಯುವ ಯೋಗ ಅತೀ ಸಮೀಪದಲ್ಲಿದೆ; ಚಿಂತಿಸದಿರಿ! ಎಂದು ಆಶೀರ್ವದಿಸುತ್ತಾರೆ.

ಈ ಆಶೀರ್ವಾದ ಮಾತನ್ನು ಕೇಳಿದ ದಂಪತಿಗಳ ಸಂತಸಕ್ಕೆ ಕೊನೆಯೇ ಇಲ್ಲದಂತಾಗಿತ್ತು. ಗುರುಗಳ ಆಶೀರ್ವಾದದಂತೆಯೇ ಕೆಲವು ದಿನಗಳು ಕಳೆದ ನಂತರ ಈ ದಂಪತಿಗಳಿಗೆ ಇಬ್ಬರು ಗಂಡುಮಕ್ಕಳು ಜನಿಸಿದರು. ಜನಿಸಿದ ಮಕ್ಕಳಲ್ಲಿ ಹಿರಿಯವನಿಗೆ ಮಲ್ಲಪ್ಪನೆಂದು, ಕಿರಿಯವನಿಗೆ ಬಗ್ಗೂರಪ್ಪನೆಂತಲೂ ಹೆಸರಿಡುತ್ತಾರೆ.

ವಿದ್ಯೆ ಬುದ್ಧಿಯನ್ನು ಕಲಿತ ಮಲ್ಲಪ್ಪನು ನಡತೆಯಲ್ಲಿ, ಗುಣದಲ್ಲಿ ವಿನಯದಿಂದ್ದನು. ಎಲ್ಲರೊಂದಿಗೆ ಒಳ್ಳೆಯ ಮಾತುಗಳನ್ನಾಡುತ್ತ ಎಲ್ಲರ ಮನವನ್ನು ಗೆದ್ದು ಎಲ್ಲರಿಗೆ ಪ್ರೀತಿಯ ಮಗುವಾಗಿ ಬೆಳೆದ ಮಲ್ಲಪ್ಪ ಚಿಕ್ಕವಯಸ್ಸಿನಲ್ಲಿಯೇ ದೇವರಲ್ಲಿ ಭಕ್ತಿಯನ್ನಿಟ್ಟು ಧ್ಯಾನ ಯೋಗದಲ್ಲಿ ತಲ್ಲೀನನಾಗಿರುತ್ತಿದ್ದ. ಇವನ ಗುಣಲಕ್ಷಣಗಳು ಇತರ ಮಕ್ಕಳಿಗಿಂತ ಭಿನ್ನವಾಗಿದ್ದವು. ಬಾಲ್ಯದಲ್ಲಿಯೇ ಇವನಲ್ಲಿರುವ ಲೌಕಿಕ ಮತ್ತು ಪಾರಮಾರ್ಥಿಕತೆಯ ಮಾತುಗಳನ್ನು ಕಂಡು ಜನರು ಇವನನ್ನು ದೇವರ ಪ್ರತಿರೂಪವೆಂದು ಭಾವಿಸುತ್ತಿದ್ದರು.

ಇಂಥ ವಿಚಿತ್ರ ಸ್ವಭಾವದ ಹುಡುಗನನ್ನು ಕಂಡು ಉರವಕೊಂಡದ ಕರಿಬಸವೇಶ್ವರ ಸ್ವಾಮಿಗಳು "ಈತ ಸಾಮಾನ್ಯನಲ್ಲ. ಈಗ ಕಿರಿ ಶರಣ, ಮುಂದೆ ಹಿರಿಶರಣ"ನಾಗುತ್ತಾನೆಂದು ಹರಸಿ ಭವಿಷ್ಯ ನುಡಿದಿದ್ದರು. ಸ್ವಾಮಿಗಳು ನುಡಿದಂತೆ ಮಲ್ಲಪ್ಪನಲ್ಲಿ ದೈಹಿಕವಾಗಿ ಮತ್ತು ಮಾನಸಿಕವಾಗಿ ಸಾಕಷ್ಟು ಬದಲಾವಣೆಗಳಾಗಿದ್ದವು.

ಸದಾ ಏಕಾಂತವನ್ನೇ ಬಯಸುತ್ತ ಮೌನಿಯಾಗಿ ಕುಳಿತಿರುತ್ತಿದ್ದ ಮಲ್ಲಪ್ಪನನ್ನು ನೋಡಿದ ಅವನ ತಂದೆ - ತಾಯಿಗಳು ಯಾಕೋ ಹುಡುಗ ದಿನಕಳೆದಂತೆಲ್ಲ ಮಂದನಾಗುತ್ತಿದ್ದಾನೆ. ಬಹುಶಃ ಮದುವೆ ಮಾಡಿದರೆ ಸರಿಹೋಗುತ್ತಾನೆಂಬ ಭರವಸೆಯಿಂದ ಮಲ್ಲಪ್ಪನ ತಂದೆ ತಾಯಿಗಳು ಅವರದೇ ಜಾತಿಯ ಕುಂಬಾರ ಮನೆತನದ ಕಾಡುಕುಂದಾ ಗ್ರಾಮದ ಕಲ್ಲುಮನೆ ಭೀಮಲಿಂಗಪ್ಪನ ಮಗಳು ಗೌರಮ್ಮ ಎಂಬುವವಳೊಂದಿಗೆ ಮದುವೆ ಮಾಡಿದರು.

ಮದುವೆ ಸಂಸಾರ ಪ್ರಾರಂಭವಾದನಂತರ ಶರಣ ಮಲ್ಲಪ್ಪನು ವ್ಯವಸಾಯ ಮಾಡುವುದರ ಜೊತೆಗೆ ತನ್ನ ಕುಲ ಕಸುಬು ಕುಂಬಾರಿಕೆಯನ್ನು ಮಾಡುತ್ತ ಅಭಿವೃದ್ಧಿಯ ಜೀವನದೊಂದಿಗೆ ಸುಖ ಸಂತೋಷ ಕಾಣುತ್ತ ಪಡೆದ ಲಾಭದಿಂದ ಆಸ್ತಿಯನ್ನು ಸಂಪಾದಿಸಿದನು. ಸುಖ ಜೀವನವನ್ನು ಹಂಚಿಕೊಳ್ಳಲು ಎರಡು ಮಕ್ಕಳ ಜನನವಾಯಿತು. ಈ ಮಕ್ಕಳ ಹೆಸರು ಲಿಂಗಪ್ಪ ಮತ್ತು ಗುರುಪಾದಪ್ಪ. ಕಾಲ ಕಳೆದಂತೆ ಮಕ್ಕಳು ವಯಸ್ಸಿಗೆ ಬರುತ್ತಾರೆ. ಇವರಿಗೆ ಶರಣ

ಮಲ್ಲಪ್ಪನು ಮದುವೆಯನ್ನು ಮಾಡುತ್ತಾನೆ. ಶರಣ ಮಲ್ಲಪ್ಪ ತಾನಿದ್ದ ಊರಿನ ಜನರಿಗೆ ಸದಾ ಸಹಾಯ ಮಾಡುತ್ತ ಜಾತಿ ಮತ್ತು ಧರ್ಮವನ್ನು ಮೀರಿ, ಮಾನವೀಯತೆಯ ಸ್ವಭಾವದಿಂದ ಸದಾ ಸಹಾಯ ಮಾಡುತ್ತಿರುತ್ತಾನೆ. ಇವನಲ್ಲಿರುವ ಈ ಗುಣವನ್ನು ಮಕ್ಕಳು ಮೆಚ್ಚುವುದಿಲ್ಲ. ತಮ್ಮ ಆಸ್ತಿಯನ್ನು ಇತರರಿಗೆ ಹಂಚಿಬಾಳುವ ತಂದೆಯ ಸಹಾಯದ ಸ್ವಭಾವವನ್ನು ಹೊಗಳದೆ ಅವರನ್ನು ಮನೆಯಿಂದ ಹೊರಹಾಕುತ್ತಾರೆ.

ಇಂಥ ಘಟನೆಯಿಂದ ಮನನೊಂದ ಮಲ್ಲಪ್ಪನಿಗೆ ಜೀವನದ ಬಗ್ಗೆ ಜಿಗುಪ್ಸೆ ಮೂಡುತ್ತದೆ. ಬದುಕು ಬೇಡವೆನಿಸಿ ಬಾಳಿನಲ್ಲಿ ವೈರಾಗ್ಯ ತಾಳಿ ಸಂಪಾದಿಸಿದ ಆಸ್ತಿಯನ್ನು, ಮನೆಯನ್ನು ತೊರೆದು ಹೊರ ಬರುತ್ತಾನೆ. ಸಾಂಸಾರಿಕ ಬಂಧನದಿಂದ ಸಿಗುವ ದುಃಖ-ದುಮ್ಮಾನಗಳಿಂದ ಮುಕ್ತಿ ಹೊಂದಿ ಅಶಾಂತಿಯ ಮನಸ್ಸಿನಲ್ಲಿರುವ ನೋವನ್ನು ದೂರವಿರಿಸಿ ಸದಾ ಆನಂದ ಸಿಗುವ ಮಾರ್ಗದಲ್ಲಿ ನಡೆದು ಅರೆ ಕ್ಷಣದ ಸುಖದಿಂದ ದೂರವಿದ್ದು ಶಾಶ್ವತವಾದ ಸುಖವನ್ನು ಪಡೆಯಲು ಇಚ್ಛಿಸುತ್ತಾನೆ. ದೇಹ ಸುಖಕ್ಕಾಗಿ ಬದುಕಿ ಬಾಳುವುದಕ್ಕಿಂತ ಆತ್ಮದ ಸುಖಕ್ಕಾಗಿ ಬಾಳುವುದು ಒಳಿತೆಂದು ಅರಿತು ಈ ಆತ್ಮ ಸುಖ ಪಡೆಯಲು ಒಬ್ಬ ಗುರು ಬೇಕು. ಗುರು ಎನ್ನುವವನು ದೇವರ ಸ್ವರೂಪ; ಅವನಿಂದ ಕಲಿತ ವಿದ್ಯೆ ನನ್ನನ್ನು ಈ ಲೌಕಿಕ ಬಂಧನದಿಂದ ಮುಕ್ತಿಗೊಳಿಸುತ್ತದೆಂದು ಅರಿತು ಗುರುವಿನ ಶೋಧನೆಯನ್ನು ಮಾಡಲು ಪ್ರಾರಂಭಿಸುತ್ತಾನೆ. ಗುರುವಿನ ಶೋಧನೆಯಲ್ಲಿದ್ದ ಶರಣ ಮಲ್ಲಪ್ಪನ ಮನಸ್ಸಿಗೆ ಹೊಳೆಯುವುದು ಗೂಳ್ಯದ ಗಾದಿಲಿಂಗಪ್ಪ; ಇವರು ತನಗೆ ಸರಿಯಾದ ಗುರುವೆಂದು ತಿಳಿದು ಅವರನ್ನು ಕಾಣಲು ಅವರಿದ್ದ ಊರಿಗೆ ಹೊರಡುತ್ತಾನೆ.

ಗುರುವಿನ ಅನುಗ್ರಹ ಸಿಗುವುದು ಅಷ್ಟು ಸುಲಭದ ಮಾತಲ್ಲ. ಕೆಲವು ತಾಳ್ಮೆ ಪರೀಕ್ಷೆಗಳನ್ನು ಅನುಭವಿಸಿ ಜೀವನ ಸಾಕೆನ್ನುವಷ್ಟರಮಟ್ಟಿಗೆ ಗುರುವಿಗಾಗಿ ಕಾಯಲೇಬೇಕು. ಹೀಗೆ ಶರಣ ಮಲ್ಲಪ್ಪನವರು ಹನ್ನೆರಡು ವರ್ಷಗಳ ಕಾಲ ಹಸಿವು ನಿದ್ರೆ, ಗಾಳಿ, ಮಳೆ, ಚಳಿಯನ್ನು ಲೆಕ್ಕಿಸದೆ ಗೂಳ್ಯಂಗೆ ಹೋಗಿ ಬರುತ್ತಿದ್ದರು. ನಿತ್ಯ ಮಠದಲ್ಲಿ ನಡೆಯುವ ಆಧ್ಯಾತ್ಮಿಕ ಪ್ರವಚನ ಕೇಳುತ್ತಿದ್ದ. ಒಂದು ವಿಶೇಷವಾದ ಸಂಗತಿಯೆಂದರೆ ಶರಣ ಮಲ್ಲಪ್ಪನವರು ಗುರುವನ್ನು ಕಾಣಲು ಸಿಂಧಿಗೇರಿಯಿಂದ ಗೂಳ್ಯಂವರೆಗೂ ಎತ್ತಿನ ಮೇಲೆ ಸವಾರಿ ಮಾಡಿಕೊಂಡು ಹೋಗುತ್ತಿದ್ದರು. ಇದನ್ನು ಸಹಿಸದ ಗೂಳ್ಯಂನಲ್ಲಿರುವ ಕೆಲವು ದುಷ್ಟ ಪರಿವಾರದವರು ಈ ಎತ್ತಿಗೆ ನಡೆಯಲು ಬಾರದಂತೆ ಮಾಡಿದ್ದರು; ವಾಮಾಚಾರದಿಂದ ಈ ಕೃತ್ಯವೆಸಗಿದ್ದರು. ಇದನ್ನು ಅರಿತ ಶರಣ ಮಲ್ಲಪ್ಪನವರು "ಈ ಊರು ಈ ಹೊಲ ಹಾಳಾಗಲಿ ಇದರಲ್ಲಿ ಬರೀ ಔಡಲ ಬೆಳೆಯಲಿ ಅದರ ಎಣ್ಣೆಯಿಂದ ಗುರು ಗಾದಿಲಿಂಗಪ್ಪನ ಆಲಯದ ದೀಪ ಬೆಳಗಲಿ" ಎಂದು ಶಪಿಸುತ್ತಾರೆ. ಅದರಂತೆ ಆ ಊರು ಹಾಳಾಗಿ ಹಳೇ ಗೂಳ್ಯಂ ಎಂದು ಇಂದಿಗೂ ಕರೆಯುತ್ತಿದ್ದು, ಆ ಹೊಲದಲ್ಲಿ ಈಗಲೂ ಬರೀ ಔಡಲ ಬೆಳೆಯುತ್ತಾರೆಂದು ಜನರು ಹೇಳುತ್ತಾರೆ".[೮]

ಶರಣ ಮಲ್ಲಪ್ಪರಿಗೆ ಇನ್ನೇನು ಗುರುವಿನ ಅನುಗ್ರಹ ಸಿಗುವ ಹೊತ್ತು ಸಮೀಪಿಸಿತ್ತೆಂದು ತಿಳಿಯುತ್ತದೆ; ಶರಣ ಮಲ್ಲಪ್ಪ ಗುರುವನ್ನು ಕಾಣಲು ಹಗರಿ ನದಿಯನ್ನು ದಾಟಿಕೊಂಡು ಹೋಗಬೇಕಿತ್ತು. ಒಮ್ಮೆ ಶರಣರು ಹೋಗುವಾಗ ಹಗರಿ ನದಿ ಒಮ್ಮೆ ತುಂಬಿ ರಭಸದಿಂದ ಹರಿಯುತ್ತಿತ್ತು. ಇದರಿಂದ ಶರಣ ಮಲ್ಲಪ್ಪ ಅದು ಕಡಿಮೆ ಆಗುವವರೆಗೆ ಇದ್ದು ನಂತರ ಗುರುವಿನ ಬಳಿ ಹೋದರು. ತಡವಾದುದಕ್ಕೆ ಕ್ಷಮಿಸಿ ಎಂದು ವಿಷಯ ತಿಳಿಸಿದ ಇದನ್ನರಿತ ಗುರು ಗಾದಿಲಿಂಗಪ್ಪ ಇನ್ನು ಮುಂದೆ ನಿಮಗೆ ಈ ತೊಂದರೆ ಇರುವುದಿಲ್ಲವೆಂದು ಆಶೀರ್ವದಿಸುತ್ತಾರೆ. ಶರಣ ಮಲ್ಲಪ್ಪನಿಗೆ ಎಷ್ಟೇ ತೊಂದರೆಗಳು ಎದುರಾದರೂ ಲೆಕ್ಕಿಸದೆ ಬಂದು ಹೋಗುವ ಇವರ ನಿಷ್ಠೆಗೆ ಮೆಚ್ಚಿ ತತ್ವರಹಸ್ಯವನ್ನು, ನಿಜಗುರುಬೋಧನೆಯನ್ನು ನೀಡಲು ನಿರ್ಧರಿಸುತ್ತಾರೆ. ತುಂಗ ನದಿ ಪ್ರಾಂತ್ಯದಲ್ಲಿರುವ ಹಗರಿ ಎಂಬ ಗ್ರಾಮದ ಊರ ಹೊರಗೆ ತನ್ನೆದುರಿಗೆ ಕುಳ್ಳಿರಿಸಿಕೊಂಡು ಅನುಭಾವದ ಮಾರ್ಗವನ್ನು ತಿಳಿಸಿ ಕೊಡುತ್ತಾರೆ.

"ಸಮಚಿತ್ತ ಸತ್ವಾಗುಣ, ಮಂತ್ರಯೋಗ, ಧ್ಯಾನಯೋಗ ಹಠಯೋಗ, ರಾಜಯೋಗ, ಜ್ಞಾನಯೋಗ, ಲಿಂಗಾಂಗ ಸಾಮರಸ್ಯ, ಅದ್ವೇಕ ತತ್ವ, ಜೀವನ್ಮುಕ್ತಿಯ ಮಾರ್ಗವನ್ನು ಬೋಧಿಸುತ್ತಾರೆ."[೯]

ಗುರುವಿನಿಂದ ಪಡೆದ ಈ ಎಲ್ಲ ಸಾಧನೆಯನ್ನು ಕೈಗೊಂಡು ಸಿದ್ಧಿಯನ್ನು ಪಡೆದು ತನ್ನ ಕೆಲಸಕಾರ್ಯದಲ್ಲಿ ನಿರತನಾಗಿರುತ್ತಿದ್ದ. ಸಿದ್ಧಿಯನ್ನು ಪಡೆದ ಮಲ್ಲಪ್ಪನ ಮನಸ್ಸು ಚಂಚಲವಾಗಿರದೆ, ವಿಕೃತವಾಗಿರದೆ, ಸದಾ ಪರಮಾತ್ಮನನ್ನು ಪ್ರೀತಿಸುವಂಥ ಮನಸ್ಸನ್ನು ಹೊಂದಿತ್ತು. ತಾನು ಸಿದ್ಧಿಯನ್ನು ಪಡೆದ ನಂತರ ಅದನ್ನು ಜನರ ಒಳಿತಿಗಾಗಿ ಉಪಯೋಗಿಸುವ ಈ ಸಾಧಕನನ್ನು ದೈವ ಪುರುಷನೆಂದೇ ಹೇಳಬೇಕು. ಶರಣ ಮಲ್ಲಪ್ಪ ಸಾಧನೆಯ ಸಿದ್ಧಿಯನ್ನು ಪಡೆದ ನಂತರ ನೋವು ಕಷ್ಟಗಳಿಂದ ಬಳಲುತ್ತಿರುವವರಿಗೆ ಸ್ಪಂದಿಸುತ್ತಾರೆ. ಅವರ ತೊಂದರೆಗಳನ್ನೆಲ್ಲ ನಿವಾರಣೆ ಮಾಡುತ್ತಾರೆ. ಇದರಿಂದ ನೊಂದು ಬೆಂದವರ ಮುಖದಲ್ಲಿ ಮಂದಹಾಸ, ಮನಸ್ಸಿನಲ್ಲಿ ಉಲ್ಲಾಸವು ತುಂಬುತ್ತದೆ. ಇದನ್ನರಿತ ಊರಿನ ಸುತ್ತಮುತ್ತಲಿನ ಜನರೆಲ್ಲ ಇವರ ಆಶೀರ್ವಾದ-ಅನುಗ್ರಹ ಪಡೆಯಲು ಓಡೋಡಿ ಬರುತ್ತಾರೆ. ಶರಣ ಮಲ್ಲಪ್ಪನು ಬೇಡಿ ಬಂದ ಭಕ್ತರ ಸಂಕಷ್ಟಗಳನ್ನೆಲ್ಲ ನಿವಾರಣೆ ಮಾಡುತ್ತಾರೆ. ರೋಗಿಗಳು, ಬಡವರು, ನೋವು ಅನುಭವಿ ಸುತ್ತಿರುವವರೆಲ್ಲ ಶರಣ ಮಲ್ಲಪ್ಪನ ಅನುಗ್ರಹ - ಆಶೀರ್ವಾದದಿಂದ ಒಳಿತನ್ನು ಕಾಣುತ್ತಾರೆ. ಪ್ರತಿನಿತ್ಯ ಶರಣ ಮಲ್ಲಪ್ಪನನ್ನು ಕಾಣಲು ಬರುವವರ ಸಂಖ್ಯೆ ಅಧಿಕವಾಗುತ್ತದೆ. ದೂರದ ಊರಿನಿಂದಲೂ ಕೂಡ ಜನರು ತಮ್ಮ ಕಷ್ಟ, ನೋವು ನಿವಾರಣೆ ಮಾಡಿಕೊಳ್ಳಲು ಮಲ್ಲಪ್ಪನಲ್ಲಿಗೆ ಬಂದು ಅವರ ಆಶಿರ್ವಾದದಿಂದ. ಸಂತಸವನ್ನು ಕಾಣುತ್ತಾರೆ. ಎಲ್ಲಿಂದಲೇ ಬರಲಿ, ಯಾರೇ ಬರಲಿ ಬಂದವರೆಲ್ಲರನ್ನು ಸಮನಾಗಿ ಕಾಣುತ್ತಿದ್ದರು; ಯಾವ ಭೇದ ಭಾವ, ಜಾತಿ, ಮತ, ಧರ್ಮಗಳ ಹಂಗನ್ನು ತೊರೆದು ಬಂದಿರುವವರೆಲ್ಲರೂ ನನ್ನ ಭಕ್ತರೆಂಬ ಭಾವನೆಯಿಂದ ಸಮನಾಗಿ ಕಾಣುತ್ತಿದ್ದರು. ನಂಬಿ ಬಂದ ಭಕ್ತರೆಲ್ಲಾ ಪ್ರೀತಿಯಿಂದ ಶರಣ ಮಲ್ಲಪ್ಪನನ್ನು

ಮಲ್ಲಪ್ಪ ತಾತ, ಶರಣಪ್ಪ ತಾತ ಎಂದು ಕರೆಯಲಾರಂಭಿಸಿದರು. ಇದರಿಂದ ಮಲ್ಲಪ್ಪ ತಾತನೆಂದು ಪ್ರಸಿದ್ಧಿಯನ್ನು ಪಡೆದರು. ಶರಣ ಮಲ್ಲಪ್ಪ ತಾತನೆಂದೇ ಖ್ಯಾತಿಯನ್ನು ಪಡೆದ ತಾತಾ ಎಂದು ಕರೆದಿರುವುದೇಕೆಂದರೆ ಸದಾ ಭಕ್ತರ ಕಷ್ಟಗಳ ನಿವಾರಣೆಗೆ ಸ್ಪಂದಿಸಿ ಮನಸ್ಸಿಗೆ ಹತ್ತಿರವಾಗಿ ಭಕ್ತರ ಮನಸ್ಸಿನಲ್ಲಿ ಅಚ್ಚಹಸಿರಾಗಿ ನಿಂತ ದೈವ ಪುರುಷ ಎಂದರ್ಥ.

**ಶರಣ ಮಲ್ಲಪ್ಪನ ಮಹಿಮೆ**

ಶರಣ ಮಲ್ಲಪ್ಪರಲ್ಲಿ ಎಂಥಾ ಶರಣತ್ವ, ಭಕ್ತಿ, ನಿಷ್ಠೆ ಇತ್ತೆಂದರೆ ಅವರೊಮ್ಮೆ ಜನರು ಒತ್ತಾಯ ಮಾಡಿ ಊರ ಹಬ್ಬಕ್ಕೆ ಕರೆದುಕೊಂಡು ಹೋದರು. ಅದು ಬಳ್ಳಾರಿ ಜಿಲ್ಲೆಯಲ್ಲಿರುವ ಒಂದು ಪುಟ್ಟಗ್ರಾಮ ನಿಟ್ರವಟ್ಟಿ. ಅಲ್ಲಿ ಗ್ರಾಮದೇವತೆಯ ಜಾತ್ರೆಯ ಹಬ್ಬ ದಾಸೋಹದಲ್ಲಿ ಎಲ್ಲರೊಂದಿಗೆ ಶರಣ ಮಲ್ಲಪ್ಪನವರು ಊಟಕ್ಕೆ ಕುಳಿತಿರುವಾಗ ಊಟ ಬಡಿಸುವುದರಲ್ಲಿ ತುಪ್ಪ ಕಡಿಮೆಯಾಗುತ್ತದೆ. ಕೆಲವರಿಗೆ ತುಪ್ಪ ಹಾಕಿದ್ದಾರೆ. ಕೆಲವರಿಗೆ ಕಡಿಮೆಯಾಗಿದೆ ಹೀಗಾಗಿ ಚಿಂತಿಸುತ್ತಿರುವಾಗ ಮಲ್ಲಪ್ಪರು ಎಲ್ಲರೆದುರಿಗೆ ಕೊಡವನ್ನು ತೆಗೆದುಕೊಂಡು ಹೋಗಿ ಬಾವಿಯಲ್ಲಿ ಬಿಟ್ಟು ಮೇಲಕ್ಕೆಳೆಯಲು ಅದು ತುಪ್ಪವಾಗಿತ್ತು. ಇದನ್ನು ಕಂಡ ಗ್ರಾಮದ ಜನರಲ್ಲಿ ಮಲ್ಲಪ್ಪನಿಗೆ ಶರಣು ಶರಣಾರ್ಥಿ ಎಂದು ನಮಿಸಿದರು.

ಬಳ್ಳಾರಿಗೆ ಶರಣ ಮಲ್ಲಪ್ಪನವರು ಬಂದಾಗ ಅದೇ ಸಮಯದಲ್ಲಿ ಇಲ್ಲಿನ ಜನರು ಚಿಂತೆಯಲ್ಲಿ ಮುಳುಗಿದ್ದರು. ಮಲ್ಲಪ್ಪ ಏನೆಂದು ವಿಚಾರಿಸಲು ಮಳೆ ಇಲ್ಲದೆ, ಬೆಳೆ ಒಣಗಿ ಹೋಗಿ ನಮ್ಮ ಬದುಕು ಚಿಂತಾಜನಕವಾಗಿದೆಯೆಂದು ತಮ್ಮ ಗೋಳನ್ನು ಮಲ್ಲಪ್ಪನೆದುರು ತೋಡಿಕೊಂಡರು. ನೀವು ಈಗ ನಮಗೆಲ್ಲರಿಗೆ ಸಹಾಯ ಮಾಡಬೇಕು; ನಿಮ್ಮನ್ನು ಬಿಟ್ಟರೆ ನಮ್ಮ ಚಿಂತೆಯನ್ನು ನಿವಾರಿಸುವವರಾರು ಇಲ್ಲವೆಂದರು. ಅದಕ್ಕೆ ಮಲ್ಲಪ್ಪನವರು "ಚಿಂತಿಸದಿರಿ, ಮಳೆ ಬರುವುದೆಂದು" ಹೇಳಿದರು. ಆಗ ಜನರೆಲ್ಲ ಮೋಡವೇ ಇಲ್ಲದ ಆಕಾಶದಿಂದ ಇವರು ಹೇಗೆ ಮಳೆ ತರಿಸುವರೆಂದು ಗಗನವನ್ನೇ ದಿಟ್ಟಿಸುತ್ತಿರಲು ಶರಣ ಮಲ್ಲಪ್ಪ ತನ್ನಲ್ಲಿರುವ ದೈವಶಕ್ತಿಯಿಂದ ಮಳೆಯನ್ನು ತರಿಸಿದರು.

ಕಲ್ಲಿನ ನಾಗರಕ್ಕೆ ಹಾಲೆರೆದು ನಾಗರ ಪಂಚಮಿ ಹಬ್ಬವನ್ನು ಆಚರಿಸುವ ಜನರನ್ನು ನೋಡಿ ನೀವು ಮಾಡುತ್ತಿರುವುದು ತುಂಬಾ ತಪ್ಪು; ಮಾಡುವುದಾದರೆ ಹಬ್ಬವನ್ನು ನಿಜಾರ್ಥದಲ್ಲಿ ಮಾಡಿ ನಾಗರಪಂಚಮಿ ಹಬ್ಬಕ್ಕೆ ಅರ್ಥವನ್ನು ಕೊಡಿ ಎಂದು ಹೇಳಿ ಜನಸಾಮಾನ್ಯರು ನಿಂತಿದ್ದ ಸ್ಥಳದಲ್ಲಿಯೇ ನಿಜ ನಾಗರಹಾವು ಇತ್ತು. ಜನಸಾಮಾನ್ಯರೆದುರಲ್ಲಿಯೇ ನಿಜನಾಗರನಿಗೆ ಹಾಲೆರೆದರು ಅಲ್ಲಿದ್ದ ಜನರೆಲ್ಲ, ಶಿರಬಾಗಿ ಮಲ್ಲಪ್ಪ ನವರಿಗೆ ನಮಿಸಿದರು.

ನಿಟ್ರಮಟ್ಟಿ ಗ್ರಾಮದ ಜನರು ದಿನನಿತ್ಯ ಹೊಲದಲ್ಲಿ ಕೆಲಸ ಮಾಡುತ್ತಿದ್ದರು. ಒಂದು ದಿನ ಹಂಪೆಯ ಜಾತ್ರೆ ನಡೆಯುತ್ತಿದ್ದು ಅದನ್ನು ನೋಡಲು ಆಸೆಪಟ್ಟರು. ಮಲ್ಲಪ್ಪನಲ್ಲಿಗೆ ಬಂದು ತಮ್ಮ ಆಸೆಯನ್ನು ಹೇಳಿಕೊಂಡು ಜೊತೆಯಲ್ಲಿ ಅವರನ್ನು ಕರೆದರು. ಅದಕ್ಕೆ ಮಲ್ಲಪ್ಪನವರು

ಹೇಳಿದ್ದು ನೀವು ಜಾತ್ರೆ ನೋಡಲು ಹೋಗುವುದಕ್ಕೆ ಇನ್ನು ಸಮಯವಿದೆ. ಮೊದಲು ಎಲ್ಲರೂ ಊಟ ಮಾಡಿ ಹೊಲದ ಕೆಲಸ ನೋಡಿ ಎಂದರು. ಅದಕ್ಕೆ ಜನರೆಲ್ಲ ನಿರಾಶರಾಗಿ ಸಪ್ಪೆ ಮೋರೆಯಿಂದ ಮಲ್ಲಪ್ಪನವರ ಮಾತನ್ನು ತಳ್ಳಿಹಾಕಲಾರದೆ ಕೆಲಸದಲ್ಲಿ ನಿರತರಾದರು. ಕೆಲಸ ಮುಗಿದ ನಂತರ ಮಲ್ಲಪ್ಪನವರು ಎಲ್ಲರನ್ನು ಕರೆದು ಜಾತ್ರೆಗೆ ಹೋಗೋಣವೆಂದರು. ಎಲ್ಲರಿಗೆ ಆಶ್ಚರ್ಯ ಜಾತ್ರೆ ಮುಗಿಯುವ ಹೊತ್ತಾಗಿದೆ; ಈಗ ಮಲ್ಲಪ್ಪನವರು ನಮ್ಮನ್ನು ಜಾತ್ರೆಗೆ ಕರೆಯುತ್ತಿದ್ದಾರಲ್ಲವೆಂದು ಎಲ್ಲರೂ ತಮ್ಮ ತಮ್ಮ ಮನಸ್ಸಿನಲ್ಲಿ ಯೋಚಿಸುವಾಗ ಶರಣರು ಹೀಗೆಂದರು "ಕಣ್ಮುಚ್ಚಿ ಎಲ್ಲರು ಶಿವನನ್ನು ನೆನೆಯಿರಿ ನಾನು ಕಣ್ಣನ್ನು ತೆರೆಯಿರಿ ಎಂದು ಹೇಳುವ ತನಕ ಯಾರು ತೆಗೆಯಬಾರದಂದು ಹೇಳಿದರು" ಇದನ್ನು ಎಲ್ಲರು ತಪ್ಪದೆ ಪಾಲಿಸಿದರು. ಸ್ವಲ್ಪ ಸಮಯದ ನಂತರ ಶರಣರ ಅಪ್ಪಣೆಯಂತೆ ಎಲ್ಲರು ಕಣ್ಣು ತೆಗೆದು ನೋಡಿದಾಗ ಎಲ್ಲರು ಜಾತ್ರೆಯಲ್ಲಿದ್ದರು. ಆಶ್ಚರ್ಯಚಕಿತರಾಗಿ ಸಂತೋಷದಿಂದ ನಲಿದಾಡಿದರು. ರಥೋತ್ಸವವನ್ನು ನೋಡಿ ತಮಗೆ ಬೇಕಾದ ವಸ್ತುಗಳನ್ನು ಖರೀದಿ ಮಾಡಿಕೊಂಡು ಸಂತೋಷಪಟ್ಟರು. ಮತ್ತೆ ಮಲ್ಲಪ್ಪನವರು ಎಲ್ಲರಿಗೆ ಅದೇ ರೀತಿ ಕಣ್ಣು ಮುಚ್ಚಲು ಹೇಳಿದರು. ಆಗ ಎಲ್ಲರು ಅದನ್ನೇ ಪಾಲಿಸಿದರು. ಕಣ್ಣು ತೆಗೆದು ನೋಡಿ ಎನ್ನುವಾಗ ಅವರೆಲ್ಲರೂ ಅದೇ ಹೊಲದಲ್ಲಿದ್ದರು. ಹೀಗೆ ಆ ಗ್ರಾಮದ ಜನರಿಗೆಲ್ಲ ಕುಳಿತಲ್ಲಿಯೇ ಹಂಪೆಯನ್ನು ತೋರಿಸಿದರು.

ಚಾನಾಳಿನ ಬಡರೈತನ ಗೊಡ್ಡು ಆಕಳುಗಳಿಂದ ಹಾಲನ್ನು ಕರೆದು ಕುಡಿದರು ಶರಣ ಮಲ್ಲಪ್ಪ ತುಂಬ ದಿವಸದಿಂದ ಹಾಲನ್ನೇ ಕೊಡದಿದ್ದ ಈ ಆಕಳು ಶರಣರ ಹಸ್ತಸ್ಪರ್ಶದಿಂದ ಹಾಲನ್ನು ಕೊಟ್ಟಿತು. ಇದರ ಹಾಲನ್ನು ಮಲ್ಲಪ್ಪನವರು ಕುಡಿದು ಉಳಿದದ್ದನ್ನು ಆಕಳಿನ ಮನೆಯವರಿಗೆ ಕೊಟ್ಟರು. ಇದರಿಂದ ಇವರ ಬಡತನ ನಿವಾರಣೆಯಾಗಿ ಶ್ರೀಮಂತಿಕೆಯ ಜೀವನ ನಡೆಸಿದರು.

ಮಕ್ಕಳಿಲ್ಲದವರಿಗೆ ಮಕ್ಕಳಾಗುವಂತೆ ಆಶೀರ್ವದಿಸಿದ್ದರು. ಕುರಿಗಳಿಗೆ ಬಂದಿದ್ದ ರೋಗಗಳನ್ನು ನಿವಾರಣೆ ಮಾಡುತ್ತಿದ್ದರು. ಹಸಿದವರಿಗೆ ಅನ್ನ ಹಾಕಿ ಅನ್ನದಾಸೋಹ ನಡೆಸುತ್ತಿದ್ದರು. ತನ್ನನ್ನು ನಂಬಿ ಬಂದವರಿಗೆ ಸಹಾಯ ಮಾಡುತ್ತ ಕಷ್ಟಕಾರ್ಪಣ್ಯಗಳನ್ನು ನಿವಾರಣೆ ಮಾಡುತ್ತ ಭಕ್ತರ ಒಳಿತಿಗಾಗಿ ತನ್ನ ಸೇವೆಯೆಂದು ಸೇವೆಗೈದರು. ತನ್ನೂರ ಭಕ್ತರಿಗೆ ಪರಮ ತತ್ವಾನುಭವವನ್ನು ಹೇಳುತ್ತಾ ಯೋಗ ಸಾಧನೆಯ ಸಿದ್ಧಿಯಿಂದ ತನ್ನ ಮಹಿಮೆಯನ್ನು ತೋರಿಸಿದರು. ಭಕ್ತರ ಸಂಕಷ್ಟಗಳನ್ನು ಪರಿಹರಿಸುತ್ತಾ, ಅವರ ಇಚ್ಛೆಯನ್ನು ಪರಿಪೂರ್ಣಗೊಳಿಸುತ್ತಾ ಅಪಾರ ಭಕ್ತರು ಪೂಜಿಸುವ ದೇವರಾಗಿ ಪ್ರಸಿದ್ಧಿಯನ್ನು ಪಡೆದರು. ಯೋಗ ಸಾಧನೆಯಲ್ಲಿ ಸಿದ್ಧಿಯನ್ನು ಪಡೆದು ಅದರ ಫಲದಿಂದ ಲೋಕಕಲ್ಯಾಣವನ್ನು ಮಾಡಿ ಎಲ್ಲರನ್ನು ಯಾವುದೇ ತಾರತಮ್ಯ ಮಾಡದೆ ಸಮನಾಗಿ ಕಾಣುತ್ತಿದ್ದರು.

"ಶರಣ ಮಲ್ಲಪ್ಪನವರು ಅನುಭವದುನ್ನತಿ ಉದಾತ್ತತೆಗಳು ಭಕ್ತಿಯೇ ಪರಂಕಾಷ್ಟತೆ, ವೈರಾಗ್ಯದ ವೈಶಾಲ್ಯತೆಗಳೆಲ್ಲವು ಅವರ ತೇಜಸ್ಸಿಗೆ ತಪಸ್ಸಿಗೆ ಸಿಕ್ಕ ಜ್ಞಾನ ಸಿದ್ಧಿಗಳಿಂದ ಹೇಳುವುದು ಅನಿವಾರ್ಯ.

ದಡ್ಡರು ದೂರದಲ್ಲಿ ಸುಖವನ್ನು ಹುಡುಕಿದರೆ, ಜಾಣರು ತಮ್ಮ ಕಾಲ ಕೆಳಗೆ ಅದನ್ನು ಹುಡುಕಿ ತೋರಿಸುವರು. ಅಂತೆಯೇ ಲೌಕಿಕರು ತಮ್ಮಿಂದ ಬಹುದೂರದಲ್ಲಿ ದೇವರನ್ನು ಹುಡುಕಿದರೆ - ಜ್ಞಾನಿಗಳು, ತಪಸ್ವಿಗಳು ತಮ್ಮಲ್ಲಿಯೇ ಆ ದೇವನನ್ನು ತೋರಿಸುವರು. ಯಾಕೆಂದರೆ ಶರಣರ ಹುಡುಗಾಟವೇನು ಅಲ್ಲವಲ್ಲ ಇದಕ್ಕೆ ಈ ಶರಣ ಮಲ್ಲೇಶ್ವರನು ಹೊರತಲ್ಲ."[೧೦]

ಜನಸಾಮಾನ್ಯನು ತನ್ನ ಸ್ವಾರ್ಥಕ್ಕೋಸ್ಕರ ಭಗವಂತನನ್ನು ಕಾಣಲು ಮಾಡುವ ಪ್ರಯತ್ನ ಹುಚ್ಚು ತನವೆನ್ನಬಹುದು. ಮಾನವನ ವಿಕೃತ ಮತ್ತು ಚಂಚಲತೆಯ ಮನಸ್ಸು ಕ್ಷಣಕ್ಕೊಂದು ಕಡೆ ವಾಲುತ್ತದೆ. ಅಂಥ ಮನಸ್ಸಿನಲ್ಲಿ ಸ್ವಾರ್ಥತೆಯೇ ತುಂಬಿರುತ್ತದೆ. ಮನುಷ್ಯ ಮನುಷ್ಯನಿಗೆ ಸಹಾಯ ಮಾಡುವ ಬುದ್ಧಿಯನ್ನು ಹೊಂದಿರುವುದಿಲ್ಲ. ಇದ್ದರೂ ಅದು ಸ್ವಾರ್ಥದ್ದಾಗಿರುತ್ತದೆ. ಆದರೆ ಶರಣರು ಸಾಮಾನ್ಯನಾಗಿ ಎಲ್ಲರಂತೆ ಮನುಷ್ಯನಾಗಿ ಬೆಳೆದು, ಸಾಧನೆಯನ್ನು ಮಾಡಿ ಸಿದ್ಧಿಯನ್ನು ಪಡೆದು ಮನುಷ್ಯರ ಕಷ್ಟಗಳಿಗೆ ಸ್ಪಂದಿಸುತ್ತಾರೆ. ಈ ಶರಣರ ಶರಣತ್ವವು ದೈವತ್ವದ ಪ್ರತಿರೂಪವಾಗಿರುವುದು ಎಂದು ಕಾಣುತ್ತದೆ. ಶರಣ ಮಲ್ಲಪ್ಪ ಚಿಕ್ಕವನಿರುವಾಗಲೇ ಶಿವಶರಣರ ಕಥೆಗಳನ್ನು ಕೇಳುವುದಾಗಲಿ, ಓದುವುದರಲ್ಲಿಯೇ ಮಗ್ನನಾಗುತ್ತ ತಾನೂ ಶಿವಶರಣನಿಗೊಲಿಯುವ ಒಬ್ಬ ಮಹಾಭಾಗ್ಯವಂತನಾಗಬೇಕು ಎಂದು ಯೋಚಿಸಿರಬೇಕು. ಲೌಕಿಕ ಮತ್ತು ಪಾರಮಾರ್ಥಿಕ ವಿದ್ಯೆಗಳನ್ನೆಲ್ಲ ಸಂಪೂರ್ಣವಾಗಿ ಸ್ವಇಚ್ಛೆಯಿಂದ ಕಲಿತನು. ಹೀಗೆ ಬೆಳೆದು ಮುಂದೆ ಒಬ್ಬ ಮಹಾನ್ ಶರಣನಾಗಿ ಹುಟ್ಟಿದ ಊರು ಮತ್ತು ಮೆಚ್ಚಿದ ಊರು ಸಿಂಧಿಗೇರಿ ಮತ್ತು ಬೈಲೂರಿನಲ್ಲಿ ಖ್ಯಾತಿಯನ್ನು ಪಡೆದನು. ಈ ಎರಡು ಊರುಗಳಲ್ಲಿ ಮಠಗಳ ನಿರ್ಮಾಣವಾದವು.

"ಪದ್ಮ ಪತ್ರಜ ಮೇಲಣ ಜಲಬಿಂದುವಿನಂತೆ ಭೋಗ ಜೀವನಕ್ಕೆ ಅಂಟಿಯೂ ಅಂಟದಂತಿದ್ದು, ತ್ಯಾಗಜೀವಿಯಾಗಿ, ಪ್ರಪಂಚ ಪರಮಾರ್ಥಗಳೆರಡನ್ನು ಎಡೆಬಿಡದೆ ಸಮತೂಕದಿಂದ ನಡೆಸುವುದರಲ್ಲಿ ಜಾಣನಾಗಿ, ಕಾಯಕ ಜೀವಿಯಾಗಿ ಬದುಕಿ ಬಾಳಿ ಕೊನೆಗೆ ಯೋಗಿಯಾಗಿ ಬ್ರಹ್ಮದಲ್ಲಿ ಬಯಲಾದ ಶ್ರೀಸಿಂಧಿಗೇರಿ ಶರಣ ಮಲ್ಲಪ್ಪ."[೧೧]

ಶರಣ ಮಲ್ಲಪ್ಪನವರು ೧೮೭೫ರಲ್ಲಿ ದೈವಾಧೀನರಾದರು. ಇವರನ್ನು ಕಳೆದುಕೊಂಡ ಭಕ್ತ ಸಮೂಹ ಸಿಂಧಿಗೇರಿಯಲ್ಲಿಯೇ ಇವರ ಸಮಾಧಿಯನ್ನು ಮಾಡಿ ಗದ್ದುಗೆಯನ್ನು ಮಾಡಿದರು. ಕೆಲವರ್ಷಗಳ ನಂತರ ಶರಣ ಮಲ್ಲಪ್ಪನವರು ಬೈಲೂರಿನಲ್ಲಿರುವ ಮಠಕ್ಕೆ ತನ್ನ ದೇಹವನ್ನು ಸ್ಥಳಾಂತರಿಸಲು ಕೇಳಿಕೊಂಡಿದ್ದರು. ನಂತರ ಅಲ್ಲಿನ ಸಮಾಧಿ ಗದ್ದುಗೆಯಿಂದ ದೇಹವನ್ನು ತೆಗೆದು ಬೈಲೂರಿಗೆ ತಂದು ಗದ್ದುಗೆಯನ್ನು ಮಾಡಿದರು. ಅವರ ದೇಹ ಎಷ್ಟು ವರ್ಷಗಳಾದರೂ ಸ್ವಲ್ಪವು ಮಾಸದೆ ಹಾಗೆ ಇದ್ದಿತು.

ಒಬ್ಬ ದೈವಿ ಪುರುಷನು ಸತ್ತನೆಂದು ಹೇಳಿ ಸಮಾಧಿ ಮಾಡುವುದು ನಮ್ಮ ಅರಿವಿಗಿಲ್ಲದ ಕಾರ್ಯವದು. ಆದರೆ ಇಲ್ಲಿ ಶರಣ ತನ್ನ ಶರಣತ್ವವನ್ನು ತೋರಿಸಿ ಶರಣನಿಗೆ ಸಾವಿಲ್ಲ. ಅವನು ತನ್ನ ದೇಹವನ್ನು ವಿಶ್ರಾಂತಿಯಲ್ಲಿಟ್ಟು" ಮೌನಿಯಾಗಿದ್ದಾನೆಂದು ಹೇಳಬಹುದು.

ಶರಣ ಸತ್ತ ಮೇಲೂ ಅವನ ದೇಹ ಕೆಡದೆ ಹಾಗೆ ಇದೆ ಎಂದರೆ ಈ ಶರಣನ ಶರಣತ್ವ ಎಂಥದೆಂಬುದು ಅರ್ಥವಾಗುತ್ತದೆ. ಶರಣರು ತಮ್ಮ ಮನಸ್ಸನ್ನು ದೇವರಿಗೆ ಮಾತ್ರ ಅರ್ಪಿಸಿರುವುದಿಲ್ಲ. ತಮ್ಮ ದೇಹ ಮನಸ್ಸಿನೊಂದಿಗೆ ಬೆರೆತಿರುವುದರಿಂದ ಜೊತೆ ಜೊತೆಯಲ್ಲಿಯೇ ದೇವರಿಗೆ ಅರ್ಪಿಸಿ, ದೇವರಲ್ಲಿ ಮೊರೆಹೋಗಿ ಅವರು ತಮ್ಮ ಸಾಧನೆಯ ಸಿದ್ಧಿಯಿಂದ ಒಬ್ಬ ದೇವರಿಗೆ ಪ್ರೀತಿಯುಳ್ಳವನಾಗಿ, ದೇವರ ಸೇವೆಗೈದು ಒಬ್ಬ ಅನುಭಾವಿ ಎನಿಸಿಕೊಳ್ಳುತ್ತಾನೆ. ಅಂಥ ಮಹಾನ್ ಅನುಭಾವಿ ಈ ಶರಣ ಮಲ್ಲಪ್ಪನವರು.

**ಕಾನಾಮಡುಗು ಶರಣಪ್ಪ**

ತುಂಗಭದ್ರಾ ನದಿ ಪ್ರಾಂತ್ಯದಲ್ಲಿರುವ ಕಾನಾಮಡುಗು ಪ್ರಸಿದ್ಧಿಯನ್ನು ಪಡೆದಿರುವುದು ಶಿವಶರಣ ಶರಣಪ್ಪನಿಂದಲೇ ಶರಣಪ್ಪನವರು ಬಂದು ಈ ನೆಲದಲ್ಲಿ ನೆಲೆಸಿದ ಮೇಲೆ ಅವರಿಗೆ ಕಾನಾಮಡುಗು ಶರಣಪ್ಪನೆಂದೇ ಕರೆಯಲಾರಂಭಿಸಿದರು.

ಶರಣಪ್ಪನವರ ತಂದೆ ಬಸವಪ್ಪ, ತಾಯಿ ಪುಟ್ಟವ್ವೆ; ಇವರು ವಾಸಿಸುತ್ತಿದ್ದ ಊರು ಅಗಳೀಪುರ ತುಮಕೂರು ಜಿಲ್ಲೆಯಲ್ಲಿದೆ. ಶಿವಭಕ್ತರಾದ ಇವರಿಗೆ ಮದುವೆಯಾಗಿ ಎಷ್ಟೋ ಕಾಲ ಕಳೆದರೂ ಮಕ್ಕಳಾಗಿರಲಿಲ್ಲ. ಅದೊಂದು ದಿನ ಅವರೊಂದಿಗೆ ಪ್ರಸಿದ್ಧ ಕೀರ್ತನಕಾರರಾದ ಅಯ್ಯನವರು ಬರುವರೆಂದು ತಿಳಿದು ಮನದಲ್ಲಿ ಸಂತಸ ಮನೆ ಮಾಡಿತ್ತು. ಕಾರಣ ಅವರೊಬ್ಬ ಶಿವಸ್ವರೂಪಿಯಾದ ಶಿವಭಕ್ತ ಕೀರ್ತನಕಾರರಾಗಿದ್ದರು. ಅನುಗ್ರಹ ಪಡೆದು ಪೂಜಾಕಾರ್ಯಗಳಿಂದ ಅವರು ತೋರಿದ ಭಕ್ತಿಯ ಮಾರ್ಗದಲ್ಲಿ ನಡೆದು ಮಗುವನ್ನು ಪಡೆಯುವ ಬಯಕೆ ಈ ದಂಪತಿಯಲ್ಲಿತ್ತು ಅದರಂತೆ ಬಸವಪ್ಪ ಮತ್ತು ಪುಟ್ಟವ್ವ ಇಬ್ಬರು ಈ ಅಯ್ಯನವರ ದರ್ಶನಕ್ಕಾಗಿ ಕಾಯುತ್ತಿದ್ದರು. ಆ ಶುಭದಿನ ಬಂದಿತು. ಇಬ್ಬರು ಗುರುವರ್ಯರನ್ನು ವಂದಿಸಿ ಅವರಲ್ಲಿ ತಮ್ಮ ಮನದ ಬಯಕೆಯನ್ನು ತಿಳಿಸಿದರು. ಅವರ ಬಯಕೆಯನ್ನರಿತ ಅಯ್ಯುರವರು "ಶ್ರೀರುದ್ರ ವ್ರತ ಆಚರಣೆಯನ್ನು ಮಾಡಿದರೆ ನಿಮಗೆ ಫಲವುಂಟೆಂದು, ಅದರ ನಿಯಮಗಳನ್ನೆಲ್ಲ ತಿಳಿಸಿ ಆಶೀರ್ವದಿಸಿದರು. ಗುರುಗಳ ಆಶೀರ್ವಾದಂತೆ ಶ್ರೀರುದ್ರವ್ರತ ಆಚರಣೆಯನ್ನು ಮಾಡಿ ಶಿವನ ಅನುಗ್ರಹದಿಂದ ಶಿವಭಕ್ತನಾದ ಶಿವಶರಣ ಶರಣಪ್ಪ ಮಗುವನ್ನು ಪಡೆದು ದಂಪತಿ ಆನಂದಿಸಿದರು.

ಈ ಶಿವಶರಣ ಶರಣಪ್ಪನ ಮೂಲ ಹೆಸರು ಚನ್ನಬಸವಪ್ಪ. ಮಗು ಹುಟ್ಟಿದ ಮೇಲೆ ಕೆಲದಿನಗಳ ನಂತರ ತಂದೆ ಬಸವಪ್ಪ, ತಾಯಿ ಪುಟ್ಟವ್ವೆಯರು ಗುರುಗಳನ್ನು ಕರೆತಂದು ಲಿಂಗಾಧಾರಣೆ ಮಾಡಿಸಿ ಮಗುವಿಗೆ ಹನ್ನೊಂದನೆಯ ದಿನದಂದು ಚನ್ನಬಸವಪ್ಪನೆಂದು ಹೆಸರಿಟ್ಟರು. ಹೀಗೆ ಕಾಲ ಕಳೆದಂತೆ ಬೆಳೆದ ಮಗನಿಗೆ ಎಂಟನೇ ವರುಷದವನಾಗಿರುವ ಸಮಯದಲ್ಲಿ ತಂದೆ ಬಸವಪ್ಪನು ಮಗನಿಗೆ ಪಟ್ಟಬದ್ಧಾಚಾರ್ಯರಿಂದ ಶಿವದೀಕ್ಷೆಯನ್ನು ಕೊಡಿಸಿದನು. ಗುರುಗಳಿಂದ ದೀಕ್ಷೆಯನ್ನು ಪಡೆದು ಪ್ರಣವ ಪಂಚಾಕ್ಷರಿಯನ್ನು ಗ್ರಹಿಸಿ ಗುರುಪುತ್ರನಾದನು. ತಂದೆ ತಾಯಿಯೊಂದಿಗೆ ವ್ಯವಸಾಯದಲ್ಲಿ ಸಹಾಯ ಮಾಡುತ್ತ ತನ್ನ ತನು ಮನವನ್ನೆಲ್ಲ

ಶಿವಧ್ಯಾನದಲ್ಲಿ ತೊಡಗಿಸಿಕೊಂಡು ಶಿವಧ್ಯಾನ ಶಿವಪೂಜೆಗಳಲ್ಲಿ ಹೆಚ್ಚಿನ ಒಲವನ್ನು ಹೊಂದುತ್ತ ಅದರಲ್ಲಿ ತಲ್ಲೀನನಾಗುತ್ತಿದ್ದನು. ಚಿಕ್ಕ ವಯಸ್ಸಿನಿಂದಲೇ ಲೌಕಿಕ ಮತ್ತು ಪಾರಮಾರ್ಥಿಕವಾಗಿ ತನ್ನ ಕೆಲಸ ಕಾರ್ಯಗಳನ್ನು ನೆರವೇರಿಸಿಕೊಳ್ಳುತ್ತಿದ್ದನು. ತಾನು ಮಾಡುವ ಕೃಷಿ ಕಾಯಕದಲ್ಲಿ ಪರಮಾತ್ಮನಿದ್ದಾನೆಂದು, ಬೆಳೆದ ಬೆಳೆ ಪರಮಾತ್ಮನ ಸ್ವರೂಪವೆಂದು ಸಂತೋಷ ಪಡುತ್ತಿದ್ದನು.

ರಾತ್ರಿ ಹಗಲು ಎನ್ನದೆ ತನ್ನ ಕೃಷಿ ಕಾಯಕದ ಮಧ್ಯೆ ಸಮಯ ಸಿಕ್ಕಾಗಲೆಲ್ಲಾ ಏಕಾಂತವಾಗಿ ಪ್ರಶಾಂತ ಸ್ಥಳವನ್ನು ಹುಡುಕಿ ಧ್ಯಾನಾಸಕ್ತನಾಗಿರುತ್ತಿದ್ದ. ರಾತ್ರಿ ಎಷ್ಟೇ ಹೊತ್ತಾದರೂ ಅದರ ಪರಿವೆಯಿಲ್ಲದೆ ಶಿವನ ಧ್ಯಾನದಲ್ಲಿ ತಲ್ಲೀನನಾಗಿರುತ್ತಿದ್ದ. ರಾತ್ರಿ ಕಳೆಯುವ ಹೊತ್ತಾದರೂ ಮಗ ಮನೆಗೆ ಬಾರದಿರುವುದನ್ನು ಕಂಡು ತಂದೆ - ತಾಯಿ - ಸಹೋದರರು ಚನ್ನಬಸವಣ್ಣ(ಶರಣಪ್ಪ)ನನ್ನು ಹುಡುಕಿಕೊಂಡು ಹೋಗಿ ಮನೆಗೆ ಕರೆತರುತ್ತಿದ್ದರು. ಹೀಗೆ ಬೇಸತ್ತ ತಂದೆ ಬಸವಪ್ಪ ತಾಯಿ ಪುಟ್ಟವ್ವೆ ಇವನಿಗೆ ಮದುವೆ ಮಾಡಿದರೆ ಸರಿ ಹೋಗಬಹುದೆಂದುಕೊಂಡು ನಿಟ್ಟುಸಿರುಬಿಡುತ್ತ ಇವನನ್ನು ಶಿವನೇ ಕಾಪಾಡಬೇಕು. ಎಲ್ಲವೂ ಶಿವೇಚ್ಛೆಯಂತಾಗಲಿ ಎಂದು ಶಿವನನ್ನು ಮನದಲ್ಲಿ ನೆನೆದು ಕೈಮುಗಿದರು.

"ಚನ್ನಬಸವಣ್ಣನಿಗೆ ದಿನೇ ದಿನೇ ಶಿವಪೂಜೆ, ಶಿವಧ್ಯಾನಗಳಲ್ಲಿ ಮೈ ಮರೆವ ಹಂಬಲ ಹೆಚ್ಚಾಯಿತು. ಮನೆಯಲ್ಲಿ ಅನಿರೀಕ್ಷಿತವಾಗಿ ಇದಕ್ಕೆ ಆತಂಕಗಳೊದಗುತ್ತಿದ್ದವು. ಕೆಲದಿನಗಳಾದರೂ ಯಾವುದಾದರೊಂದು ಶಾಂತಿ ಸ್ಥಳದಲ್ಲಿ ವಾಸ ಮಾಡಬೇಕೆಂದು ಹಂಬಲ ಬೆಳೆಯಿತು. ಯೋಚಿಸುತ್ತಿರುವಾಗ ಸಮೀಪದಲ್ಲಿಯೇ ಇದ್ದ ಸಿದ್ಧರ ಕಲ್ಲು(ಸಿದ್ಧರ ಬೆಟ್ಟ) ಕೈ ಮಾಡಿದಂತಾಯಿತು. ಆದರೆ ಮನೆ ಬಿಟ್ಟು ಹೋಗುವುದು ಹೇಗೆ? ಹೇಗಾದರೂ ತಾಯ್ತಂದೆಗಳನ್ನು ಒಪ್ಪಿಸಿ ಹೋಗಲೇಬೇಕೆಂಬ ಸಂಕಲ್ಪವು ಬಲವಾಯಿತು."[೧]

ಚನ್ನಬಸವಣ್ಣನವರು ಒಂದು ದಿನ ತಂದೆ - ತಾಯಿಯರ ಬಳಿ ಬಂದು ಕೆಲವು ದಿನ ಶಿವ ಕ್ಷೇತ್ರಗಳಿಗೆ ದರ್ಶನ ಮಾಡಿ ಬರಲು ಹೋಗುತ್ತಿದ್ದೇನೆ ಎಂದು ತಿಳಿಸುತ್ತಾನೆ. ಅವರು ಅದಕ್ಕೆ ಒಲ್ಲದ ಮನಸ್ಸಿನಿಂದ ಒಪ್ಪಿಗೆಯನ್ನು ನೀಡುತ್ತಾರೆ. ಮೊದಲು ತನ್ನ ಪಯಣವನ್ನು ಸಿದ್ಧರ ಬೆಟ್ಟಕ್ಕೆ ಬೆಳೆಸುತ್ತಾನೆ. ಅಲ್ಲಿಂದ ಅವನು ತನ್ನ ಪಾರಮಾರ್ಥಿಕ ಮಾರ್ಗದಲ್ಲಿ ಉತ್ತುಂಗದ ಸ್ಥಾನವನ್ನೇರುತ್ತಾನೆ.

ಚನ್ನಬಸವಣ್ಣನವರು ತಮ್ಮ ಪಾರಮಾರ್ಥಿಕ ಪಯಣದಲ್ಲಿ ಕೆಲವು ದಿನಗಳ ಕಾಲ ರತ್ನಗಿರಿಯೆಂಬ ಪ್ರದೇಶದಲ್ಲಿ ವಾಸವಾಗಿದ್ದರು. ಈ ಪ್ರದೇಶವು ಅಲೌಕಿಕ ಆಧ್ಯಾತ್ಮಿಕ ಜ್ಞಾನಕ್ಕೆ ಆಶ್ರಯ ತಾಣವಾಗಿದ್ದಿತು. ಈ ಗ್ರಾಮದಲ್ಲಿ ಶಿಖೇಂದ್ರ ದೇವ ಎಂಬ ಶಿವಯೋಗಿಗಳ ಭೇಟಿಯಾಗುತ್ತದೆ. ಇವರು ಚನ್ನಬಸವಣ್ಣನವರನ್ನು ಅವರ ಮುಖದ ತೇಜಸ್ಸೇ ತಿಳಿಸುತ್ತಿತ್ತು; ಇವನೊಬ್ಬ ಮಹಾನ್ ಶಿವಶರಣನೆಂದು. ಇದನ್ನು ಕಂಡ ಶಿವಯೋಗಿಗಳು ಚನ್ನಬಸವಣ್ಣ (ಶರಣಪ್ಪ)ನನ್ನು ಹಿಡಿದಪ್ಪಿ ಮಸ್ತಕದ ಮೇಲಿನಿಂದ ನೇವರಿಸುತ್ತ ಮನಸ್ಸಿನಲ್ಲಿ ಆನಂದಭರಿತರಾಗಿ ಆಶೀರ್ವಾದ ಮಾಡಿದರು.

ಗುರುಗಳು ಚನ್ನಬಸವಣ್ಣನನ್ನು ತನ್ನ ಮುಂದೆ ಕೂಡಿಸಿಕೊಂಡು ಆನಂದದಿಂದ ಮುಗುಳ್ನಗುತ್ತ ಕೇಳಿದರು. "ಚನ್ನಬಸವಣ್ಣ ನನ್ನಲ್ಲಾವ ಘನತೆಯನ್ನು ಕಂಡೆ; ನಾನೂ ಒಬ್ಬ ಸಾಮಾನ್ಯ ಜಂಗಮನಲ್ಲವೇ? ಎನಲು' ಗುರುವರ್ಯರೇ; ಗುರುಲಿಂಗ ಜಂಗಮವು ಒಂದೇ ಎಂದು ತಿಳಿದು ನಡೆಯುವುದು ಶಿವಧರ್ಮವೆಂದು ಹಿರಿಯರಿಂದ ತಿಳಿದು ಅದರಂತೆ ನಡೆಯುತ್ತಿರುವ ನಿಮ್ಮ ಕರುಣೆಯ ಶಿಶು ನಾನು. ತಮ್ಮ ದರ್ಶನದಿಂದ ಅನಿಮಿತ್ತವಾದ, ಅನಿರ್ವನೀಯವಾದ ಆನಂದವು ನನ್ನ ಹೃದಯದಲ್ಲಿ ಉಕ್ಕುತ್ತಿರುವುದು. ಅದುದರಿಂದ ನೀವೇ ನನ್ನ ಸದ್ಗುರುವೆಂದು ತಿಳಿದು ತಮ್ಮ ದಿವ್ಯ ಪಾದ ಕಮಲಗಳಿಗೆ ಶರಣು ಬಂದಿರುವೆನು. ನಿಮ್ಮ ಪಾದ ಸೇವೆಗೆ ಆಶ್ರಯವನ್ನು ಕೊಟ್ಟರೆ ನಾನು ಧನ್ಯನೆಂದು ನಮಸ್ಕರಿಸಲು ಅಯ್ಯ ನಿನಗಿಷ್ಟು ಮಮತೆಯಿದ್ದಲ್ಲಿ ನೋಡೋಣ ನೀನು ನನ್ನಲ್ಲಿಯೇ ಇರಬಹುದು."[೧೩]

ಗುರುಗಳಾದ ಶಿಖೇಂದ್ರರು ಪಾದಸೇವೆ ಮಾಡಲು ಅವಕಾಶ ಮಾಡಿಕೊಟ್ಟದ್ದಕ್ಕಾಗಿ ಚನ್ನಬಸವಣ್ಣನು ಸಂತೋಷಗೊಂಡನು. ಅಂದಿನಿಂದ ಪ್ರತಿನಿತ್ಯ ಗುರುಗಳಿಗೆ ಸ್ನಾನ ಮತ್ತು ಪೂಜ ಕಾರ್ಯಗಳಲ್ಲಿ ನೆರವಾಗಿ ಮಧ್ಯಾಹ್ನದ ದಾಸೋಹಕ್ಕಾಗಿ ಭಿಕ್ಷೆ ಬೇಡಲು ಶಿವಭಕ್ತರ ಮನೆಗಳಿಗೆ ಹೋಗುತ್ತಿದ್ದನು. ಭಿಕ್ಷೆಯನ್ನು ತಂದು ಗುರುಲಿಂಗ ಜಂಗಮರಿಗೂ ಮತ್ತು ಭಕ್ತರಿಗೂ ತೃಪ್ತಿಪಡಿಸಿ, ತಾನೂ ಪ್ರಸಾದವನ್ನು ಸ್ವೀಕರಿಸಿ ಗುರುಗಳಾದ ಶಿಖೇಂದ್ರ ದೇವನ ಪಾದಸೇವೆಯಲ್ಲಿ ತಾನು ವಿಶ್ರಾಂತಿ ಪಡೆಯುತ್ತಿದ್ದ.

ಕೆಲವು ದಿನಗಳು ಕಳೆದನಂತರ ಗುರುಗಳಾದ ಶಿಖೇಂದ್ರರು ಚನ್ನಬಸವಣ್ಣನವರ ಯೋಗ್ಯತೆ ಯನ್ನು ತಿಳಿದು ಅವನನ್ನು ತನ್ನ ಬಳಿ ಕರೆದು ನಿನ್ನ ಸೇವೆಗೆ ಮತ್ತು ನಿಷ್ಠೆಗೆ ನಾನು ಮನಸಾರೆ ಮೆಚ್ಚಿರುವೆ. ನಿನ್ನನ್ನು ನಾನು ಅನುಗ್ರಹಿಸಿಲೆಂದೇ ನನಗೆ ಶಿವಾಜ್ಞೆಯಾಗಿದೆ ಎನ್ನಲು ಚನ್ನಬಸವಣ್ಣ ಗುರುವಿನ ಪಾದಗಳನ್ನಿಡಿದು ನನ್ನನ್ನು ಭವಬಂಧನಗಳಿಂದ ಬಿಡಿಸೆನ್ನಲು ಗುರುಗಳು ನೀನು ಸಹಜವಾಗಿಯೇ ಭಕ್ತರತ್ನ. ನಿನ್ನಲ್ಲಿ ರತ್ನದಂಥ ಸಂಸ್ಕಾರವೂ ನಡೆದುದಾಗಿದೆ. ನಿನ್ನನ್ನು ಬೆಳೆಸುವ ಕಾರ್ಯವು ಶಿವ ಪೂಜೆಯಿಂದ ಈಗ ನೆರವೇರಬೇಕಿದೆ. ನಿನಗೀಗಾಗಲೇ ಅನೇಕರಿಂದ ಅನುಗ್ರಹ ದೊರೆತು ಪರಿಶುದ್ಧನಾಗಿರುವೆ, ಆದರೆ ಪರಿಪೂರ್ಣನಾಗುವುದೊಂದೆ ಬಾಕಿಯಿದೆ ಎಂದು ಗುರುಗಳು ಚನ್ನಬಸವಣ್ಣನ ಮಸ್ತಕದ ಮೇಲೆ ಕೈಯನ್ನಿಟ್ಟರು. ಅವರ ಸ್ಪರ್ಶದಿಂದ ಕ್ಷಣಕಾಲ ಸ್ಥಿರನಾಗಿ ಮೌನಿಯಾಗಿಹೋದನು. ದೀಕ್ಷೆಯನ್ನು ಕೊಟ್ಟು ಗುರುಗಳು ಹೀಗೆ ಹೇಳುವರು "ಮೂರು ತನುಗಳು ಮೂರು ಮಲಗಳಲ್ಲಿನ ಸಹಸ್ರಾರು ಚಕ್ರದಲ್ಲಿನ ಶಿವಚಿತ್ಕಳೆಯನ್ನು ಶಿವಮಂತ್ರ ಪೂರ್ವಕವಾಗಿ ಆಕರ್ಷಿಸಿ ಅದನ್ನು ಅವನ ಇಷ್ಟಲಿಂಗದಲ್ಲಿ ನೆಲೆಗೊಳಿಸಿ ವಿಧ್ಯುಕ್ತವಾಗಿ ಪ್ರಣವ ಪಂಚಾಕ್ಷರಿಯನ್ನುಪದೇಶಿಸಿ ಹಿಂದೆ ಜಂಗಮ ಮೂರ್ತಿಗಳು ನಿನಗೆ ಮಾಡಿದ ಶಿವದೀಕ್ಷೆಯನ್ನು ಈಗ ನಾನು ಸಹಜವಾಗಿ ನೆರವೇರಿಸಿದ್ದೇನೆ. ನಿನ್ನ ಸ್ಥೂಲ ಸೂಕ್ಷ್ಮ ಕಾರಣ ತನುಗಳು ಪರಿಶುದ್ಧವಾಗಿ ಇಷ್ಟಪ್ರಾಣ ಭಾವಲಿಂಗಗಳು ನೆಲೆಗೊಂಡಿವೆ ಅವುಗಳನ್ನು ಶಿವಯೋಗಾನು

ಸಂಧಾನದ್ವಾರಾ ನೀನು ತಿಳಿದು ಶಿವಾನಂದದಲ್ಲಿ ಲೀನನಾಗುತ್ತೀಯ" ಎಂದು ಆಶೀರ್ವಾದವನ್ನು ಮಾಡಿದರು.[೧೪]

ಗುರುವನ್ನು ಗುರುವಿನ ಆಶೀರ್ವಾದ ಅನುಗ್ರಹವನ್ನು ಪಡೆಯಲು ಇಚ್ಛಿಸುವ ಸಾಧಕನು ಮೋಕ್ಷವನ್ನು ಪಡೆಯಲು ಹಂಬಲಿಸುತ್ತಾನೆ. ಜೀವಾತ್ಮನಾದವನು ಪರಮಾತ್ಮನನ್ನು ಸೇರುವ ಹಂಬಲದಲ್ಲಿ ತನ್ನನ್ನು ಸುತ್ತುವರಿದಿರುವ ಲೌಕಿಕದ ಮಾಯೆಯನ್ನು ದೂರವಾಗಿಸಿಕೊಳ್ಳಲು, ಶಿವಭಕ್ತಿ ಧ್ಯಾನದಿಂದ ಪರಿಹರಿಸಿಕೊಳ್ಳಲು ಸಾಧ್ಯ. ಅದರ ಸರಿಯಾದ ಮಾರ್ಗವನ್ನು ಗುರುವಿನಿಂದ ಪಡೆದು ಅದರಂತೆ ಸಾಧನೆಗೈದು ಲೌಕಿಕ ಸಂಬಂಧದಿಂದ ಮುಕ್ತಿಯನ್ನು ಪಡೆಯುತ್ತಾರೆ. ಸಾಧನೆಯಿಂದ ಪಡೆವ ಸಿದ್ಧಿಯಿಂದ ಪರಮಾತ್ಮನಲ್ಲಿ ಲೀನನಾಗುವುದು.

ಎಲ್ಲ ಶಕ್ತಿಯನ್ನು ಪಡೆದು ಪರಿಪೂರ್ಣ ಸಾಧಕನಾಗಿ ಎಲ್ಲ ಕ್ಷೇತ್ರಗಳನ್ನು ಸುತ್ತಿ ಬಂದು ನೆಲೆಸಿದ ಸ್ಥಳ ಕಾನಾಮಡುಗು. ಚನ್ನಬಸವಣ್ಣನವರು ಕಾನಾಮಡುಗುವಿಗೆ ಬರುವ ವಿಚಾರವನ್ನು ಆ ಊರಿನ ಜನರು ಮೊದಲೇ ತಿಳಿದಿದ್ದರು. ಕಾನಮಡುಗುವಿನ ಭಕ್ತಜನಸಮುದಾಯ ತಾವು ಗುರುದೇವ ಎಂದು ಪೂಜಿಸುವ ಚನ್ನವೀರಸ್ವಾಮಿಗಳು ತಿಳಿಸಿದ್ದರು ಇಷ್ಟರಲ್ಲಿಯೇ ನೀವು ನೆಲೆಸಿರುವ ಈ ಸ್ಥಾನ ಪುಣ್ಯಕ್ಷೇತ್ರವೆನಿಸಿಕೊಳ್ಳುವುದು. ಒಬ್ಬ ಮಹಾತ್ಮನ ಆಗಮನವಾಗುವುದಿಲ್ಲಿಗೆ ಎಂದು ತಿಳಿಸಿದ್ದರು. ಗುರುಗಳು ಹೇಳಿದ ಮೂರನೆಯ ಮಾಸದಲ್ಲಿ ಮುದುಕದಹಳ್ಳಿಯಿಂದ ಶರಣಪ್ಪನವರು ಕಾನಾಮಡಗು ಗ್ರಾಮಕ್ಕೆ ಬಂದರು. ಇವರ ಬರುವಿಕೆಯನ್ನೇ ಎದುರು ನೋಡುತ್ತಿದ್ದ ಕಾನಾಮಡುಗಿನ ಭಕ್ತ ಜನಸಮುದಾಯ ಶಿವಶರಣ ಶರಣಪ್ಪನವರನ್ನು ಭಯ - ಭಕ್ತಿಯಿಂದ "ಜೈ ನಮಃ ಪಾರ್ವತಿ ಪತೇ ಹರಹರ ಮಹದೇವ" ಎಂದು ಹೇಳುತ್ತಾ ಬರಮಾಡಿಕೊಂಡರು. ಅಲ್ಲಿಯೇ ಇದ್ದ ಚನ್ನವೀರಯ್ಯನವರಿಗೆ ಶರಣಪ್ಪನವರು ನಮಸ್ಕರಿಸುವುದನ್ನು ಕಂಡ ಭಕ್ತ ಸಮೂಹ ಅಹಂಕಾರ ರಹಿತ ಪಾರಮಾರ್ಥಿಕವಾದ್ದ ಪ್ರೀತಿಯನ್ನು ಕಣ್ತುಂಬಿಕೊಂಡರು. ಅಂದು ರಾತ್ರಿ ಕಳೆದ ನಂತರ ಶರಣಪ್ಪನವರು ಮುಂಜಾನೆಯ ಪೂಜಾ ಕ್ರಿಯೆಗಳನ್ನೆಲ್ಲ ಮುಗಿಸಿಕೊಂಡ ನಂತರ ಆ ಊರಿನ ಭಕ್ತಜನರನ್ನೆಲ್ಲ ಜಂಗಮರ ನೇತೃತ್ವದಲ್ಲಿ ಬರಮಾಡಿಕೊಂಡು ತನ್ನ ಮಾತುಗಳನ್ನು ಹೀಗೆ ಪ್ರಸ್ತಾವ ಮಾಡಿದರು "ಅಪ್ಪಗಳಿರಾ"! ನಾನಂ ಶಿವೇಚ್ಛೆಯಂತೆ ಈ ಗ್ರಾಮದಲ್ಲಿಯೇ ದಾಸೋಹದ ಮೂಲಕ ಶಿವಪ್ರೀತಕರವಾಗಿ ಗುರುಲಿಂಗಜಂಗಮ ಸೇವೆಯನ್ನು ಮಾಡಬೇಕೆಂಬ ಅಪೇಕ್ಷೆಯಾಗಿದೆ. ಅದಕ್ಕಾಗಿ ನನಗೊಂದು ಸ್ಥಳವನ್ನು ನೀವು ಕೊಡುವುದಾದರೆ ಸಂತೋಷವೆನಲು ಆ ಗ್ರಾಮದ ಗೌಡರ ಮನೆತನದವರಾದ ಬಸವನಗೌಡ ಮತ್ತು ಆತನ ಸಹೋದರ ಗುರುಬಸವನಗೌಡ ಎಂಬುವರಿಬ್ಬರೂ ಅತ್ಯಾನಂದದಿಂದ ತಮ್ಮ ತೋಟದಲ್ಲಿ ಬಾವಿ ಮತ್ತು ಬಿಲ್ವವೃಕ್ಷಗಳ ಸಮೀಪದಲ್ಲಿನ ಕೆಲವು ಭಾಗವನ್ನು ತೋರಿಸಿ ಶರಣಾರ್ಯನು ಒಪ್ಪಿದೊಡನೆ ಈ ಭೂದಾನವು ಶರಣನಿಗೆ ಪ್ರೀತಿಯಾಗಲಿ, ಶರಣನಿಗೆ ಅರ್ಪಿತವಾಗಲಿ, ಶರಣು ಶರಣಾರ್ಥಿ ಎಂದು ನಮಸ್ಕಾರ ಪೂರ್ವಕವಾಗಿ ದಾನಮಾಡಿದರು. ಅಲ್ಲಿ ವಾಸಕ್ಕೆ ಯೋಗ್ಯವಾಗುವಂತೆ ಒಂದು ಪರ್ಣಶಾಲೆಯನ್ನು ಕಟ್ಟಿಕೊಟ್ಟರು."[೧೫]

ಇದರಿಂದ ಶರಣಪ್ಪನು ಸಂತೋಷಗೊಂಡು ಆ ಸ್ಥಳದಲ್ಲಿಯೇ ಗುರುಲಿಂಗ ಜಂಗಮರಿಗೆ ದಾಸೋಹವನ್ನು ಪ್ರಾರಂಭಿಸಿದನು. "ಈ ಕಾರ್ಯವು ಶಾ.ಶ. ೧೭೬೮ ಪರಾಭವ ಸಂವತ್ಸರದ ಫಾಲ್ಗುಣ ಮಾಸದಲ್ಲಿ ಪ್ರಾರಂಭವಾಯಿತು."[೧೬]

ಈ ಕಾನಾಮಡುಗುವಿನಲ್ಲಿ ನೆಲೆಸಿ ದಾಸೋಹ ಪ್ರಾರಂಭಿಸಿದ ದಿನದಿಂದಲೂ ಪ್ರತಿದಿನವೂ ಈ ದಾಸೋಹ ಪದ್ಧತಿಯನ್ನು ನಡೆಸಿಕೊಂಡು ಹೋದನು. ಒಂದು ದಿನವೂ ನಿಲ್ಲಿಸಲಿಲ್ಲ. ಪ್ರತಿನಿತ್ಯವು ಶರಣಪ್ಪನು ಕೋಳಿ ಕೂಗುವ ಮೊದಲೇ ಎದ್ದು ನಿತ್ಯ ಕರ್ಮಗಳನ್ನೆಲ್ಲ ಮುಗಿಸಿ ದೇಹವನ್ನು ಶುಚಿಯಾಗಿಸಿಕೊಂಡು ಬಂದ ಭಗವಂತನನ್ನು ಸ್ಮರಿಸುತ್ತ ಶಿವಪೂಜೆ ಕಾರ್ಯವನ್ನು ನಿಯಮಬದ್ಧವಾಗಿ ಪಾಲಿಸಿ ಪೂಜಿಸುತ್ತಿದ್ದ. ಪ್ರತಿದಿನ ಮಧ್ಯಾಹ್ನ ಕಾನಾಮಡುಗಿನ ಪ್ರತಿಯೊಂದು ಮನೆಗೆ ತೆರಳಿ ಭಿಕ್ಷೆಯನ್ನು ಬೇಡಿ ಅವರು ಸಂತೋಷದಿಂದ ಕೊಟ್ಟದ್ದನ್ನು ತಂದು ಮನೆಯಲ್ಲಿರಿಸಿ ಜಂಗಮರನ್ನು ಕರೆದು ಪಾದಪೂಜೆ ಮಾಡಿ ಅವರಿಗೆ ಪ್ರಸಾದ ಕೊಟ್ಟು ಅವರ ಜೊತೆಯಲ್ಲಿಯೇ ಅದೇ ಸಮಯಕ್ಕೆ ಬಂದು ಭಕ್ತಸಮೂಹಕ್ಕೂ ಪ್ರಸಾದವನ್ನು ಉಣಬಡಿಸಿ ಉಳಿದ ಜನರಿಗೂ ಪ್ರಸಾದವನ್ನು ಉಣಬಡಿಸಿ ನಂತರ ಉಳಿದಿರುವುದರಲ್ಲಿ ತಾನು ತಿನ್ನುತ್ತಿದ್ದ. ಈ ವಿಷಯವನ್ನರಿತ ಕಾನಾಮಡುಗಿನ ಸುತ್ತಮುತ್ತಲಿನ ಜನರೆಲ್ಲ ಭೀಕ್ಷೆ ಬೇಡಿ ತಂದುದರಲ್ಲಿ ದಾಸೋಹ ಮಾಡಿ ಸಂತೋಷಪಡುವ ಆ ಮಾಹಾಪುರುಷನಾದ ಶರಣನನ್ನು ಕಾಣಲೇಬೇಕೆಂದು ಓಡೋಡಿ ಬಂದು ತಾವೂ ಪ್ರಸಾದವನ್ನು ಸ್ವೀಕರಿಸಿ ಶರಣಪ್ಪನಿಗೆ ಕೈ ಮುಗಿದು ಬರುತ್ತಿದ್ದರು. ದಿನಕಳೆದಂತೆ ಶರಣಪ್ಪನ ಮತ್ತು ಕಾನಾಮಡುಗಿನ ಕೀರ್ತಿ ಬೆಳೆಯುತ್ತಲೇ ಇತ್ತು. ಭಕ್ತಸಮೂಹ ಶರಣಪ್ಪನಿಗೆ ಶರಣಾಗಿ ತಾವೂ ದಾಸೋಹಕ್ಕಾಗಿ ತಮ್ಮ ಹೊಲಗದ್ದೆಯಲ್ಲಿ ಬೆಳೆ ದವಸ - ಧಾನ್ಯಗಳನ್ನು ಕಾಣಿಕೆಯಾಗಿ ನೀಡುತ್ತ ಸಂತೋಷಪಡುತ್ತಿದ್ದರು. ಕಾನಮಡುಗು ಇದರಿಂದ ಪ್ರಸಿದ್ಧಿಯನ್ನು ಪಡೆಯುತ್ತ ಒಂದು ಸುಕ್ಷೇತ್ರವೆಂಬ ಹೆಸರನ್ನು ಪಡೆಯಿತು. ಈ ಸುಕ್ಷೇತ್ರದಲ್ಲಿ ಪ್ರತಿನಿತ್ಯ ಅಡುಗೆ ಕೆಲಸ ನಿರಂತರವಾಗಿ ನಡೆದು ದಾಸೋಹವು ಪ್ರತಿದಿನ ನಿರಂತರವಾಗಿ ಅಂದಿನಿಂದ ಇಂದಿನವರೆಗೂ ನಡೆಯುತ್ತ ಬಂದಿದೆ. ಈ ಪರ್ಣ ಶಾಲೆಯು ದಿನನಿತ್ಯ ದಾಸೋಹ ಕಾರ್ಯ ನಡೆದಂತೆ ವಿಸ್ತಾರವಾಗತೊಡಗಿತು. ದಾಸೋಹವಲ್ಲದೆ ಅಲ್ಲಿ ಪ್ರತಿನಿತ್ಯ ಸದಾ ಕಾಲ ಶಿವಭಜನೆ, ಕೀರ್ತನೆ, ಜಂಗಮ ಆರಾಧನೆ ಶಿವಪೂಜೆ ಹೀಗೆ ಶಿವಾರಾಧನೆಯ ಕಾರ್ಯಗಳು ನಿರಂತರವಾಗಿರುತ್ತಿದ್ದವು.

**ಕಾನಾಮಡುಗು ಶರಣಪ್ಪನ ಮಹಿಮೆಗಳು**

ಕಾನಾಮಡುಗುವಿನಿಂದ ಸ್ವಲ್ಪ ದೂರದಲ್ಲಿ ಇದ್ದ ಅಮಲಾಪುರವೆಂಬ ಗ್ರಾಮದಲ್ಲಿ ಬಸವೇಶ್ವರನ ದೇವಾಲಯದಲ್ಲಿದ್ದ ಬಸವೇಶ್ವರನ ವಿಗ್ರಹವು ಸೀಳಿದಂತಾಗಿತ್ತು ಬಿರುಕು ಕಾಣಿಸಿತ್ತು. ಸ್ವಲ್ಪ ದಿನದಲ್ಲಿಯೇ ಅದರ ಶಿರವು ಕಳಚಿ ಬಿದ್ದಿತ್ತು; ಇದರಿಂದ ಜನರ ಭಯಭೀತರಾಗಿದ್ದರು. ಜಾತ್ರೆಯು ಇನ್ನು ಕೆಲವು ದಿನಗಳಲ್ಲಿ ಇರುವುದರಿಂದ ಎಂಥ ಅಪಶಕುನವಿದು? ಯಾಕೆ ಹೀಗಾಗಿದೆ ಎಂಬ ಆತಂಕ ಜನರಲ್ಲಿ ಮೂಡಿತ್ತು. ಅಮಲಾಪುರದ ಜನರೆಲ್ಲಾ ಚಿಂತೆಯಲ್ಲಿ ಮುಳುಗಿರುವಾಗ ಆ ಊರಿನ ಹಿರಿಯರಲ್ಲಿ ಕಾನಾಮಡುಗಿನ ಶರಣಪ್ಪನವರ ಮಹತ್ವವನ್ನು

ಕೇಳಿ ತಿಳಿದಿದ್ದವರು ಇವರನ್ನು ಭೇಟಿಯಾಗಬೇಕೆಂದುಕೊಂಡರು. ಇವರಿಂದ ಪರಿಹಾರವನ್ನು ಕಾಣಬಹುದೆಂದುಕೊಂಡರು. ಅಮಲಾಪುರದ ಹಿರಿಯರೆಲ್ಲ ಸೇರಿ ಕಾನಾಮಡುಗು ಗ್ರಾಮಕ್ಕೆ ಬಂದರು. ಆಶ್ರಮದಲ್ಲಿರುವ ಶರಣಪ್ಪನವರನ್ನು ಕಂಡು ಕಾಪಾಡು ಶರಣ ನಮ್ಮನ್ನೆಲ್ಲ ರಕ್ಷಿಸೆಂದು ಬೇಡಿಕೊಂಡರು. ಶರಣಪ್ಪನವರು ಅವರಿಗೆ ನಮಸ್ಕರಿಸಿ ಯಾಕೆ ನೀವೆಲ್ಲ ಭಯಭೀತರಾಗಿರುವಿರಿ! ನಿಮಗೆ ಆಗಿರುವ ಸಮಸ್ಯೆಯಾದರೂ ಏನೆಂದು ಕೇಳಿದರು. ಬಸವೇಶ್ವರನ ಶಿರ ಭಿನ್ನವಾಗಿರುವ ವಿಷಯವನ್ನು ತಿಳಿಸಿದರು. ಆಗ ಶರಣಪ್ಪನವರು ಎಲ್ಲಾ ಭಗವಂತನ ಲೀಲೆ ಎಂದು ಬಂದಿರುವ ಭಕ್ತರಿಗೆಲ್ಲ ಪ್ರಸಾದವನ್ನು ಸ್ವೀಕರಿಸಿ ವಿಶ್ರಾಂತರಾಗಿರೆಂದು ಹೇಳಿದರು. ಭಕ್ತರೆಲ್ಲ ಪ್ರಸಾದ ಸ್ವೀಕರಿಸಿ ವಿಶ್ರಾಂತರಾದ ಮೇಲೆ ಶರಣಪ್ಪನವರೆಂದರು. "ಒಂದು ಶುಭದಿನದ ವೇಳೆ ನಾನು ನಿಮ್ಮ ಗ್ರಾಮಕ್ಕೆ ಬರುತ್ತೇನೆ. ಅಲ್ಲಿ ನೀವೆಲ್ಲ ಸಿದ್ಧತೆಗಳನ್ನು ಮಾಡಿಕೊಳ್ಳಿ" ಎಂದು ತಿಳಿಸಿದರು.

ಗೊತ್ತುಪಡಿಸಿದ ದಿನದಂದು ಶರಣಪ್ಪನವರು ಅಮಲಾಪುರಕ್ಕೆ ಹೋದರು. ಅಲ್ಲಿ ಮೂರು ದಿವಸಗಳ ಕಾಲ ತಂಗಿ ಶಿವಧ್ಯಾನ ಮಾಡಿ ಮೂರನೇ ದಿನ ಊರಿನ ಹಿರಿಯರನ್ನೆಲ್ಲ ಕರೆದು ದೇವಾಲಯವನ್ನು ಅಲಂಕರಿಸಲು ಹೇಳಿದರು. ಅದರಂತೆ ದೇವಾಲಯವನ್ನು ಅಲಂಕರಿಸಿದರು. ಶರಣಪ್ಪನವರು ಭಕ್ತರಿಗೆಲ್ಲ ಹತ್ತಿರ ಕರೆದು ಹೇಳಿದರು. "ನಾನು ಶಿವಾಜ್ಞೆಯಂತೆ ಗರ್ಭಗುಡಿಯ ಒಳಗೆ ಇರುತ್ತೇನೆ. ಯಾರು ಅದನ್ನು ತೆಗೆಯದಿರಿ, ಬೀಗವನ್ನು ಹಾಕಿರಿ, ಬಾಗಿಲಿನ ಮುಂದೆ ತೆಂಗಿನಕಾಯಿಯನ್ನು ಹೊಡೆದು ನಿಂಬೆಹಣ್ಣನ್ನು ಕೊಯ್ದು ಬಾಗಿಲಿನ ಎರಡು ಬದಿಗಳಲ್ಲಿ ಇಡಬೇಕು. ಅವೆರಡು ಸೇರಿಕೊಂಡಾಗ ಬಸವಣ್ಣನ ಶಿರ ಕೂಡುತ್ತದೆ. ಯಾರೂ ಗಲಾಟೆ ಮಾಡದೆ ಮಾತಿಗೆ ತಪ್ಪಬಾರದು" ಎಂದು ಹೇಳಿ ಗುಡಿಯ ಒಳಗೆ ಹೋಗಿ ರಾತ್ರಿಯಿಂದ ಬೆಳಗಿನ ತನಕ ಜನರೆಲ್ಲ ಗರ್ಭಗುಡಿಯ ಬಾಗಿಲನ್ನೇ ದಿಟ್ಟಿಸಿ ನೋಡುತ್ತ ನಿಂತಿದ್ದರು ರಾತ್ರಿ ಕಳೆದು ಬೆಳಗಾಗುತ್ತಿದ್ದಂತೆ ಬಾಗಿಲಲ್ಲಿ ಒಡೆದ ತೆಂಗಿನಕಾಯಿ ಮತ್ತು ಕೊಯ್ದಿಟ್ಟ ನಿಂಬೆಹಣ್ಣಿನ ಹೋಳುಗಳು ಒಂದುಗೂಡಿದ್ದವು; ಜನರಿಗೆ ಆಶ್ಚರ್ಯವಾಯಿತು. ಅಷ್ಟರಲ್ಲಿ ಗರ್ಭಗುಡಿಯ ಬಾಗಿಲು ತಟ್ಟುವ ಶಬ್ದ ಕೇಳಿ ಬಂದಿತು. ಬೀಗ ಹಾಕಿದ್ದ ಬಾಗಿಲನ್ನು ತೆರೆದು ಶರಣಪ್ಪನವರು ಒಳಗಿನಿಂದ ಹೊರಬಂದರು. ಎಲ್ಲರೂ ಗರ್ಭಗುಡಿಯಲ್ಲಿದ್ದ ಬಸವಣ್ಣನ ಶಿರವನ್ನು ನೋಡಿದರು; ಶಿರವು ಕೂಡಿತ್ತು ಎಲ್ಲರಿಗೆ ಆಶ್ಚರ್ಯ. ಒಳಗೆ ಹೋಗಿ ಕಳಚಿರುವ ಶಿರವನ್ನು ಲೇಪಿಸಿರಬಹುದೆಂದು ಪರೀಕ್ಷಿಸಿದರು. ಆದರೆ ಅಲ್ಲಿ ಲೇಪಿಸಿರುವ ಯಾವ ಲಕ್ಷಣವೂ ಕಾಣಸಿಗಲಿಲ್ಲ. ನಂತರ ಕೆಲವರು ಮತ್ತೆ ಪರೀಕ್ಷಿಸಲು ಶಿರವನ್ನು ಹಿಡಿದು ಎಳೆದರು. ಅದು ಬರಲಿಲ್ಲ ಜಗ್ಗದೆ ಕುಳಿತಿರುವುದನ್ನು ಕಂಡು ತಾವು ಮಾಡಿರುವ ಪರೀಕ್ಷೆಗಳು ತಪ್ಪೆಂದು ಅರಿತುಕೊಂಡು ಶರಣಪ್ಪನವರಿಗೆ ಊರಿನ ಭಕ್ತ ಜನಸಮೂಹವೆಲ್ಲ ವಂದಿಸಿದರು.

ಅಂದಿನಿಂದ ಕಾನಾಮಡುಗಿನ ಶರಣಪ್ಪನವರ ಆಶೀರ್ವಾದ - ಅನುಗ್ರಹ ಪಡೆಯಲು ಜನರು ಗುಂಪು ಗುಂಪಾಗಿ ಕಾನಾಮಡುಗಿಗೆ ಬರಲು ಪ್ರಾರಂಭಿಸಿದರು. ಕಾನಮಡುಗಿನ ಜೊತೆಗೆ ಶರಣಪ್ಪನ ಹೆಸರನ್ನು ಸೇರಿಸಿ ಕಾನಾಮಡುಗು ಶರಣಪ್ಪನೆಂದು ಕರೆಯಲು ಪ್ರಾರಂಭಿಸಿದರು.

ಒಂದು ದಿನ ಮಠದಲ್ಲಿ ತುಪ್ಪದ ಮಹಿಮೆಯನ್ನು ಶರಣಪ್ಪನವರು ತೋರಿದರು. ಒಮ್ಮೆ ಉಜ್ಜಯಿನಿ ಜಗದ್ಗುರು ಚನ್ನವೀರರಾಜದೇಶಿಕೇಂದ್ರ ಮಹಾಸ್ವಾಮಿಗಳವರು ಆಗಮಿಸಿದ್ದರು. ಅಂದು ಮಠದಲ್ಲಿ ನಡೆಯುತ್ತಿರುವ ಆರಾಧನೆಯ ಕೊನೆಯ ದಿನ. ಅಂದು ವಿಧವಿಧದ ಅಡುಗೆಯು ಸಿದ್ಧವಾಗಿತ್ತು. ಮಠದಲ್ಲಿ ಆರಾಧನೆಯ ಪೂಜೆಯು ಸಮಾಪ್ತಿಯಾದ ನಂತರ ಎಲ್ಲರೂ ಊಟಕ್ಕೆಂದು ಕುಳಿತಿರುವಾಗ ಊಟಕ್ಕೆ ತುಪ್ಪವಿರುವುದಿಲ್ಲ. ಹೊರಗಡೆ ಎಲ್ಲೂ ಮೀಸಲು ತುಪ್ಪ ಸಿಗುವುದಿಲ್ಲ. ಆಗ ಶರಣಪ್ಪನವರು ಇದಕ್ಕೇಕೆ ಎಲ್ಲರೂ ಯೋಚಿಸುತ್ತಿರುವಿರಿ. ಶಿವನನ್ನು ನೆನೆದರೆ ಕೊಡದಿರುವನೇ ಎಂದು ಕೊಡವನ್ನು ತೆಗೆದುಕೊಂಡು ಬಾವಿಗೆ ಹೋಗಿ ಗಂಗೆಯನ್ನು ಮನದಲ್ಲಿ ನೆನೆದು ಪೂಜೆಯನ್ನು ಮಾಡಿ ಭಕ್ತರಿಗೆ ಹೇಳಿದರು. ಈಗ ಹೋಗಿ ಐದು ಕೊಡ ತುಪ್ಪವನ್ನು ತನ್ನೀರಿ ಆಮೇಲೆ ಕೊಟ್ಟರಾಯಿತೆಂದರು. ಗಂಗೆಯ ಬಾವಿಯಲ್ಲಿರುವುದು ಬರಿ ನೀರು ಶರಣರು ಇದನ್ನು ತುಪ್ಪವೆನ್ನುತ್ತಾರಲ್ಲವೆಂದು ಮನದಲ್ಲಂದುಕೊಂಡು ಹೋಗಿ ಕೊಡವನ್ನು ಬಾವಿಗೆ ಬಿಟ್ಟು ಮೇಲೆ ತೆಗೆಯಲು ಐದು ಕೊಡವೆಲ್ಲ ತುಪ್ಪವಾಯಿತು. ಇದನ್ನು ತಂದು ಎಲ್ಲರೂ ಊಟದಲ್ಲಿ ಬಡಿಸಿಕೊಂಡು ಉಂಡು ತೃಪ್ತಿಪಟ್ಟರು. ಶರಣಪ್ಪನವರು ನೀರಿನ ಬಾವಿಯಿಂದ ತುಪ್ಪವನ್ನು ತರಿಸಿದ್ದನ್ನು ಕಂಡ ಭಕ್ತ ಜನಸಮುದಾಯ ಶರಣು ಶರಣಾರ್ಥಿ ಎಂದು ಜಯ ಘೋಷಣೆಗಳಿಂದ ವಂದಿಸಿದರು.

ಕುಮತಿ ಎಂಬ ಗ್ರಾಮದಲ್ಲಿ ಮಾರಿಕಾಬೇನೆಯನ್ನು ನಿವಾರಣೆ ಮಾಡಿದ್ದರು. ಕಾನಾಮಡುಗುವಿಗೆ ಹದಿನೈದು ಕಿಲೋ ಮೀಟರ್ ದೂರದಲ್ಲಿರುವ ಕುಮತಿ ಗ್ರಾಮದಲ್ಲಿ ಮಾರಿಕಾಬೇನೆ ಆವರಿಸಿ ಅದರ ಹಾವಳಿಯಿಂದ ಜನರು ತತ್ತರಿಸಿದ್ದರು. ಆ ಗ್ರಾಮದ ಜನರೆಲರೂ ಕಾನಾಮಡುಗಿನ ಶರಣಪ್ಪನವರಲ್ಲಿಗೆ ಬಂದು ಭಯ - ಭಕ್ತಿಯಿಂದ ನಮಸ್ಕರಿಸಿ ತಮ್ಮ ಗ್ರಾಮದಲ್ಲಿ ತಾಂಡವಾಡುತ್ತಿರುವ ಮಾರಿಕಾಬೇನೆಯನ್ನು ನಿವಾರಣೆ ಮಾಡಲು ಕೇಳಿಕೊಂಡರು. ಆಗ ಶರಣಪ್ಪನವರು ಎಲ್ಲಾ ಶಿವೇಚ್ಛೆಯೆಂದು ಅವರೊಂದಿಗೆ ಕುಮತಿ ಗ್ರಾಮಕ್ಕೆ ಹೊರಟರು. ಆ ಗ್ರಾಮದ ಪ್ರತಿಯೊಂದು ಮೂಲೆಮೂಲೆಯಲ್ಲೂ ಸಂಚರಿಸಿ ಶಿವನಾಮವನ್ನು ಘೋಷಿಸುತ್ತಾ ಸಂಚಾರ ಮಾಡಿದರು. ನಂತರ ಗ್ರಾಮದ ಜನರಿಗೆ ಹೇಳಿದರು. ಇನ್ನು ನೀವು ಈ ಮಾರಿಕಾಬೇನೆಗೆ ಭಯಪಡುವ ಅಗತ್ಯವಿಲ್ಲ; ಆರಾಮಾಗಿರಿ! ಈ ಮಾರಿಕಾಬೇನೆ ನಿವಾರಣೆ ಮಾಡಿರುವುದನ್ನು ಕಂಡು ಕುಮತಿ ಗ್ರಾಮದ ಜನರು ಸಂತೋಷಪಟ್ಟರು.

ಶರಣಪ್ಪನವರು ಶಿವೈಕ್ಯರಾಗುತ್ತಾರೆಂಬ ಸುದ್ದಿ ತಿಳಿದ ಭಕ್ತರೆಲ್ಲ ಬಂದು ಅವರ ಬಳಿಯಲ್ಲಿ ನಿಂತು ದುಃಖತಪ್ತರಾಗಿ ಮೌನಿಗಳಾಗಿ ಮಾತಾಡದೆ ನೋಡುತ್ತಿದ್ದರು. ಅದನ್ನು ಅರಿತ ಶರಣಪ್ಪನವರು ಈ ದೇಹವೆಂಬುದು ಭಗವಂತನು ಸೃಷ್ಟಿಸಿರುವ ವಸ್ತು, ಇದರಲ್ಲಿ ಜೀವಾತ್ಮದ ಪ್ರವೇಶವನ್ನು ಮಾಡಿಸಿರುವನು ಈ ಜೀವಾತ್ಮವು ಮರಳಿ ಆ ಭಗವಂತನ ಸನಿಹ ಬಯಸಿ

ಹೋಗುತ್ತಿರುವುದಕ್ಕೆ ಪರಮಾತ್ಮನ ಪ್ರೀತಿ ಅನುಗ್ರಹವೆ ಮುಖ್ಯ. ಅದು ಜೀವಾತ್ಮಕ್ಕೆ ಸಿಕ್ಕುದ್ದಾಗಿದೆ, ಈ ಜೀವಾತ್ಮ ದೇಹದಲ್ಲಿ ಸೇರಿ ಲೌಕಿಕ ಬಂಧನದಲ್ಲಿದ್ದು ಎಲ್ಲ ಕೆಲಸ ಕಾರ್ಯಗಳನ್ನು ನಿರಂತರವಾಗಿ ನಡೆಸಿ ತಾನು ತನ್ನದೆಂಬ ಮೋಹ ಪಾಶಕ್ಕೆ ಸಿಲುಕಿ ನಂತರ ಅದೆಲ್ಲದರಿಂದ ಮುಕ್ತಿಯನ್ನು ಪಡೆಯಲು ಪರಮಾತ್ಮನಲ್ಲಿ ಮೊರೆಹೋಗುವುದು. ಅವನ ಅನುಗ್ರಹ ಆಶೀರ್ವಾದದಿಂದ ಮುಕ್ತಿ ದೊರಕಿ ಪರಮಾತ್ಮನ ಸಾಮೀಪ್ಯದಲ್ಲಿ ಲೀನವಾಗುವುದು ಇದನ್ನರಿತ ಜನರು ಶರಣಪ್ಪನವರಿಗೆ ವಂದಿಸುವರು. ಶರಣಪ್ಪನವರು ಧ್ಯಾನದ ರೀತಿಯಲ್ಲಿಯೇ ಕುಳಿತು ೧೮೦೫ನೆಯ ಸಂವತ್ಸರ ಅಶ್ವೀಜ ಶುಕ್ಲಪಕ್ಷದ ಚತುರ್ದಶಿಯ ಸೋಮವಾರದಂದು ಶಿವೈಕ್ಯರಾದ ರೆಂಬುದು ತಿಳಿದುಬರುತ್ತದೆ.

## ಗದ್ದಿಕೆರೆ ದೊಡ್ಡ ಬಸಪ್ಪ

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿರುವ ಒಂದು ಗ್ರಾಮ ಗದ್ದಿಕೆರೆ. ಈ ಗದ್ದಿಕರೆ ಪ್ರಸಿದ್ಧಿಯಾಗಿರುವುದು ಇಲ್ಲಿರುವ ದೊಡ್ಡಬಸಪ್ಪ ಎಂಬ ಶರಣನಿಂದ. ಈ ಶರಣಪ್ಪನವರ ಗದ್ದುಗೆಗೆ ಐದುನೂರು ಸಾವಿರ ವರ್ಷಗಳ ಇತಿಹಾಸವಿದೆ. ಬಸಪ್ಪ ಶರಣರೆಂದರೆ ಈ ಊರಿನ ಜನರಿಗೆ ಅಪಾರ ಭಯ ಭಕ್ತಿಯಿದೆ. ಅಷ್ಟೇ ನಂಬಿಕೆಯಿಂದ ನಡೆದುಕೊಳ್ಳುತ್ತಾರೆ.

ದೊಡ್ಡ ಬಸಪ್ಪನವರ ಜನನ ಗದ್ದಿಕೆರೆಯಲ್ಲಿಯೇ ಆಗಿದ್ದು ಹುಟ್ಟಿನಿಂದ ಕೃಷಿಕರು. ವ್ಯವಸಾಯ ಮಾಡುತ್ತ ಬೆಳೆದವರು ಈ ದೊಡ್ಡ ಬಸಪ್ಪ ಶರಣರು. ಚಿಕ್ಕವಯಸ್ಸಿನಲ್ಲಿಯೇ ಬಸ್ವಪ್ಪನವರು ತಂದೆ ತಾಯಿಯೊಂದಿಗೆ ಕೃಷಿ ಕಾಯಕದಲ್ಲಿ ನೆರವಾಗುತ್ತ ಅವರು ತಮ್ಮನ್ನು ಈ ವೃತ್ತಿಯಲ್ಲಿಯೇ ತೊಡಗಿಸಿಕೊಂಡರು. ಬೆಳೆದು ದೊಡ್ಡವರಾದಂತೆಲ್ಲ ಎತ್ತುಗಳನ್ನಿಡಿದು ನೇಗಿಲು ಹೊಡೆದು ಬಿತ್ತನೆಯ ಕಾರ್ಯವನ್ನೆಲ್ಲ ಸ್ವತಃ ಮಾಡುತ್ತಿದ್ದರು. ಊರಿನಲ್ಲಿ ಎಲ್ಲರೊಂದಿಗೆ ಬೆರೆತು ನಯವಿನಯದಿಂದ ಎಲ್ಲರ ಪ್ರೀತಿ, ವಿಶ್ವಾಸವನ್ನು ಗಳಿಸಿದ್ದರು. ಯಾವ ಜಾತಿ ಧರ್ಮಗಳ ಭೇದಭಾವವಿಲ್ಲದೆ ಎಲ್ಲರೊಂದಿಗೆ ಬೆರೆಯುತ್ತಿದ್ದರು. ಮೂಲತಃ ವೀರಶೈವ ಧರ್ಮದಲ್ಲಿ ಹುಟ್ಟಿ ಬೆಳೆದರೂ ಇವರಲ್ಲಿ ಕುಲ ಧರ್ಮದ ಬಗ್ಗೆ ತಾರತಮ್ಯವಿರಲಿಲ್ಲ. ಇವರ ಮನಸ್ಸಿನ ತುಂಬ ಶಾಂತಿ, ಕರುಣೆ, ಪ್ರೀತಿ, ಸಹನೆಯೇ ಮನೆಮಾಡಿತ್ತು. ಲಿಂಗಪೂಜೆಯಲ್ಲಿ ಒಲವಿತ್ತು. ಧರ್ಮಗಳ ಕಿತ್ತಾಟ, ಜಾತಿ - ಕುಲಗಳ ಪರದಾಟ, ಬಡತನ - ಸಿರಿತನವೆಂಬ ಅಂತರಗಳಲ್ಲಿ ನೋವಿತ್ತು. ಸದಾ ಶಿವನ ಧ್ಯಾನ ಪೂಜೆಯಲ್ಲಿ ನಿರತನಾಗಿರುತ್ತಿದ್ದು ಆಧ್ಯಾತ್ಮದಲ್ಲಿ ಸದಾ ತನ್ನನ್ನು ತೊಡಗಿಸಿಕೊಳ್ಳುತ್ತ ಪರಮಾತ್ಮನ ಪ್ರೀತಿಗಾಗಿ ಪರದಾಡುತ್ತಿದ್ದ.

ತಾನು ಕೃಷಿಯಲ್ಲಿ ದುಡಿದು ಬಂದ ಪ್ರತಿಫಲದಲ್ಲಿ ಇತರರಿಗೆ ಸಹಾಯ ಮಾಡುತ್ತಿದ್ದ. ಲೌಕಿಕ ಜೀವನವನ್ನು ನಿತ್ಯ ನೋಡುತ್ತ ಪರಮಾತ್ಮನಲ್ಲಿ ಪ್ರಾರ್ಥಿಸುತ್ತಿದ್ದ. ಸೃಷ್ಟಿಯಲ್ಲಿ ಇರುವ ಪರದಾಟಗಳನ್ನು ನೆನೆದು ಭಗವಂತನ ಲೀಲೆಯನ್ನು ಕಣ್ಮುಚ್ಚಿ ನೆನೆಯುತ್ತಿದ್ದ. ಮುಕ್ತಿಯ ಮಾರ್ಗವನ್ನು ನೆನೆದು ಮೌನಿಯಾಗಿದ್ದು ತನ್ನ ಕಾಯಕದಲ್ಲಿ ಭಗವಂತನನ್ನು ಕಾಣುತ್ತಿದ್ದ.

ವ್ಯವಸಾಯ ಮಾಡುತ್ತ ಅದರ ಜೊತೆಗೆ ಸಿಗುವಷ್ಟು ಸಮಯದಲ್ಲಿ ಶಿವನ ಧ್ಯಾನ ಮಾಡುತ್ತ ದಿನಗಳೆಯುತ್ತಿದ್ದ. ಶಿವನಲ್ಲಿ ತನ್ನ ಮುಕ್ತಿಯ ಮಾರ್ಗವನ್ನು ಕಂಡುಕೊಳ್ಳುತ್ತಿದ್ದ ದಿನೇ ದಿನೇ ತನ್ನನ್ನು ತಾನು ಪಾರಮಾರ್ಥಿಕವಾಗಿ ಧ್ಯಾನದಲ್ಲಿ ಲೀನವಾಗುತ್ತ ತನ್ನ ಶರಣತ್ವಕ್ಕೆ ಶಕ್ತಿಯನ್ನು ಕಂಡುಕೊಂಡ ಶರಣರು ಸದಾ ಶಿವನ ಧ್ಯಾನ ಮಾಡುತ್ತ ಪರರ ಪರದಾಟದ ಜೀವನಕ್ಕೆ ದಾರಿದೀಪವಾಗುವಂತೆ ಅದನ್ನು ನಿಜವಾಗಿಸಿದ. ಊರಿನ ಜನರಲ್ಲಿ ಅವರ ಜೀವನ ಮಾರ್ಗದ ತಪ್ಪುಗಳನ್ನು - ಅಡೆತಡೆಗಳನ್ನು ತಿದ್ದಿದ. ಸಹನೆ ಶಾಂತಿ ಶರಣರ ಆಸ್ತಿಯೆಂಬುದನ್ನು ತೋರಿಸಿಕೊಟ್ಟ. ದೊಡ್ಡಬಸಪ್ಪನ ನಡತೆ ಶಾಂತತೆಯ ಗುಣಗಳು ಜನರಿಗೆ ಇಷ್ಟವಾಗತೊಡಗಿದವು. ಶರಣ ದೊಡ್ಡಬಸಪ್ಪ ಏಕಾಂತವಾಗಿ ಹೊಲದಲ್ಲಿಯೇ ಹೆಚ್ಚಾಗಿ ಇರುತ್ತಿದ್ದದ್ದನ್ನು ಕಂಡು ಶರಣ ದೊಡ್ಡಬಸಪ್ಪ ಯಾಕೆ ನಮ್ಮವರಂತೆ ನೀನೇಕಿಲ್ಲ. ನಿನ್ನ ಮನದ ಮೌನ ನಮ್ಮವರಿಗಿಲ್ಲ ಇದನ್ನು ನೀ ತಿಳಿಸು. ಶರಣ ದೊಡ್ಡಬಸಪ್ಪ "ನಾನು ಒಬ್ಬ ಶರಣ; ನನ್ನ ಮನ ತನವೇನಿದ್ದರೂ ನನ್ನ ತಂದೆ ಪರಮಾತ್ಮನಿಗೆ ಸಂಬಂಧಿಸಿದವು; ನಾನು ಎಂಬುದು ಅಹಂ, ನನ್ನದು ಎಂಬುದು ದುರಹಂಕಾರ, ಇದನ್ನೆಲ್ಲ ಬಿಟ್ಟು ದೇಹದ ಮೇಲಿನ ಮೋಹವು ಬಿಟ್ಟು ಜಗತ್ತು ಜಗತ್ತಿನ ಜನರೆಲ್ಲ ಒಂದೇ ಅರಿವಿಲ್ಲದೆ ನಡೆವ ನುಡಿವ ಅವರನ್ನು ಜಾಗೃತಗೊಳಿಸಿ ಶುದ್ಧ ಮನಸ್ಸನ್ನು ಪಡೆಯುವ ಬಗೆಯನ್ನು ತಿಳಿಸುವುದೇ ಶರಣಧರ್ಮ. ನಾನು ನಾನಲ್ಲ ನಾನೊಬ್ಬ ಶರಣ ಶರಣನಿಗೆ ಮೌನ ಶಾಂತಿ, ಸಹನೆ ಎಂಬುದು ಪರಮಾತ್ಮ ನಮಗೆ ನಮಗರಿವಿಲ್ಲದಂತೆ ನೀಡಿರುವ ವರವೆನ್ನುವನು. ಇದನ್ನು ಕೇಳಿದ ಊರಿನ ಕೆಲ ಜನರು ಸಂತೋಷಗೊಂಡು ಮುಂದೆ ನಡೆದರು. ದೊಡ್ಡಬಸವಪ್ಪನ ಶರಣತ್ವವು ಪ್ರಸಿದ್ಧಿಗೆ ಬಂತು. ಊರಿನ ಜನರೆಲ್ಲ ಬಸಪ್ಪನಿಗೆ ಶರಣಾರ್ಥಿ ಎಂದು ನಮಿಸಲು ಮುಂದಾದರು. ಶರಣನಾದರೂ ಕೃಷಿಕಾಯಕವನ್ನು ಮುನ್ನಡೆಸಿಕೊಂಡು ಶರಣರಿಗೂ ಕಾಯಕದಲ್ಲಿರುವ ಒಲವನ್ನು - ಶ್ರಮವನ್ನು ಇತರರಿಗೆ ತೋರಿಸಿಕೊಟ್ಟರು. ಅಂಧಕಾರದಲ್ಲಿದ್ದ ಕೆಲ ಸೋಮಾರಿಗಳಿಗೆ ದುಡಿಮೆಯಿದ್ದು, ಶಕ್ತಿಯಿದ್ದು, ತಿಂದುಂಡು ಮಲಗುವ ಯುವಕರಿಗೆ ದಾರಿದೀಪವಾದರು. ಚಿಲುಮೆಯ ಶಕ್ತಿಯಾಗಿ ನವ ಚೈತನ್ಯದ ಸ್ಫೂರ್ತಿಯಾಗಿ ಪ್ರತಿಯೊಬ್ಬರಿಗೂ ದುಡಿಮೆಯೇ ದೇವರೆಂಬುದನ್ನು ತೋರಿಸಿಕೊಟ್ಟರು. ಅವರವರ ಕರ್ಮದ ಫಲವನ್ನು ಅವರು ಕಳೆದುಕೊಂಡರೇನೇ ಅವರಿಗೆ ಫಲ ದೊರೆಯುವುದೆಂಬ ಮಾತನ್ನು ಮನದಟ್ಟು ಮಾಡಿದರು.

**ಬಸವಪ್ಪನವರ ಮಹಿಮೆಗಳು**

ಒಮ್ಮೆ ದೊಡ್ಡಬಸಪ್ಪ ಶರಣರು ಹೊಲದಲ್ಲಿ ನೇಗಿಲು ಹೊಡೆದು ಬಿತ್ತನೆ ಮಾಡಬೇಕಾಗಿತ್ತು. ಆಗ ಅವರ ಬಳಿ ಎತ್ತುಗಳು ಇರುವುದಿಲ್ಲ. ಶರಣಪ್ಪನವರು ತಾವು ತಮ್ಮ ಧ್ಯಾನ ಶಿವಪೂಜೆಯಿಂದ ಪಡೆದ ಶಕ್ತಿಯಿಂದ ಶಿವನನ್ನು ಮನದಲ್ಲಿ ನೆನೆದು ಹೂಳಲು ಸಿದ್ಧನಾಗುತ್ತಾನೆ. ಹೊಲವನ್ನು

ಹೂಳುವ ದೃಶ್ಯ ಕಂಡು ಊರ ಜನರು ಗಾಬರಿಯಾಗಿ ನೋಡತೊಡಗಿದರು. ಬಸಪ್ಪನವರು ಹೊಲವನ್ನು ಎತ್ತುಗಳ ಬದಲಾಗಿ ಹುಲಿಗಳನ್ನು ಹೂಡಿ ನೇಗಿಲನ್ನು ಹೊಡೆದನು. ಅವನ ಶರಣತ್ವಕ್ಕೆ ಹುಲಿಗಳು ಕೂಡ ಶರಣಾಗಿದ್ದವು.

ಊರಿನ ಅನೇಕ ಜನರು ತಮಗೆ ಬಂದಿರುವ ರೋಗ ನಿವಾರಣೆಗಾಗಿ ದೊಡ್ಡ ಬಸಪ್ಪನವರನ್ನು ನೆನೆದು ಅವರಲ್ಲಿಗೆ ಹೋದಾಗ ಶಿವನಾಮವನ್ನು ಜಪಿಸಿ ಇವರ ರೋಗ ನಿವಾರಣೆಯನ್ನು ಮಾಡುತ್ತಿದ್ದನು. ಅವರಿಗೂ ಶಿವನನ್ನು ನೆನೆಯಿರಿ ಎಂದು ಹೇಳುತ್ತಿದ್ದನು. ಜನರು ಸಂತೋಷದಿಂದ ದೊಡ್ಡಬಸಪ್ಪನಿಗೆ ನಮಿಸಿ ಬರುತ್ತಿದ್ದರು.

ಹೊಲದಲ್ಲಿ ಒಮ್ಮೆ ನೇಗಿಲು ಹೊಡೆಯುವಾಗ ನೇಗಿಲನ್ನು ಹಗ್ಗದಿಂದ ಕಟ್ಟಿ ಹಿಡಿಯಬೇಕು. ಆಗ ಹೊಲದ ತುಂಬ ಆ ಕಡೆ ಈ ಕಡೆ ಸುತ್ತಾಡಿದರೂ ಎಲ್ಲೂ ಹಗ್ಗ ಸಿಗುವುದಿಲ್ಲ. ಅದೇ ಸಮಯಕ್ಕೆ ಸರಿಯಾಗಿ ಹಾವೊಂದು ಬಂದಿತ್ತು ಆಗ ಬಸಪ್ಪನವರು ಅದೇ ಹಾವನ್ನು ಹಗ್ಗವಾಗಿ ಹಿಡಿದು ಕಟ್ಟಿ ಹೊಲಕ್ಕೆ ನೇಗಿಲನ್ನು ಹೊಡೆದರು ಅಲ್ಲಿದ್ದ ಜನರೆಲ್ಲ ಮೌನದಿಂದ ಅಲುಗಾಡದೆ ನೋಡುತ್ತ ಬಸಪ್ಪ ನಿನ್ನ ಮಹಿಮೆ ದೊಡ್ಡದು ನೀನೊಬ್ಬ ಮಹಾನ್ ಶರಣ ಶರಣರಲ್ಲಿರುವ ಶರಣತ್ವದ ಶಕ್ತಿಯನ್ನು ಅಂಧಕಾರದಲ್ಲಿರುವ ನಮಗೆಲ್ಲ ತೋರಿಸಿದೆಯಯ್ಯಾ ನೀನೆಂದು ಜನರೆಲ್ಲ ವಂದಿಸಿದರು. ಇವರ ಮಹಿಮೆಯನ್ನು ಸುತ್ತಮುತ್ತಲಿನ ಜನಕ್ಕೆಲ್ಲ ತಿಳಿಸಿದರು ಸುತ್ತಲಿನ ಜನರೆಲ್ಲ ಗದ್ದಿಕೆರೆಯತ್ತ ಗದ್ದಿಕೆರೆ ದೊಡ್ಡಬಸಪ್ಪನನ್ನು ನೋಡಲು ಅವರ ಅನುಗ್ರಹ ಪಡೆಯಲು ಓಡೋಡಿ ಬರತೊಡಗಿದರು.

ಕೆಲವರಿಗೆ ಕಷ್ಟವಿದೆ, ಮನದ ತುಂಬೆಲ್ಲ ನೋವಿದೆ; ಇಂಥ ಪಾಪದ ಜೀವನದಿಂದ ನಮ್ಮನ್ನು ಕಾಪಾಡೆಂದು ಬಸವಪ್ಪನಲ್ಲಿ ಕೇಳಿಕೊಂಡಾಗ ದೊಡ್ಡಬಸಪ್ಪನು ಭಸ್ಮವನ್ನು ಹಣೆಗೆ ಹಚ್ಚಿ 'ಶಿವನನ್ನು ನೆನೆಯಿರಿ, ಮನದಲ್ಲಿನ ಭಯವೆಲ್ಲ ನಿವಾರಣೆಯಾಗುವುದು' ಎಂದು ಆಶೀರ್ವದಿಸುತ್ತಿದ್ದರು. ಇದರಿಂದ ಸಂತಸಗೊಂಡ ಭಕ್ತರು ಭಸ್ಮವನ್ನು ಉಪಯೋಗಿಸಿ ಕಷ್ಟ ಪರಿಹಾರ ಮಾಡಿಕೊಂಡರು. ಭಸ್ಮ - ವಿಭೂತಿಯಿಂದ ಭಗವಂತನನ್ನು ಪ್ರಾರ್ಥಿಸುತ್ತ ಬಡತನವೆಂಬ ಕಷ್ಟ ನಿವಾರಣೆಯನ್ನು ಮಾಡಿಕೊಂಡರು.

ಒಮ್ಮೆ ಶರಣ ದೊಡ್ಡಬಸಪ್ಪನಲ್ಲಿಗೆ ಊರಿನ ಭಕ್ತನೊಬ್ಬನು ಬಂದು "ಕಷ್ಟದಿಂದ ಕೃಷಿ ಮಾಡಲೆಂದು ಜೋಡಿ ಎತ್ತುಗಳನ್ನು ಕೊಂಡು ತಂದಿರುವೆ ಬಸವಪ್ಪ. ಇಂದು ಅವೆರಡು ಸುಸ್ತಾಗಿ ನೆಲಕಚ್ಚಿವೆ ಏನು ಮಾಡಿದರೂ ಮೇಲೇಳಲೊಲ್ಲವು ಏನು ಮಾಡಲಿ? ಶರಣ ನೀನೇ ಕಾಪಾಡಬೇಕು" ಎಂದು ಬೇಡಿಕೊಂಡನು. ನಡೆ ನೋಡುವೆ ಎಂದು ಅವನ ಜೊತೆ ಹೋಗಿ ನೋಡಿದರೆ ಭಯಂಕರ ರೋಗದಿಂದ ನರಳುತ್ತಾ ಈಗೋ ಆಗೋ ಎನ್ನುವ ಸ್ಥಿತಿಯಲ್ಲಿದ್ದವು. ಅಂಥವುಗಳನ್ನು ಮೈ ಮುಟ್ಟಿ ಸವರುತ್ತಾ ಶಿವನಾಮ ಜಪಿಸುತ್ತ ಶಿವಧ್ಯಾನದಲ್ಲಿ ಅರ್ಧ ಗಂಟೆಯೊಳಗೆ ಎರಡು ಎತ್ತುಗಳು ಮೇಲೆದ್ದು, ಓಡಾಡಿಕೊಂಡು ನಲಿಯುವಂತೆ ಮಾಡಿದ.

ಅದನ್ನು ಕಂಡು ಎತ್ತುಗಳ ಮನೆಯವರು ಸಂತಸಗೊಂಡು ಊರಿನವರಿಗೆಲ್ಲ ವಿಷಯ ತಿಳಿಸಿದರು. ದೊಡ್ಡ ಬಸಪ್ಪನವರ ಈ ಮಹಿಮೆಯನ್ನು ಕಂಡು ಊರಿನ ಜನರೆಲ್ಲ ಮೆಚ್ಚಿ ಕೊಂಡಾಡಿದರು. ದಿನ ಕಳೆದಂತೆಲ್ಲ ಬಸಪ್ಪನವರ ಕೀರ್ತಿ ಎಲ್ಲೆಡೆ ಹರಡಿ ದೊಡ್ಡಬಸವಪ್ಪನ ಅನುಗ್ರಹಕ್ಕಾಗಿ ಬರಲು ಪ್ರಾರಂಭಿಸಿದರು. ಬಸಪ್ಪನನ್ನು ಗದ್ದಿಕೆರೆ ದೊಡ್ಡಬಸಪ್ಪನೆಂದು ಕರೆಯುತ್ತ ಗದ್ದಿಕೆರೆ ಎಂಬ ಹೆಸರು ಮತ್ತು ಈ ಗ್ರಾಮವು ಎಲ್ಲ ಕಡೆಗೆ ಚಿರಪರಿಚಿತವಾಗುತ್ತ ಪ್ರಸಿದ್ಧಿಯನ್ನು ಪಡೆಯಿತು.

ಗದ್ದಿಕೆರೆ ದೊಡ್ಡ ಬಸಪ್ಪ ಶರಣರು ಅಧಿಕ ಸಂಖ್ಯೆಯಲ್ಲಿ ಭಕ್ತಾಧಿಗಳನ್ನು ಹೊಂದಿದ್ದರು. ಕೆಲ ಭಕ್ತರು ಶರಣ ಬಸಪ್ಪನವರನ್ನು ನಿತ್ಯ ಭೇಟಿ ಮಾಡಿ ಅವರೊಂದಿಗೆ ಮಾತನಾಡಿ ಆಶೀರ್ವಾದ ಪಡೆಯುತ್ತಿದ್ದರೆ, ಇನ್ನು ಕೆಲವು ಭಕ್ತರು ನಿತ್ಯ ಅವರನ್ನು ನೆನೆದು ಉಸಿರಾಡುತ್ತಿದ್ದರು. ಒಟ್ಟಿನಲ್ಲಿ ಭಕ್ತರು ಅವರನ್ನು ನೆನೆಯದೆ ಇರುತ್ತಿರಲಿಲ್ಲ. ಊರಲ್ಲಿ ಏನೇ ಒಳ್ಳೆಯ ಕಾರ್ಯಗಳಿದ್ದರೆ ಇವರ ಒಪ್ಪಿಗೆಯನ್ನು ಪಡೆದೇ ಮಾಡುತ್ತಿದ್ದರು. ಇವರ ಒಪ್ಪಿಗೆಯಿಲ್ಲದಿದ್ದರೆ ಯಾವ ಕೆಲಸ ಕಾರ್ಯಕ್ಕೂ ಕೈ ಹಾಕುತ್ತಿರಲಿಲ್ಲ. ಶರಣರ ಮೇಲೆ ಅಷ್ಟೊಂದು ಭಯ ಭಕ್ತಿಯನ್ನು ಹೊಂದಿದ್ದರು. "ಶರಣರ ಸಂಘ ಸ್ವರ್ಗಕ್ಕೆ ಸುರಂಗ ಮಾರ್ಗವೆಂದು ಬಲ್ಲವರ ಹೇಳಿಕೆ"[೧೮] ಎಂಬಂತೆ ಈ ಜನರಲ್ಲಿ ಶರಣ ದೊಡ್ಡಬಸಪ್ಪ ಮತ್ತು ಅವನ ಶರಣತ್ವದಲ್ಲಿ ಒಂದು ಬಲವಾದ ನಂಬಿಕೆಯಿಟ್ಟಿದ್ದರು.

ಶರಣ ದೊಡ್ಡಬಸಪ್ಪನಿಗೆ ದೊಡ್ಡ ಬಸವೇಶ್ವರನೆಂದೂ ಕರೆಯುತ್ತಿದ್ದರು. ಊರಿನ ಜನರ ಉದ್ಧಾರಕ್ಕೆ, ಜಗದ ಉದ್ಧಾರಕ್ಕಾಗಿ, ಹುಟ್ಟಿ ಬಂದಿರುವನು ನಮ್ಮ ಈ ದೊಡ್ಡ ಬಸವೇಶ್ವರನೆಂದು ಜನರು ನಂಬಿದ್ದರು.

ಪರಮಪೂಜ್ಯ ಶ್ರೀ ಶ್ರೀ ಚರಂತಪ್ಪಯ್ಯ ಮಹಾಸ್ವಾಮಿಗಳರವರು ಶರಣ ದೊಡ್ಡ ಬಸಪ್ಪ (ದೊಡ್ಡಬಸವೇಶ್ವರ)ರನ್ನು ಕುರಿತು ಹೀಗೆ ಹೇಳುತ್ತಾರೆ "ಶ್ರೀಗುರು ದೊಡ್ಡ ಬಸವೇಶ್ವರರು ಅನಂತ ಮಹಿಮೆಗಳನ್ನು ತೋರಿ ಜೀವ ಸಮಾಧಿ ಹೊಂದಿ, ಮೂಲ ಪುರುಷನಲ್ಲಿ ಬೆರೆತು ಮೂಲಪುರುಷನೇ ತಾನಾಗಿ ತಾನೇ ಮೂಲ ಪುರುಷನಾಗಿ ಜಗದೋದ್ಧಾರಕನಾಗಿ ಅವತರಿಸಿಹ ಶ್ರೀ ಗುರುದೊಡ್ಡ ಬಸವೇಶ್ವರನೆಂಬ ನಾಮದಿ, ನಂಬಿ ನೆನೆದವರ ಮನದಿ ನೆಲೆಸಿ ನೆನೆದಂತೆ ಫಲವನಿತ್ತು ಸಲಹುವ ಶ್ರೀವರ ಗುರು ದೊಡ್ಡ ಬಸವೇಶ್ವರನು."[೧೯]

ಎಷ್ಟೇ ಮಹಿಮೆಗಳನ್ನು ತೋರಿ ಪರಮಾತ್ಮನಿಗೆ ಪ್ರೀತಿಯ ಪುತ್ರನಾಗಿ ತನ್ನ ಧ್ಯಾನ ಆಧ್ಯಾತ್ಮದಿಂದ ಭಗವಂತನ ಸಾಮೀಪ್ಯವನ್ನು ಪಡೆದಿದ್ದರೂ, ಎಲ್ಲರಂತೆ ಮನುಷ್ಯ ದೇಹವನ್ನು ಹೊತ್ತವರು. ಅದರಿಂದಾಚೆಯಾಗಿರುವಂಥ ದೇಹವೇನು ಅಲ್ಲ! ಇಂಥ ದೇಹವನ್ನು ಹೊತ್ತು ಈ ಎಲ್ಲ ಸಾಧನೆಗಳನ್ನು ಮಾಡುತ್ತಾರೆ. ಜನರ ಮಧ್ಯ ಬದುಕಿ ಬಾಳಿ ಜನರ ಸೇವೆಯನ್ನು ಮಾಡಿ ಅವರ ಬದುಕಿಗೆ ಒಂದು ಮಾರ್ಗವನ್ನು ತೋರಿ ಮನುಜನಾದವನು ಭೂಮಿಯ ಮೇಲೆ ಈ ಜನ್ಮ ಹೊತ್ತು ಬರುವುದು ಏನಾದರೂ ಒಳಿತನ್ನು ಮಾಡಬೇಕೆನ್ನುವ

ಮನೋಧರ್ಮವನ್ನು ಬೆಳೆಸಿಕೊಂಡು ಸಿದ್ಧಿ ಸಾಧನೆಯನ್ನು ಪಡೆದು ಬಾಳಿ ಬದುಕಬೇಕೆನ್ನುವುದನ್ನು ಈ ಶರಣರು ತೋರಿಸಿಕೊಟ್ಟಿದ್ದಾರೆ. ಗದ್ದಿಕೆರೆ ದೊಡ್ಡಬಸಪ್ಪನವರು ಭಕ್ತಜನರ ಮನದಲ್ಲಿ ಬೆರೆತು ದೇವರೆಂದು ಪೂಜಿಸಿಕೊಳ್ಳುತ್ತಾರೆ. ಶರಣಪ್ಪ, ತಂದೆ ದೇವ ಎಂದೇ ಕರೆಯುತ್ತಾರೆ.

ಗದ್ದಿಕೆರೆ ದೊಡ್ಡಬಸಪ್ಪನವರು ತಮ್ಮ ಜೀವನದ ಕೊನೆಯ ದಿನಗಳಲ್ಲಿ ಜನರ ಮಧ್ಯದಲ್ಲಿ ಇರುವಾಗಲೇ ಜೀವ ಸಮಾಧಿಯಾಗಲು ಬಯಸುತ್ತಾರೆ. ಒಂದು ದಿನ ಗದ್ದಿಕೆರೆ ಮತ್ತು ಸುತ್ತಮುತ್ತಲಿನ ತನ್ನ ಭಕ್ತರೆಲ್ಲರನ್ನು ಕರೆಯುತ್ತಾರೆ. ಎಲ್ಲರೂ ಬಂದು ಇವರ ಮುಂದೆ ನಿಂತು ಶರಣು ಶರಣಾರ್ಥಿ ಎಂದು ವಂದಿಸುತ್ತಾರೆ. ದೊಡ್ಡಬಸಪ್ಪನವರು ತಮ್ಮ ಬಯಕೆಯನ್ನು ಅವರ ಮುಂದೆ ಪ್ರಸ್ತಾಪ ಮಾಡುತ್ತಾರೆ. ಶರಣರು ಜೀವಸಮಾಧಿ ಹೊಂದುವ ವಿಷಯ ತಿಳಿದ ಭಕ್ತ ಜನರೆಲ್ಲರ ಮನದಲ್ಲಿ ದುಃಖ ಆವರಿಸಿ ಮೌನವಾಗುತ್ತಾರೆ. ಕೆಲ ಸಮಯದ ನಂತರ ಭಕ್ತರು ದೊಡ್ಡಬಸಪ್ಪನವರನ್ನು ಕೇಳುತ್ತಾರೆ. ಶರಣರೇ ನಿಮ್ಮನ್ನೇ ನಂಬಿಕೊಂಡಿದ್ದೀವಿ ನಾವೆಲ್ಲ! ನೀವು ಹೋದರೆ ನಮಗೆ ಯಾರು ದಿಕ್ಕು? ನಮಗಾಗಿ ನೀವು ಇರಲೇಬೇಕೆಂದು ಭಕ್ತಸಮೂಹ ಅಳುತ್ತಿರುವಾಗ ಶರಣ ದೊಡ್ಡಬಸಪ್ಪನವರು ಹೇಳುತ್ತಾರೆ. “ನೀವೇನು ಅಳಬೇಡಿ! ನಾನು ದೈಹಿಕವಾಗಿ ನಿಮ್ಮ ಮುಂದೆ ಇರದಿದ್ದರೂ ನೀವು ಮಾಡುವ ಪ್ರತಿ ಕೆಲಸ ಕಾರ್ಯಗಳಲ್ಲಿ ನಾನಿರುತ್ತೇನೆ! ನೀವು ನನ್ನನ್ನು ಮನತುಂಬಿ ನೆನೆದರೆ ಸಾಕು; ನಾನು ಬರುತ್ತೇನೆಂದು” ಹೇಳುತ್ತಾರೆ. ದೊಡ್ಡಬಸಪ್ಪನವರು ಕೆಲವೊಂದು ಮಾತುಗಳನ್ನು ವಚನದ ಮೂಲಕ ಹೇಳುತ್ತಿದ್ದರು. “ನೆನೆದವರ ಮನದಲ್ಲಿ ಕರಕಟ್ಟೊ ಗೂಟದಲ್ಲಿ ನಾನಿರುತ್ತೇನೆ”, ನನ್ನನ್ನು ಭಕ್ತಿಯಿಂದ ಯಾರು ಪೂಜೆ ಮಾಡುತ್ತಾರೋ ಅವರ ಮನದಲ್ಲಿ ನಾನಿರುತ್ತೇನೆ; ಅವರನ್ನು ಕಾಪಾಡುತ್ತೇನೆ ಎಂದು ಊರ ಭಕ್ತರಿಗೆ ವಚನವನ್ನು ನೀಡುತ್ತಾರೆ.

ಶರಣರು ನೀಡಿದ ವಚನವನ್ನು ಜನರು ಒಪ್ಪಿಕೊಳ್ಳುತ್ತಾರೆ. ಶರಣರು ಭಕ್ತ ಸಮೂಹಕ್ಕೆ ತಿಳಿಸುವುದೇನೆಂದರೆ ಶಿವನು ಸರ್ವಾಂತರ್ಯಾಮಿ! ಆತನನ್ನು ನಂಬಿ ನಡೆದರೆ ಭಯವೆಂಬುದಿಲ್ಲ. ಹುಟ್ಟು - ಸಾವುಗಳ ಬಗ್ಗೆ ಭೀತಿಯೇ ಇಲ್ಲ. ಇದನ್ನರಿತವನೇ ಶರಣ; ಅದನ್ನು ಪಾಲಿಸಿದವನೇ ನರಮನುಜ ಎಂಬುದು ಬಸಪ್ಪನವರಲ್ಲಿನ ತಾತ್ವಿಕತೆಯ ವಿಷಯವಾಗಿತ್ತು. ಶರಣರ ಈ ನುಡಿಯನ್ನು ಕೇಳಿದ ಭಕ್ತ ಮಹಾಶಯರಲ್ಲಿ ಕೆಲವರು ಲೌಕಿಕ ಜೀವನದಲ್ಲಿ ಸುಖವನ್ನು ಬಿಟ್ಟು ಹೀಗೆ ಸಾವು ಸ್ವೀಕರಿಸುವುದೆಂದು ಶಾಪ ಹಾಕುತ್ತಿದ್ದವರು ಶರಣ ದೊಡ್ಡಬಸಪ್ಪನವರ ತಾತ್ವಿಕತೆಯಿಂದ ಎಚ್ಚೆತ್ತು ಹುಟ್ಟು ಇದ್ದಡೆ ಸಾವು ಖಚಿತ ಅದಕ್ಕೇಕೆ ತಲೆಯನ್ನು ಕೆಡಿಸಿಕೊಂಡು ಭಯಭೀತರಾಗಿ ಬಾಳುವುದು ಇದು ಅರ್ಥಹೀನವೆಂದು ಅರಿತರು. ಶರಣ ಬಸಪ್ಪನವರು ಪ್ರತಿಯೊಬ್ಬ ಭಕ್ತನಿಗೆ ಹೇಳುತ್ತಿರುವುದೆಂದರೆ ದೇಹದ ವ್ಯಾಮೋಹಕ್ಕಿಂತ ಅದರೊಳಗಿರುವ ಅಂತರಾತ್ಮದ ಬಗೆಗಿನ ಚಿಂತನೆ ನಿಮ್ಮಲ್ಲಿರಲಿ. ಅದನ್ನು ಶುದ್ಧೀಕರಿಸಿ ಪರಮಾತ್ಮನಿಗೆ ಅರ್ಪಿಸಿ; ನೀವು ಮನುಜನಾದುದಕ್ಕೆ ಸಾರ್ಥಕತೆ, ಮನುಷ್ಯ ಜನ್ಮಕ್ಕೆ ಪರಿಪೂರ್ಣತೆ ಸಿಕ್ಕಂತಾಗುತ್ತದೆ ಎಂದು ತಿಳಿ ಹೇಳುತ್ತಿದ್ದರು. ಭಕ್ತರು ಇದನ್ನು ಒಮ್ಮತದಿಂದಲೇ ಆಲಿಸುತ್ತಿದ್ದರು.

ಹುಟ್ಟನ್ನು ಸುಖದಿಂದ ಸ್ವೀಕರಿಸುವಷ್ಟೇ ಸಾವನ್ನು ಕೂಡ ಸಂತೋಷದಿಂದ ಸ್ವೀಕರಿಸಬೇಕು; ಹುಟ್ಟು - ಸಾವು ಜಗತ್ತಿನಲ್ಲಿ ಸಹಜವಾದುದಾಗಿದೆ. ಶರಣನಿಗೆ ಸಾವು ಎಂಬುದರ ಭಯವಿಲ್ಲ. ಅದು ಆತನ ಆನಂದವೆಂದೇ ತಿಳಿಯಬೇಕು; ನನ್ನ ಭಕ್ತ ಬಂಧುಗಳಾದ ನೀವು ಶರಣರ ದಾರಿಯಲ್ಲಿ ನಡೆಯಬೇಕು, ನುಡಿಯಬೇಕು, ನುಡಿದಂತೆ ಬಾಳಿ ಬದುಕಬೇಕೆಂದು ಹೇಳಿದ ಪರಮಾತ್ಮನನ್ನು ಪೂಜಿಸಿ, ಭಜಿಸಿ, ಧ್ಯಾನಿಸಿ ಎಂದು ಹೇಳಿ ಎಲ್ಲರನ್ನು ಸಮಾಧಾನ ಪಡಿಸಿದರು ದೊಡ್ಡಬಸಪ್ಪ. ಶರಣರ ಈ ನುಡಿಗಳು ಭಕ್ತಜನರ ಮನಸ್ಸಿಗೆ ಮುದ ನೀಡಿದವು. ಎಲ್ಲ ಭಕ್ತರು ಬಸಪ್ಪನವರಿಗೆ ಶರಣೆಂದು ವಂದಿಸಿದರು. ಗದ್ದಿಕೆರೆ ದೊಡ್ಡಬಸಪ್ಪನನ್ನು ನಂಬಿದ ಭಕ್ತರಿಗೆ ಕಷ್ಟ, ರೋಗ, ನಿವಾರಣೆಯಾಗಿದೆ ಎನ್ನುವುದು ಖಚಿತವೆಂದು ಭಕ್ತರ ನಿಲುವಾಗಿತ್ತು.

ಗದ್ದಿಕೆರೆ ದೊಡ್ಡಬಸಪ್ಪನವರು ಜನರೊಂದಿಗೆ ಇದ್ದಾಗ ಹೇಗೆ ಅವರ ಕಷ್ಟಗಳಿಗೆ ಸ್ಪಂದಿಸಿ ಅದರ ನಿವಾರಣೆ ಮಾಡುತ್ತಿದ್ದರೋ ಅವರ ಜೀವಸಮಾಧಿಯ ನಂತರವೂ ಅವರ ಮಹಿಮೆ, ನಿರಂತರವಾಗಿ ನಡೆಯುತ್ತಲೇ ಇದೆ. ಊರಲ್ಲಿ ರೋಗ - ರುಜಿನಗಳು ಬಂದಾಗ ದೊಡ್ಡ ಬಸಪ್ಪನವರ ಗದ್ದುಗೆಗೆ ಬಂದು ನಮಸ್ಕರಿಸುತ್ತಾರೆ. ಕೆಲವರು ಅವರನ್ನು ಮನದಲ್ಲಿ ನಾನಿರುತ್ತೇನೆಂದಿರುವ ಮಾತಿನಂತೆ ಭಕ್ತರು ನಡೆದುಕೊಳ್ಳುತ್ತಾರೆ.

ದೊಡ್ಡಬಸಪ್ಪ ಶರಣರು ಹುಟ್ಟಿ ಬೆಳೆದಿರುವ ಊರು ಗದ್ದಿಕೆರೆಯಾಗಿದ್ದು ಅದರ ಪಕ್ಕದಲ್ಲಿರುವ ಮತ್ತೊಂದು ಗ್ರಾಮ ನಂದಿಪುರ. ಅಲ್ಲಿಗೆ ಆಗಾಗ ಹೋಗಿ ಕೆಲ ದಿನಗಳು ಕಳೆದು ಬರುತ್ತಿದ್ದು ದೊಡ್ಡ ಬಸಪ್ಪನವರಿಂದ ಪ್ರಸಿದ್ಧಿಯನ್ನು ಪಡೆಯಿತು. ನಂದಿಪುರದಲ್ಲೂ ಭಕ್ತರ ಸಂಖ್ಯೆ ಹೆಚ್ಚಾಗಿದ್ದು ಅಲ್ಲಿಯೂ ದೊಡ್ಡಬಸಪ್ಪನವರು ಅನೇಕ ಜನರ ಕಷ್ಟಗಳನ್ನು ನಿವಾರಣೆ ಮಾಡಿದ್ದಾರೆ. ಸುತ್ತಮುತ್ತಲಿನ ಪ್ರದೇಶದಿಂದ ಬಂದಂಥ ಭಕ್ತರಿಗೆ ಜ್ಞಾನ ದಾಸೋಹವನ್ನು ನೀಡುವುದರ ಜೊತೆಗೆ ಅನ್ನ ದಾಸೋಹವನ್ನು ನೀಡಿ ಭಕ್ತರ ಮನವನ್ನು ಆನಂದಗೊಳಿಸಿದ್ದಾರೆ. ಗದ್ದಿಕೆರೆ ದೊಡ್ಡಬಸಪ್ಪ ಶರಣರು. ನಂದಿಪುರದಲ್ಲಿನ ಅನ್ನ ದಾಸೋಹ ದಿನದಿಂದ ದಿನಕ್ಕೆ ಅಭಿವೃದ್ಧಿಯಾಗುತ್ತ ಬಂದಿತು. ದೊಡ್ಡಬಸಪ್ಪ ಶರಣರು ನಂದಿಪುರಕ್ಕೆ ಬಂದಿರುವ ಭಕ್ತರಿಗೆಲ್ಲ ಎರಡು ರೀತಿಯಲ್ಲಿ ದಾಸೋಹವನ್ನು ಮಾಡಿಸಿದ್ದಾರೆ. ಒಂದು ಅಜ್ಞಾನಿಗೆ ಅರಿವಿನ ಜ್ಞಾನ ಮತ್ತು ಹಸಿದ ಹೊಟ್ಟೆಗೆ ಅನ್ನದ ದಾಸೋಹ. ಭಕ್ತಜನರು ದೊಡ್ಡಬಸಪ್ಪ ಶರಣರು ಕೊಟ್ಟ ಮಾರ್ಗದರ್ಶನದಿಂದ ಅಂಧಕಾರ ಕಳೆದು ಅಹಂ, ಜಾತಿ, ಕುಲ, ತಾರತಮ್ಯಗಳನ್ನು ಬಿಟ್ಟು ಮಾನವೀಯತೆಯಿಂದ ಬಾಳಿ ಬದುಕುವುದನ್ನು ತೋರಿಸಿಕೊಟ್ಟಿದ್ದಾರೆ. ನಂದಿಪುರವೆಂಬ ಗ್ರಾಮವು ದೊಡ್ಡಬಸಪ್ಪ ಅವರ ಅನುಗ್ರಹದಿಂದ ಖ್ಯಾತಿಯನ್ನು ಪಡೆಯಿತು. ಅಲ್ಲಿಗೆ ಬರುವವರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾಯಿತು.

ಗದ್ದಿಕೆರೆಯಲ್ಲಿ ಹುಟ್ಟಿ ಬೆಳೆದ ಬಸಪ್ಪನವರು ಸುತ್ತಲಿನ ಊರಿಗೆಲ್ಲ ಹೆಸರಾಗಿದ್ದರು. ಇವರನ್ನು ಗದ್ದಿಕೆರೆ ಬಸಪ್ಪನೆಂದೇ ಕರೆಯುತ್ತಿದ್ದರು. ಗದ್ದಿಕೆರೆಯಲ್ಲಿಯೇ ತನ್ನ ಜೀವನದ ಎಲ್ಲ

ದಿನಗಳನ್ನು ಕಳೆದು ಕೊನೆಗೆ ಗದ್ದಿಕೆರೆಯಲ್ಲಿಯೇ ಜೀವ ಸಮಾಧಿಯಾದರು. ಗದ್ದಿಕೆರೆಯಲ್ಲಿಯೇ ಇವರ ಗದ್ದುಗೆ ಇದ್ದು, ದೇವಾಲಯವನ್ನು ಕಟ್ಟಿಸಿದ್ದಾರೆ. ಬಸಪ್ಪ ಶರಣರು ಎತ್ತುಗಳನ್ನು ಹಿಡಿದು ಕೃಷಿಯನ್ನು ಮಾಡುತ್ತಿದ್ದುದರಿಂದ ಇವರು ಆ ಎತ್ತುಗಳನ್ನು ತುಂಬ ಪ್ರೀತಿ ಮಾಡುತ್ತಿದ್ದರು. ಬಸಪ್ಪನವರ ಹೆಸರು ಬಸಪ್ಪನಾಗಿರುವುದರಿಂದ ಇವರ ದೇವಾಲಯದಲ್ಲಿ ಬಸವನ ಮೂರ್ತಿಯನ್ನೇ ಇಟ್ಟು ಅದನ್ನೇ ಶರಣ ಬಸಪ್ಪನೆಂದೇ ಭಕ್ತಿಯಿಂದ ಪೂಜಿಸುತ್ತಿದ್ದಾರೆ. ಗದ್ದಿಕೆರೆ ಶರಣ ಬಸಪ್ಪನು ಬಸವನ ರೂಪದಲ್ಲಿಯೇ ನೆಲೆಸಿ ಬಂದಿರುವ ಭಕ್ತರಿಗೆ ಅನುಗ್ರಹವನ್ನು ನೀಡುತ್ತಿದ್ದಾರೆ.

**ಬಳ್ಳಾರಿ ಮರಿಸ್ವಾಮಿ**

ಮರಿಸ್ವಾಮಿಯ ತಂದೆ ಸಂಗಮೇಶ; ತಾಯಿ ಗಂಗಮ್ಮ. ಇವರು ಕಲಬುರ್ಗಿ ಪಟ್ಟಣದಲ್ಲಿ ವಾಸಿಸುತ್ತಿದ್ದರು. "ಆತನು ರಂಭಾಪುರಿ ಸಿಂಹಾಸನದ ಶಾಖೆಗೆ ಸಂಬಂಧಿಸಿದ ಮಾಹೇಶ್ವರನಾಗಿ ಶಿಷ್ಯೋದ್ಧಾರ ಮಾಡುತ್ತಿದ್ದನು. ಆತನು ತನ್ನಂತೆಯೇ ಶಿಷ್ಯರನ್ನು ಪೊರೆಯುವ ಗುರುಪಾದಕ್ಕೆ ಅರ್ಹನಾದ ಮಗನನ್ನು ಪಡೆಯುವ ಇಚ್ಛೆಯಿಂದ."[೨೧]

ಸಂಗಮೇಶ ಅವರು ಸತಿಯೊಡನೆ ಶಿವನ ಆರಾಧನೆ, ಭಜನೆ, ಪೂಜೆ, ಶಿವಧ್ಯಾನ ಮಾಡುತ್ತ ನಿರಂತರವಾಗಿ ಪ್ರಾರ್ಥಿಸುತ್ತ ಮಗನನ್ನು ಕರುಣಿಸಲೆಂದು ಜಪಿಸುತ್ತಿದ್ದರು. ಇವರ ಭಕ್ತಿಗೆ ಮೆಚ್ಚಿದ ಭಗವಂತನೆನ್ನುವಂತೆ ಗಂಗಮ್ಮನ ದೇಹವು ಶೋಭಿಸ ತೊಡಗಿತು. ಆಕೆಯ ಮನದಲ್ಲಾದ ಆನಂದವೇ ಅದಕ್ಕೆ ಕಾರಣ; ಭಗವಂತ ಕರುಣಿಸಿದ ಮಗುವಿಗೆ ಜನ್ಮ ನೀಡುತ್ತಿದ್ದೇನೆಂದರೆ ಗರ್ಭದಲ್ಲಿರುವ ಮಗು ಸಾಧಾರಣವಾದುದಲ್ಲ; ಲೋಕವೇ ಮೆಚ್ಚುವಂಥ ಲೋಕದ ಗುರು ತನ್ನ ಗರ್ಭದಲ್ಲಿರುವನೆಂದು ಸಂತೋಷದಿಂದಿದ್ದಳು. ಲೋಕದ ಗುರುವೇ ಈಕೆಯ ಗರ್ಭದಲ್ಲಿರುವುದೆಂಬುದಕ್ಕೆ ಗಂಗಮ್ಮಳಿಗೆ ಬಯಕೆಗಳಲ್ಲಿ ಶುಭವನ್ನು ತೋರುವ ಸೂಚನೆಗಳಿದ್ದವು. ರುದ್ರಾಕ್ಷಿ ಮಂತ್ರಗಳಿಂದ ಗುರು ಜಂಗಮರನ್ನು ಪೂಜಿಸುವುದು ಮತ್ತು ಅವರು ಕೊಡುವ ತೀರ್ಥ ಪ್ರಸಾದವನ್ನು ಪಡೆಯುವ ಬಯಕೆಯೇ ಅವಳಲ್ಲಿ ಹೆಚ್ಚಾಗಿತ್ತು. ಕೆಲದಿನಗಳಲ್ಲಿ ಗಂಗಮ್ಮನ ಉದರದಿಂದ ಜನಿಸಿತು. ಪರಮಾತ್ಮನ ತೇಜದ ಒಂದು ತುಣುಕು ಎನ್ನುವಂತೆ, ಗುರುಜಂಗಮ ಲಕ್ಷಣವನ್ನು ಮೈ ಸವರಿಕೊಂಡಂತೆ ಕಾಣುವ ತೇಜೋಮಯವಾದ ಮಗುವು ಜನಿಸಿತು. ಹುಟ್ಟಿದ ಮಗುವಿಗೆ ಶಿವಲಿಂಗ ಧಾರಣೆ ಮಾಡಿ ಮರಿಸ್ವಾಮಿ ಎಂದು ಹೆಸರಿಟ್ಟರು. ಮಗುವನ್ನು ನೋಡಿದ ಪ್ರತಿಯೊಬ್ಬರು ಶಿವನ ಸ್ವರೂಪವನ್ನೇ ಹೊತ್ತು ಬಂದಿರುವಂತಿದೆ ಎಂದು ಹೊಗಳುತ್ತಿದ್ದರು. ಬಾಲಕನು ತಾಯಿ ಮತ್ತು ತಂದೆಯರ ಪ್ರೀತಿ ಮಾತ್ರವಲ್ಲದೆ ಪ್ರೀತಿಯಿಂದ ಶಿವಮಂತ್ರ, ಶಿವಧ್ಯಾನ, ಶಿವಚಿಂತನ, ಶಿವನ ನಾಮಗಳ ಪಠಣದ ಜೊತೆಯಲ್ಲಿಯೇ ಮರಿಸ್ವಾಮಿ ಮೈಗೆ ಅಂಟಿಸಿಕೊಂಡು ಬೆಳೆಯಿತು. ಶಿವನ ಕೃಪೆಯು ಇವನಿಗೆ ಅಪಾರವಾಗಿ ದೊರೆಯಿತು. ಶಿವನ ಅನುಗ್ರಹದಿಂದ ಮರಿಸ್ವಾಮಿಯು ಶರಣತ್ವದ ಸಂಪತ್ತನ್ನು ತನ್ನಲ್ಲಿಟ್ಟುಕೊಂಡು ಬೆಳೆದನು.

ತಂದೆ ತಾಯಿಯರಿಂದ ಅಪಾರವಾದ ಪ್ರೀತಿಯನ್ನು ಪಡೆದು ಭಕ್ತಿ ಭಾವಗಳನ್ನು ತನ್ನಲ್ಲಿ ತುಂಬಿಕೊಂಡು ಶರಣತ್ವವನ್ನು ಸಾರುವಂಥ ಬುದ್ಧಿಯನ್ನು ಮೈದುಂಬಿಕೊಂಡು ಬೆಳೆದು ಮರಿಸ್ವಾಮಿಯು ತನ್ನ ಐದನೆಯ ವಯಸ್ಸಿನಲ್ಲಿಯೇ ತಾಯಿ - ತಂದೆ ಇಬ್ಬರನ್ನು ಕಳೆದುಕೊಂಡನು. ತಂದೆ - ತಾಯಿಯನ್ನು ಕಳೆದುಕೊಂಡ ಬಾಲಕ ಮರಿಸ್ವಾಮಿ ಕಂಗಾಲಾಗಿದ್ದನು.

"ಭಕ್ತೋತ್ತಮರು (ಮರಿದೇವರು) ಮರಿಸ್ವಾಮಿಯವರನ್ನು ರಕ್ಷಿಸುವ ಹೊಣೆಯು ನಮ್ಮದೆಂದು ಯೋಚಿಸಿ ಅದೇ ಗುರುವಂಶದ ಬಳಗಕ್ಕೆ ಸೇರಿದ ಸಾಧ್ವಿಗೆ ಆ ಬಾಲಕನನ್ನು ಒಪ್ಪಿಸಿದರು."[೨೨]

ಮರಿಸ್ವಾಮಿಯವರನ್ನು ನೋಡಿಕೊಳ್ಳಲು ಒಪ್ಪಿಕೊಂಡ ಸಾಧ್ವಿ ಅವಳು ಬಾಹ್ಯವಾಗಿ ಒಬ್ಬ ಸಾಧ್ವಿಯಾಗಿದ್ದಳೇ ಹೊರತು ಆಂತರಿಕವಾಗಿ ಆಗಿರಲಿಲ್ಲ. ಒಬ್ಬ ವ್ಯಕ್ತಿ ಸಾಧ್ವಿಯಾಗಬೇಕಾದರೆ ಅವರಲ್ಲಿರುವ ಅಂತರಾತ್ಮ ಒಪ್ಪಿಗೆಯನ್ನು ಸ್ವೀಕರಿಸಬೇಕು. ಆಗ ನಿಜವಾದ ಸಾಧ್ವಿಯಾಗಿ ಅವರಲ್ಲಿರುವ ವಿಕೃತಿ ಮನಸ್ಸಿನ ಗುಣಗಳು ಅವರಿಂದ ದೂರ ಸರಿದು ದೇಹದ ತುಂಬ ಬರೀ ಪ್ರೀತಿಯೊಂದೇ ತುಂಬಿರುತ್ತದೆ. ಇಲ್ಲಿ ಮರಿಸ್ವಾಮಿಯನ್ನು ನೋಡಿಕೊಳ್ಳುವ ಸಾಧ್ವಿ ಬರೀ ಬಾಹ್ಯರೂಪದಲ್ಲಿ ಮಾತ್ರ; ಅವಳು ಆಂತರಿಕವಾಗಿ ವಿಕೃತ ಮನಸ್ಸಿನವಳಾಗಿದ್ದಳು. ಬಾಲಕನಾದ ಮರಿಸ್ವಾಮಿಯನ್ನು ಕೋಪದಿಂದ ಬೈಯುತ್ತಿದ್ದಳು, ಇವನ ಜೊತೆ ಒರಟಾಗಿ ವರ್ತಿಸುತ್ತಿದ್ದಳು. ಅವನನ್ನು ಹೆದರಿಸಿ ಅವನು ಒಂದೇ ದಿನದಲ್ಲಿ ತನ್ನಷ್ಟಕ್ಕೆ ತಾನೇ ಮನೆ ಬಿಟ್ಟು ಓಡಿಹೋಗುವಂತೆ ಮಾಡುತ್ತಿದ್ದಳು.

ಈ ಸಾಧ್ವಿಗೆ ಹುಡುಗನನ್ನು ನೋಡಿಕೊಳ್ಳಲು, ತನ್ನ ಮನೆಯಲ್ಲಿಟ್ಟುಕೊಳ್ಳಲು ಇಷ್ಟವಿಲ್ಲದೆ ಅನೇಕ ಕಷ್ಟಗಳನ್ನು ಕೊಟ್ಟು ಹಿಂಸಿಸತೊಡಗಿದಳು. ಮರಿಸ್ವಾಮಿಗೆ ತನ್ನವರು ರೋಣ ಮತ್ತು ಕರಿಹಟ್ಟಿಗಳಲ್ಲಿದ್ದರೂ ಆ ಸಮಯಕ್ಕೆ ಅವರಾರು ಆಗಲಿಲ್ಲ, ಭಕ್ತಜನರು ಎಷ್ಟು ಒಳ್ಳೆಯ ಜನರಿದ್ದರೂ ಎಲ್ಲರನ್ನು ಬಿಟ್ಟು ಈ ಸಾಧ್ವಿಯನ್ನು ಆರಿಸಿದುದು ದೈವಸಂಕಲ್ಪ, ಭಗವಂತನಿಚ್ಛೆಯಿರಬೇಕು ಎನಿಸುತ್ತದೆ. ಈ ಸಾಧ್ವಿ ಮಗು ಮರಿಸ್ವಾಮಿಗೆ ನೀಡಿದ ತೊಂದರೆ ಅಷ್ಟಿಷ್ಟಲ್ಲ. ಬೇರೆ ಮಕ್ಕಳೊಂದಿಗೆ ಆಟವಾಡಲು ಬಿಡದೆ ಕಾಲಿನಿಂದ ಒದೆಯುತ್ತ, ಕೋಲಿನಿಂದ ಬಡಿಯುತ್ತ ಕಸ ಬಳಿದು ಬಟ್ಟೆ ಒಗೆದು ನಂತರ ಭಿಕ್ಷೆ ಬೇಡಲು ಕಳುಹಿಸುತ್ತಿದ್ದಳು. ಓದು ಎನ್ನುವುದು ದೂರದ ಮಾತಾಗಿತ್ತು. ಹೊಟ್ಟೆಗೆ ಅನ್ನ ಹಾಕದೆ ಪ್ರತಿನಿತ್ಯ ಬೈಗುಳಗಳಿಂದ ಹೊಟ್ಟೆ ತುಂಬುವಂತೆ ಮಾಡುತ್ತಿದ್ದಳು. ಇದನ್ನೆಲ್ಲ ಸಹಿಸಿಕೊಂಡು ಮರಿಸ್ವಾಮಿ ಯಾರಿಗೂ ಇವಳ ಬಗ್ಗೆ ಒಂದು ಮಾತು ಕೂಡ ಕೆಟ್ಟದಾಗಿ ಹೇಳುತ್ತಿರಲಿಲ್ಲ. ಕೊನೆಗೆ ಈ ಹೆಂಗಸು ಬಾಲಕ ಮರಿಸ್ವಾಮಿಯನ್ನು ನೀನು ನನ್ನ ಬಗ್ಗೆ ಜನರೆದುರು ಇಲ್ಲಸಲ್ಲದ ಮಾತನ್ನು ಹೇಳಿದ್ದೀಯಲ್ಲ? ನೀನು ನನ್ನ ಮನೆಯಲ್ಲಿರುವುದು ಸರಿಯಲ್ಲ! ಮನೆ ಬಿಟ್ಟು ಹೊರಡು ಎಂದಳು. ಮರಿಸ್ವಾಮಿ ಮರುಮಾತನಾಡದೆ ಎಲ್ಲಾ ಶಿವೇಚ್ಛೆ ಎನ್ನುವಂತೆ ಮನೆಯಿಂದ ಹೊರಟು ಅವನ ತಂದೆಯ ಸಮಾಧಿಯ ಮುಂದೆ ಕುಳಿತು ರಾತ್ರಿಯೆಲ್ಲಾ ಕಳೆದನು. ಮಾರನೆಯ ದಿನದಂದು ಮಠಕ್ಕೆ ಬಂದ ಭಕ್ತರು ಮಠದಲ್ಲಿರುವ

ತನ್ನ ತಂದೆಯ ಸಮಾಧಿಯ ಮುಂದೆ ಯೋಗಭಂಗಿಯಲ್ಲಿ ಕುಳಿತ್ತಿದ್ದ ಬಾಲಕ ಮರಿಸ್ವಾಮಿಯನ್ನು ಮಾತನಾಡಿಸಿ ಕೇಳಿದರು. ಮಗು ಮರಿಸ್ವಾಮಿ ಏನಾಯಿತು? ಹೀಗೇಕೆ ಇಲ್ಲಿ ಕುಳಿತಿರುವೆ, ಸಾಧ್ವಿ ಮನೆಯಿಂದ ಏಕೆ ಬಂದೆ, ಏನಾದರೂ ತೊಂದರೆಯಾಯಿತೆ ಎಂದು ಕೇಳಿದರು! ಇದೆಲ್ಲದಕ್ಕೆ ಬಾಲಕ ಮರಿಸ್ವಾಮಿ ತನ್ನದೇ ತಪ್ಪೆಂದು ಹೇಳಿದನೆ ಹೊರತು ಸಾಧ್ವಿಯ ಬಗ್ಗೆ ಒಂದು ಕೆಟ್ಟ ಮಾತನ್ನಾಡಲಿಲ್ಲ. ಭಕ್ತ ಜನರೆಲ್ಲ ಪ್ರೀತಿಯಿಂದ ಬಾಲಕ ಮರಿಸ್ವಾಮಿಯನ್ನು ಸಜ್ಜನನಾದ ಭಕ್ತನ ಮನೆಯಲ್ಲಿರಿಸಿದರು. ಎಂಟು ವರ್ಷದ ಬಾಲಕನಾದರೂ ಅವನನ್ನು ಓದಿಸದ ಆ ಸಾಧ್ವಿಯ ಬಗ್ಗೆ ಯಾರೂ ಕೆಟ್ಟ ಮಾತನ್ನಾಡದೆ ಮರಿಗುರುವೆಂದು ಕರೆಯುವ ಮರಿಸ್ವಾಮಿಯನ್ನು ತಮ್ಮ ಬಳಿ ಇಟ್ಟುಕೊಂಡು ಓದಿಸತೊಡಗಿದರು.

"ಕಲಬುರ್ಗಿಯಲ್ಲಿ ಕುಲಗುರುವು ಮರಿದೇವರಿಗೆ ದೀಕ್ಷೆಯನ್ನಿತ್ತು ಒಳ ಹೊರಗೆ ಶಿವಕಳೆಯನ್ನು ಹೊಳೆಯಿಸಿದನು. ಅಂದಿನಿಂದ ಕಾಸಿದ ಚಿನ್ನದ ಮೂರ್ತಿಯಂತೆ ಆತನು ಶೋಭಿಸತೊಡಗಿದನು. ಪೂಜೆಯ ಕಡೆಗೆ ವಿಶೇಷ ಲಕ್ಷ್ಯ ಹರಿಯಿತು. ನಿರ್ಜನ ಸ್ಥಳಗಳಲ್ಲಿ ಪೂಜೆಗೆ ಕುಳಿತುಕೊಳ್ಳ ತೊಡಗಿದನು. ಒಮ್ಮೆ ಊರು ಬಿಟ್ಟು ದೂರ ಹೋಗಿ ತೋಟದ ಬಾವಿಯಲ್ಲಿ ಸ್ನಾನ ಮಾಡಿ ಹೂಪತ್ರಿಗಳನ್ನು ತಂದು ನಿಷ್ಠೆಯಿಂದ ಪೂಜೆಯಲ್ಲಿ ನಿರತನಾದನು. ಜಪ ಧ್ಯಾನಗಳಲ್ಲಿ ಆನಂದದಿಂದ ಮೈಮರೆತನು. ಎಳೆಹರೆಯದಲ್ಲಿಯೇ ಶಿವಯೋಗಿ ಎಂದು ಖ್ಯಾತನಾದನು."[೨೩]

ಮರಿಸ್ವಾಮಿಗಳು ನುಡಿದ ಮಾತು ನಿಜವಾಯಿತು. ನಡೆದ ನೆಲ ಪವಿತ್ರವಾಯಿತು. ಜನರು ಇವರಲ್ಲಿಟ್ಟ ನಂಬಿಕೆಯೆಲ್ಲ ಸತ್ಯವಾಯಿತು. ಕೈಯಿಂದ ಕೊಟ್ಟಿದ್ದೇ ಮಹಾಪ್ರಸಾದವೆಂದು ಭಕ್ತರು ಸ್ವೀಕರಿಸುತ್ತಿದ್ದರು. ಅಧಿಕ ಸಂಖ್ಯೆಯಲ್ಲಿ ಭಕ್ತಾದಿಗಳು ನೆಲೆಸಿದರು ಮರಿಸ್ವಾಮಿಗಳು ಮಹಾಮಹಿಮ ರೆಂದು ಪ್ರಸಿದ್ಧಿಯಾದರು. ಜನರೆಲ್ಲ ಇವರನ್ನು ಕಾಣಲು ಆಶೀರ್ವಾದ ಪಡೆಯಲು ಅಧಿಕ ಸಂಖ್ಯೆಯಲ್ಲಿ ಬರುತ್ತಿದ್ದರು. ಮರಿಸ್ವಾಮಿಗಳು ಯಾರೇ ಕರೆದು ಇವರ ಪಾದಪೂಜೆ, ಸೇವೆ ಮಾಡುವ ಬಗೆಗೆ ಇವರಿಗೆ ಇಷ್ಟವಿಲ್ಲದೆ ಇವರು ತನ್ನಲ್ಲಿರುವ ಪರಮಾತ್ಮನ ಧ್ಯಾನ ಪೂಜೆಯಂಬ ಲಿಂಗಾಂಗದ ಆನಂದದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿದ್ದರು.

"ಮರಿಸ್ವಾಮಿಗಳು ಬೆಂಗಳೂರು, ಮೈಸೂರು. ಹೀಗೆ ತಮ್ಮ ಪಯಣದಲ್ಲಿದ್ದಾಗ ಒಮ್ಮೆ ಮೈಸೂರಿನ ಚಾಮುಂಡಿ ಬೆಟ್ಟದ ಚಾಮುಂಡೇಶ್ವರಿ ಸನ್ನಿಧಿಗೆ ದರ್ಶನಕ್ಕಾಗಿ ಹೋದಾಗ ಚಾಮುಂಡಿಯು ಇವರಿಗೆ ದರ್ಶನವಿತ್ತು. ಹಿಂದಿನ ಜನ್ಮದಲ್ಲಿ ನಿನ್ನ ಸತಿಯಾಗಿದ್ದವಳು ಕೊನೆಯ ಕಾಲಕ್ಕೆ ನಿನ್ನ ಸೇವೆಯನ್ನೇ ಬಯಸಿದ್ದಳು. ಅದರಂತೆ ಈಗ ಬೂದಿಹಾಳಲ್ಲಿ ಜನ್ಮಿಸಿದ್ದಾಳೆ. ಆಕೆಯನ್ನು ಕೈಹಿಡಿದು ಬಳ್ಳಾರಿಯಲ್ಲಿ ಬಾಳಿ ಸುಖಿಸು ಎಂದಳು."[೨೪]

ಅಮ್ಮನವರ ಅಪ್ಪಣೆಯಂತೆ ಬಳ್ಳಾರಿ ಜಿಲ್ಲೆಯ ಬೂದಿಹಾಳಕ್ಕೆ ಹೋಗಿ ಯಾರಿಗೂ ತಿಳಿಯದಂತೆ ಕಟ್ಟೆಯ ಬಸವೇಶ್ವರರ ಗುಡಿಯಲ್ಲಿ ತಂಗಿದರು. ಆ ಕನ್ಯೆಗಿರುವ ಹಿಂದಿನ ಜನ್ಮದ ಸಂಬಂಧ ಮತ್ತು ಅವಳಲ್ಲಿರುವ ಒಳ್ಳೆತನದ ಗುಣಗಳನ್ನು ಜನರಿಗೆ ತಿಳಿಯುವುದಕ್ಕಾಗಿ

ಮರಿಸ್ವಾಮಿಯು ಯೌವ್ವನವನ್ನು ದಾಟಿದ ಮದುವೆಗೂ ಯೋಗ್ಯನಲ್ಲದ ವೃದ್ಧನ ವೇಷವನ್ನು ಹಾಕಿಕೊಂಡು ಬಸವನಗೌಡ ತಾನು ಮದುವೆಯಾಗುವ ಹುಡುಗಿಯ ತಂದೆ ಅವರ ಮನೆಗೆ ಹೋಗುತ್ತಾನೆ. ಹೋಗಿ ಗೌಡನ ಎರಡನೆಯ ಮಗಳನ್ನು ತನಗೆ ಕೊಟ್ಟು ಮದುವೆ ಮಾಡಲು ಕೇಳಿಕೊಳ್ಳುತ್ತಾನೆ. ಈ ಮಾತನ್ನು ಕೇಳಿದ ಗೌಡ ಹಾಸ್ಯಮಯವಾಗಿ ನಕ್ಕು ಬಂದಿರುವವನು ಮುದುಕನೆಂದು ಕುಳ್ಳಿರಿಸಿ ಉಪಚರಿಸುತ್ತಾನೆ. ಮುದಿವೇಷದಲ್ಲಿರುವ ಮರಿಸ್ವಾಮಿಯವರು ನಾನು ಹೇಳುತ್ತಿರುವುದು ಹಾಸ್ಯವೆಂದು ತಿಳಿಯಬೇಡ. ನಾನು ತುಂಬ ವರ್ಷಗಳ ಹಿಂದೆ ಈ ಊರಿಗೆ ಬಂದಾಗ ನಿನ್ನ ಹೆಂಡತಿ ಆಗ ಎರಡನೆಯ ಮಗುವಿಗೆ ಜನ್ಮ ಕೊಡುವ ಹೊಸ್ತಿಲಲ್ಲಿದ್ದಳು. ತುಂಬು ಗರ್ಭಿಣಿ ಆಗ ಅವಳು ನೀರಿಗೆ ಬಂದಾಗ ನನ್ನನ್ನು ಕೊಡ ಎತ್ತಿಕೊಳ್ಳಲು ಸಹಾಯ ಬೇಡಿದಳು. ಆಗ ನಾನು ಹೇಳಿದ್ದೇನೆಂದರೆ ನಿನಗೆ ಕೊಡ ಎತ್ತಲು ಸಹಾಯ ಮಾಡುತ್ತೇನೆ; ನೀನು ಹಡೆದ ಮೇಲೆ ಆ ಮಗುವನ್ನು ನನಗೆ ಕೊಟ್ಟು ಮದುವೆ ಮಾಡಬೇಕೆಂದು ಹೇಳಿದ್ದೆ; ಅದಕ್ಕೆ ನಿನ್ನ ಹೆಂಡತಿ ಒಪ್ಪಿಗೆ ನೀಡಿದ್ದಳು. ಇದನ್ನು ಕೇಳಿದ ಗೌಡ ಮತ್ತು ಊರಿನ ಜನರು ಬೆರಗಾದರು ಅವರಿಗೆ ಇದು ಆಶ್ಚರ್ಯವಾಗಿ ಕಾಣಿಸಿತು. ಇಬ್ಬರು ವಯಸ್ಕರು ಈ ಮುದುಕನ ಮಾತು ಏನು ಕೇಳುವುದೆಂದು ಅವನನ್ನು ಹೊರಹಾಕಲು ಯತ್ನಿಸಿದರೂ ಪ್ರಯೋಜನವಾಗಲಿಲ್ಲ. ನೀಲಗಂಗಾಂಬೆ ಗೌಡನ ಮಗಳು ಈ ಮುದಿವೇಷದ ಮಗನನ್ನು ಮದುವೆ ಮಾಡಿಕೊಳ್ಳಲು ಒಪ್ಪಿಗೆಯನ್ನು ನೀಡುತ್ತಾಳೆ. ಇದಕೊಪ್ಪದ ತಂದೆ ಬಸವೇಶ್ವರನಲ್ಲಿ ಇತರ ಜನರೊಡನೆ ದೇವರನ್ನು ಕೇಳಲು ಹೋದಾಗ ವೃದ್ಧನ ವೇಷದಲ್ಲಿದ್ದ ಜಂಗಮ ಮರಿಸ್ವಾಮಿ ಆ ವೇಷವನ್ನು ಕಳಚಿ ತನ್ನ ನಿಜವೇಷವಾದ ತರುಣ ರೂಪವನ್ನು ತೋರಿಸಿದಾಗ ಎಲ್ಲರೂ ಆನಂದದಿಂದ ಹರುಷದಿ ನಲಿದಾಡಿ ಮರಿಸ್ವಾಮಿಯೊಂದಿಗೆ ನೀಲಗಂಗಾಂಬೆಯನ್ನು ಮದುವೆ ಮಾಡಿಕೊಡುತ್ತಾರೆ.

ಮದುವೆಯಾದ ನಂತರ ಬೂದಿಹಾಳದಿಂದ ಮರಿಸ್ವಾಮಿಯವರು ಸತಿಯೊಡನೆ ಬಳ್ಳಾರಿಗೆ ಬಂದರು. ಮರಿಸ್ವಾಮಿ ಮತ್ತು ನೀಲಗಂಗಮ್ಮನವರ ದಾಂಪತ್ಯ ಜೀವನ ಆದರ್ಶಮಯವಾಗಿತ್ತು. ಕಾಲ ಕಳೆದಂತೆ ಮರಿಸ್ವಾಮಿಗಳು ತನ್ನ ಹೆಂಡತಿಯಾದ ನೀಲಗಂಗಮ್ಮನಿಗೆ ತಮ್ಮ ಹಿಂದಿನ ಜನ್ಮದ ಸಂಬಂಧ ಮತ್ತು ಈ ಜನ್ಮದಲ್ಲಿ ನಡೆದ ಮತ್ತು ನಡೆಯಲ್ಲಿರುವ ಎಲ್ಲ ಸಂಗತಿಗಳನ್ನು ವಿವರಿಸಿದರು. ನಾವಿಬ್ಬರೂ ಸುಖದ ಬಲೆಗೆ ಬೀಳದೆ ಭಕ್ತೋದ್ಧಾರ ಕಾರ್ಯಕ್ಕಾಗಿ ಮಾತ್ರ ಮೀಸಲು ಎಂದು ನಿಶ್ಚಯ ಮಾಡಿದರು. ಬಳ್ಳಾರಿಯಲ್ಲಿ ಕುಟೀರವೊಂದರಲ್ಲಿ ವಾಸಿಸುತ್ತಿದ್ದರು. ಈ ಕುಟೀರದಲ್ಲಿಯೇ ಇವರ ಜೀವನ ನಡೆಯಿತು. ಭಕ್ತೋದ್ಧಾರ ಮತ್ತು ಧರ್ಮಪ್ರಚಾರ ಮಾಡುತ್ತ ಅನೇಕ ಮಹಿಮೆಗಳನ್ನು ಮಾಡಿದರು.

**ಮರಿಸ್ವಾಮಿ ತೋರಿದ ಮಹಿಮೆಗಳು**

ಬೆಂಗಳೂರಿನ ಹಳ್ಳಿಯೊಂದರಲ್ಲಿ ಮರಿಸ್ವಾಮಿಗಳು ದನ ಕಾಯುವ ಹುಡುಗರೊಡನೆ ತಾವು ಆಡುತ್ತ ಮಕ್ಕಳಿಗೆ ತಮ್ಮಲ್ಲಿದ್ದದ್ದನ್ನು ತಿನ್ನಲು ನೀಡಿದರು. ಕೆಲವೊಮ್ಮೆ ರಾತ್ರಿ ಅಡವಿಯಲ್ಲಿಯೇ

ಇರುತ್ತಿದ್ದರು. ಒಮ್ಮೆ ಹಾವನ್ನು ಹಿಡಿದು ಆಡಿಸಿದರು. ದನ ಕಾಯುವ ಹುಡುಗರು ಮತ್ತು ಅಲ್ಲಿದ್ದ ಜನರೆಲ್ಲ ಅದನ್ನು ನೋಡಿ ಆಶ್ಚರ್ಯಚಕಿತರಾದರು. ನಂತರ ಆ ಹಾವು ಹಗ್ಗವಾಯಿತು; ಹುಡುಗರಿಗೆ ಮತ್ತು ನೋಡಿದ ಜನಕ್ಕೆ ಸಂತೋಷವಾಯಿತು. ಕೆಲವು ಹುಡುಗರು ಇದನ್ನು ಹೇಗೆ ಮಾಡುವುದು, ನಮಗೂ ಈ ಮಂತ್ರವನ್ನು ಕಲಿಸಿಕೊಡು ಎಂದರು. ಶಿವನಾಮವನ್ನು ನಂಬಿ ನೆನೆದರೆ ಹಾವೊಂದೆ ಅಲ್ಲ ಹುಲಿಯನ್ನು ಕೂಡ ಹಿಡಿಯಬಹುದೆಂದರು. ಅಲ್ಲಿದ್ದವರೆಲ್ಲರು ಶಿವಭಕ್ತರಾಗಿ ಮರಿಸ್ವಾಮಿಯವರನ್ನು ವಂದಿಸಿದರು.

ಒಮ್ಮೆ ಹಳ್ಳವೊಂದರಲ್ಲಿ ಹಾಯ್ದು ಬರುವಾಗ ಇಲ್ಲಿ ಮಣ್ಣಿನ ರಾಶಿ ಮಾಡಿ ಅದರಲ್ಲಿ ಹುಡುಕಿದರೆ ನಿಮಗೆ ಕೂಲಿ ದೊರೆಯುವುದು ಅದರಂತೆ. ಎಲ್ಲರೂ ಮಣ್ಣಿನ ರಾಶಿ ಮಾಡಿ ಅದರಲ್ಲಿ ಹುಡುಕಿದರೆ ಅವರಿಗೆ ಅವರವರ ಕೆಲಸಕ್ಕೆ ತಕ್ಕಂತೆ ಕೂಲಿ ದೊರೆಯಿತು. ಜನರಿಗೆಲ್ಲ ತಿಳಿದು ಹೆಚ್ಚಿನ ಸಂಖ್ಯೆಯಲ್ಲಿ ಬಂದರು. ಇದು ದಿನಕ್ಕಿಷ್ಟು ಅಭಿವೃದ್ಧಿಯನ್ನು ಪಡೆಯಿತು. ಎಲ್ಲರೂ ಮರಿಸ್ವಾಮಿಯವರನ್ನು ನಮಿಸಿ ಭಕ್ತರಾದರು.

"ಬೆಂಗಳೂರು ಮಠವೊಂದರಲ್ಲಿ ತಂಗಿದ್ದ ಸ್ವಾಮಿಗಳ ದರ್ಶನಕ್ಕೆ ಮೈಸೂರಿನ ದಿವಾನ್ ಪೂರ್ಣಯ್ಯನವರು ಬಂದರು. ಅವರ ಬಿನ್ನಹದಂತೆ ಗುರುಗಳು, ರಾಜಮನೆತನಕ್ಕೆ ಬಂದಿದ್ದ ಸಂಕಟ ದೂರಾಗಿ ಬಾಲಕ ಕೃಷ್ಣ ನೃಪನು ಗದ್ದುಗೆ ಏರುವನೆಂದು ಮೈಸೂರು ಆದರ್ಶವಾದ ನಾಡಾಗುವುದೆಂದೂ ಭವಿಷ್ಯ ಹೇಳಿದರು. ಅರಸು ಮನೆತನದಿಂದ, ಮಂತ್ರಿಗಳಿಂದ ಈ ಸ್ವಾಮಿಗಳ ಮೆರವಣಿಗೆ ಇತ್ಯಾದಿಗಳ ಬಗ್ಗೆ ವ್ಯವಸ್ಥಾ ಪತ್ರ ಸಿಕ್ಕು ಜನರು, ಉತ್ಸವದ ಸಂಭ್ರಮದಲ್ಲಿ ತೊಡಗಿದರು."[೨೫]

ಇವರ ಈ ಏಳಿಗೆಯನ್ನು ಸಹಿಸದ ಕೆಲವರು ಮಠದಯ್ಯಗಳು ಮರಿಸ್ವಾಮಿಯವರನ್ನು ಅವರೊಂದಿಗೆ ಸವಿಮಾತುಗಳನ್ನಾಡುತ್ತ ದೇಶಸಂಚಾರಕ್ಕೆ ಹೊರಡಲು ಪ್ರೇರೇಪಿಸಿಪರು. ಇದರ ಮರ್ಮ ಜ್ಞಾನಿ ಯೋಗಿಯಾದ ಮರಿಸ್ವಾಮಿಗೆ ತಿಳಿದಿತ್ತು. ಮರಿಸ್ವಾಮಿಗಳಲ್ಲಿ ಕಪಟತನವಾಡಿದ ಪ್ರತಿಯೊಬ್ಬರಿಗೂ ಕೇಡಾಯಿತು. ಲಿಂಗಣ್ಣ ಶಟ್ಟಿ ಸ್ವಾಮಿಗಳೊಂದಿಗೆ ಇದ್ದರೂ ಅವರಿಗೆ ತಿಳಿಯ ದೆಂದು ವಂಚನೆಯನ್ನು ಮಾಡುತ್ತಿದ್ದ ಕೊನೆಯಲ್ಲೊಂದು ದಿನ ಅವನು ತನ್ನ ಸಂಪತ್ತು, ಹೆಂಡತಿ - ಮಕ್ಕಳನ್ನು ಕಳೆದುಕೊಂಡನು. ಮತ್ತೆ ಸ್ವಾಮಿಯಲ್ಲಿಗೆ ಓಡಿ ಬಂದು ಬೇಡಿದನು. ಆದರೆ ಅದೂ ಕೂಡ ಕುಟಿಲತನ ವಂಚನೆ ಎಂದರಿತು ಮರಿಸ್ವಾಮಿ ಅವನನ್ನು ದೂರವಿಟ್ಟರು. ಕೆಲವು ಕುಟಿಲರು ಲಿಂಗಣ್ಣ ಶೆಟ್ಟಿಯಂತೆ ವಿಕೃತ ಮನಸ್ಸುಳ್ಳವನು ತಾವೇ ಜಾಣರೆಂದು ತಿಳಿದು ಮರಿಸ್ವಾಮಿಯವರಿದ್ದಲ್ಲಿಗೆ ಬಂದು ಅವರಲ್ಲಿ ವಿಷ ತುಂಬಿದ ಮನಸ್ಸಿನಿಂದ ಹೊರಗಡೆ ಹಿತನುಡಿಗಳನ್ನಾಡುವಂತೆ ಬಂದು ಒಬ್ಬ ಕನ್ಯೆಯನ್ನು ಕರೆತಂದು ಮರಿಸ್ವಾಮಿಗೆ ಮದುವೆಯಾಗುವ ಹುಚ್ಚನ್ನು ಹಿಡಿಸಿದರು. ಏಕಾಂತವಾಗಿದ್ದ ಮರಿಸ್ವಾಮಿಯವರಿಗೆ ತೊಂದರೆ ಕೊಡುವ ಉದ್ದೇಶ ಇವರದಾಗಿತ್ತು. ಇದರಿಂದ ಬೇಸತ್ತು ಮರಿಸ್ವಾಮಿಯವರು ಇವರನ್ನು ಹಿಂದೆ ಮುಂದೆ ನೋಡದೆ ಹೊರಟರು. ಇವರ ಹೋಗುವಿಕೆಯನ್ನು ಈ ಕಪಟಿಗಳು ನೋಡುತ್ತಿದ್ದಂತಯೇ ಸ್ವಲ್ಪದರಲ್ಲಿ

ಮರಿಸ್ವಾಮಿಗಳು ಮಾಯವಾದರು. ಇದನ್ನು ನೋಡಿದ ಈ ಕಪಟಿಗಳು ಮತ್ತು ಲಿಂಗಣ್ಣ ಶೆಟ್ಟಿ ತಮ್ಮ ತಪ್ಪಿನ ಅರಿವಾಗಿ ಮರಿಸ್ವಾಮಿಯವರನ್ನು ಮನದಲ್ಲಿ ನೆನೆದು ಆ ಕನ್ಯೆಗೆ ಬೇರೆಯವರೊಂದಿಗೆ ಮದುವೆ ಮಾಡಿಸಿ ಬೆಂಗಳೂರಿನಲ್ಲಿ ಮರಿಸ್ವಾಮಿಯವರ ಹೆಸರಿನಿಂದ ಮಠವನ್ನು ಕಟ್ಟಿಸಿದರು. ಆ ಕನ್ಯೆಗೆ ಹುಟ್ಟಿದ ಮಗನನ್ನು ಸ್ವಾಮಿಯನ್ನಾಗಿ ಮಾಡಲು ಆಣೆ ಮಾಡಿದರು.

ಬಳ್ಳಾರಿಯ ಬೂದಿಹಾಳದಲ್ಲಿ ಬಸವೇಶ್ವರನ ಗುಡಿಯಲ್ಲಿ ಕೆಲಕಾಲ ತಂಗಿದ್ದರು. ಇವರು ಅಲ್ಲಿರುವುದನ್ನು ನೋಡಿ ಕೆಲವರು ಇಲ್ಲಿಂದ ಇವರನ್ನು ಓಡಿಸಬೇಕೆಂದು ಅವರಿದ್ದಲ್ಲಿಗೆ ಹೋದರು. ಅದರಲ್ಲಿ ಒಬ್ಬನು ಮರಿಸ್ವಾಮಿಯವರ ಮುಂದೆ ಓಡಿಸಲು ಹೋದವನಿಗೆ ಮರಿಸ್ವಾಮಿ ಹೇಳಿದರು ನನ್ನನ್ನು ಯಾರು ಬಿಡಿಸುವರು. ನೀನಳಿದು ಹೋಗು ಎಂದು ಕೋಪದಿಂದ ಬೈದರು; ಅದು ನಿಜವಾಗಿ ಅವನು ಸತ್ತು ಹೋದ. ಜೊತೆಯಲ್ಲಿದ್ದ ಜನರು ಈ ದೃಶ್ಯವನ್ನು ಕಣ್ಣಮುಂದೆ ನೋಡಿ ಎಲ್ಲರೂ ಕೋಪಿಷ್ಠರಾಗಿ ಈ ಸ್ವಾಮಿ ಜೋಗಿ ಎಂದು ಹೊಡೆದರು. ಆಗ ಮರಿಸ್ವಾಮಿಯು ನಾನೇನು ಮಾಡಿದೆನೆಂದು ನಿಮಗೆ ಈ ಪರಿ ಕೋಪ ಬಂದು ನನ್ನನ್ನು ಜೋಗಿ ಎಂದು ಬಡಿದಿರಿ! ಅಲ್ಲಿ ಮಲಗಿರುವವನನ್ನೇ ನೀವು ಕೇಳಿ ಅವನಿಗೆ ನಾನೇನು ಮಾಡಿದೆನೆಂದು ಹೇಳಿದರು. ಅವರು ಸತ್ತವನ ಮುಂದೆ ನಿಂತರು ಅಲ್ಲಿ ಸತ್ತು ಬಿದ್ದ ವ್ಯಕ್ತಿಯು ಎದ್ದು ನಿಂತು ಮಾತನಾಡಿದ; ಇವರು ನನಗೇನು ಮಾಡಲಿಲ್ಲವೆಂದ. ಈ ಮಹಿಮೆಯನ್ನು ಕಂಡು ಅವರೆಲ್ಲ ನೀವೊಬ್ಬ ಮಹಾನ್ ಮಹಿಮಶಾಲಿ ಎಂದು ನಿಮಗೆ ಶರಣ ಶರಣೆಂದು ಭಕ್ತಿಯಿಂದ ವಂದಿಸಿ ಮರಿಸ್ವಾಮಿಯವರ ಭಕ್ತರಾದರು. ಈ ವಿಷಯ ತಿಳಿದ ಊರ ಜನರೆಲ್ಲ ಬಂದು ಮರಿಸ್ವಾಮಿಯವರನ್ನು ಕೊಂಡಾಡುತ್ತ ಭಕ್ತರಾದರು.

ಮುಮ್ಮಡಿ ಕೃಷ್ಣಭೂಪಾಲನ ತಾಯಿ ಲಕ್ಷ್ಮಣಮ್ಮ ಸ್ವಾಮಿಯನ್ನು ಕಾಣಲು ಬಯಸಿದ್ದಳು. ವಿಷಯ ತಿಳಿದು ಮರಿಸ್ವಾಮಿಗಳು ಮೈಸೂರಿಗೆ ಇವರನ್ನು ಕಾಣಲು ಹೋದರು. "ಕೃಷ್ಣ ಮಹಿಪನು ಪ್ರಜೆಗಳೊಡಗೂಡಿ ಸಂಭ್ರಮದಿಂದ ಸ್ವಾಗತಿಸಿದನು. ಆತನ ಕೋರಿಕೆಯಂತೆ ಗುರುಗಳು ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗ, ಶಿವಯೋಗ ಇತ್ಯಾದಿ ಯೋಗ ಭೇದಗಳನ್ನು ವಿಸ್ತಾರವಾಗಿ ತಿಳಿಸಿದರು. ನಂತರ ಮುಂದಿನ ಆಗುಹೋಗುಗಳನ್ನು ಹೇಳಿ ಮನಸ್ಸಿನ ಸ್ಥಿರತೆಯನ್ನು ಕಾಯ್ದುಕೊಳ್ಳುವ ಔಚಿತ್ಯವನ್ನು ಕುರಿತು ಉಪದೇಶಿಸಿ ಚಾಮುಂಡಿಯ ಬೆಟ್ಟಕ್ಕೆ ಬಂದರು. ಅವರ ಪೂಜೆಗೆ ಚಾಮುಂಡಿಯೊಲಿದು ದರ್ಶನವಿತ್ತು ಅವರ ಆಕಾಂಕ್ಷೆಯಂತೆ ಯದುನೃಪಕ ಸೇವೆ ಕನ್ನಡನಾಡಿಗೆ ಅವಿಚ್ಛಿನ್ನವಾಗಿ ಒದಗಿ ಬರಲೆಂದು ಆಶೀರ್ವದಿಸಿದಳು."[೨೬]

ಮರಿಸ್ವಾಮಿಯವರಲ್ಲಿರುವ ಶರಣತ್ವವು ಪರಮಾತ್ಮನ ಮೆಚ್ಚುಗೆಗೆ ಪಾತ್ರವಾಗಿ ಅವನ ಅನುಗ್ರಹಕ್ಕೆ ಒಳಪಟ್ಟಿತ್ತು. ಪರಮಾತ್ಮನನ್ನು ತನ್ನ ಪ್ರತಿ ಕಾರ್ಯದಲ್ಲೂ, ಭಕ್ತರ ಸೇವೆಯಲ್ಲೂ ಕಾಣುತ್ತಿದ್ದರು. ಮರಿಸ್ವಾಮಿಯವರು ಭಕ್ತರ ಪಾಲಿಗೆ ಮಹಾನ್ ದೈವವಾಗಿದ್ದರು. ಬಳ್ಳಾರಿ ಮರಿಸ್ವಾಮಿಯನ್ನು ಕಾಣಲು ಭಕ್ತರು ಬಳ್ಳಾರಿ ಒಂದೇ ಅಲ್ಲದೇ ಅನೇಕ ಜಿಲ್ಲೆಗಳಿಂದ ಅನುಗ್ರಹ - ಆಶೀರ್ವಾದವನ್ನು ಪಡೆಯಲು ಬರುತ್ತಿದ್ದರು. ಸದಾ ಭಕ್ತರಿಗಾಗಿ, ಅವರ ಸೇವೆಗಾಗಿ ಶರಣ ದಂಪತಿಗಳು ಸಿದ್ಧರಿದ್ದರು.

ಮರಿಸ್ವಾಮಿಯವರಿಗೆ ಒಬ್ಬ ಮಹಾನ್ ಶಿಷ್ಯ ದೊರಕಿದ್ದ. ಅವನ ಹೆಸರು ಸಕ್ಕರೆ ಕರಿಡೆಪ್ಪ. ಸಕ್ಕರೆ ವಂಶದ ದಂಪತಿಗಳಿಗೆ ಮಕ್ಕಳಿರಲಿಲ್ಲ. ಇದರ ಚಿಂತೆ ಇವರಿಗೆ ಬಲು ಕಾಡುತ್ತಿತ್ತು. ಒಂದು ದಿನ ಮರಿಸ್ವಾಮಿಯವರಲ್ಲಿಗೆ ಹೋಗಿ ನಮಸ್ಕರಿಸಿ ತಮ್ಮ ಅಂತರಾಳದ ನೋವನ್ನು ಹೇಳಿಕೊಂಡರು. ಈ ದಂಪತಿಗಳ ಹೆಸರು ಸಂಗನಬಸವ - ಗಂಗಾಂಬೆ. ಇವರ ನೋವನ್ನು ಮರಿಸ್ವಾಮಿಯವರು ನಿವಾರಣೆ ಮಾಡಿದರು. ಚಿಂತೆ ಮಾಡಬೇಡಿ ನಿಮಗೆ ಸುಪುತ್ರನೊಬ್ಬನು ಜನಿಸುತ್ತಾನೆ. ಆತನೇ ನಮಗೆ ಪಟ್ಟದ ಶಿಷ್ಯನಾಗುತ್ತಾನೆ ಎಂದು ಆಶೀರ್ವದಿಸಿದರು. ಇವರು ಹೇಳಿದಂತೆ ಸಂಗನಬಸವ ಗಂಗಾಂಬಾ ಇವರಿಗೆ ಗಂಡು ಮಗು ಜನಿಸಿತು. ಆ ಮಗುವೇ ಸಕ್ಕರೆ ಕರಿಡೆಪ್ಪ. ಮರಿಸ್ವಾಮಿಯವರ ಅನುಗ್ರಹದಿಂದ ಹುಟ್ಟಿದ ಈ ಮಗು ಅವರ ಆಶೀರ್ವಾದದಿಂದ ಬೆಳೆದು ದೊಡ್ಡದಾಗಿ ಮರಿಸ್ವಾಮಿಯವರಿಗೆ ಪಟ್ಟದ ಶಿಷ್ಯನಾದನು.

ಶರಣರು ಜನಸಾಮಾನ್ಯರಂತೆ ಜನರ ಮಧ್ಯದಲ್ಲಿಯೇ ಆಡಿ ಬೆಳೆದು ಪರಮಾತ್ಮನ ಅನುಗ್ರಹದಿಂದ ಇವರು ಶರಣರಾಗುತ್ತಾರೆ. ಜನರ ಮಧ್ಯದಲ್ಲಿಯೇ ಬೆಳೆಯುವ ಇವರಿಗೆ ಜನರ ಆಗುಹೋಗು, ಜಾತಿ - ಧರ್ಮ, ಕಷ್ಟ - ನೋವುಗಳ ಅರಿವು ಇರುವುದರಿಂದ ಅವರ ಕಷ್ಟಗಳಿಗೆ ಸ್ಪಂದಿಸುತ್ತಾರೆ. ಸದಾ ಜನರ ಒಳಿತಿಗಾಗಿ ಸಿದ್ಧರಿರುತ್ತಾರೆ. ಶರಣರ ಮನವು ಸದಾ ಪರಮಾತ್ಮನ ಚಿಂತನೆಯಲ್ಲಿದ್ದು ಪ್ರೀತಿ ಕರುಣೆಯಿಂದ ಅವರ ಮನಸ್ಸು ಆವರಿಸಿರುತ್ತದೆ. ಶರಣರು ಶಿವಭಕ್ತಿ ತತ್ವ ನಿಷ್ಠೆ ಶಿವಧ್ಯಾನದಿಂದ ತಾವು ಭಗವಂತನನ್ನು ಪ್ರೀತಿಯಿಂದ ಅನುಗ್ರಹ ಪಡೆದುಕೊಂಡಿರುತ್ತಾರೋ ಅದೇ ಅವರ ಮನಸ್ಸನ್ನು ವ್ಯಾಪಿಸಿಕೊಂಡಿರುತ್ತದೆ.

ಇವರು ಅಪಾರವಾದ ಜ್ಞಾನವನ್ನು ಪಡೆದುಕೊಂಡಿರುತ್ತಾರೆ. ದಿವ್ಯದೃಷ್ಟಿಯಿಂದ ಭವಿಷ್ಯವನ್ನು ತಿಳಿದಿತ್ತು. ಮರಿಸ್ವಾಮಿಯವರಿಗೆ ತಮ್ಮ ಸಾವಿನ ಮಾಹಿತಿ ಮುಂಚೆಯೇ ತಿಳಿಯುತ್ತದೆ. ಅವರು ಅದನ್ನು ತನ್ನ ಭಕ್ತರಿಗೆ ಶಿಷ್ಯರಿಗೆ ಮತ್ತು ಪತ್ನಿಗೆ ತಿಳಿಸಿದಾಗ ಅವರು ಕಣ್ಣೀರು ಸುರಿಸುವುದನ್ನು ಕಂಡು ಮರಿಸ್ವಾಮಿಯವರು "ಶರಣರು ಸಾವಿಗೆ ಹೆದರುವವರಲ್ಲ. ಮರಣವೆಂದರೆ ಶರಣರಿಗೆ ಮಹಾನವಮಿ ಹಬ್ಬ ಇದ್ದಂತೆ. ದೇಹವು ಧರ್ಮಕ್ಕೆ ಸರಿಯಾಗಿ ಶಿವನ ಇಚ್ಛೆಯಂತೆ ನಡೆಯಬೇಕಾದುದು ಅನಿವಾರ್ಯ ಶರಣರಿಗೆ ಸಾವಿಲ್ಲ ಅವರು ತನ್ನ ತಂದೆಯನ್ನು ಕಾಣಲು ಪ್ರೀತಿಯಿಂದ ಅಪ್ಪಿಕೊಳ್ಳಲು ಹೋಗುವ ಮಾರ್ಗ. ಇದನ್ನು ಮರಣವೆಂಬುದು ಕೂಡ ಸರಿಯಲ್ಲ. ಪ್ರೀತಿಯ ಪರಮಾತ್ಮನಾದ ತಂದೆಯನ್ನು ಅಪ್ಪಿಕೊಳ್ಳಲು ಹೋಗುವ ಹಾದಿ ಎಂದುಕೊಳ್ಳುವುದು ಒಳಿತು" ಎಂದು ಎಲ್ಲರ ಮನಸ್ಸಿನಲ್ಲಿ ಸಂತೋಷವನ್ನು ಹುಟ್ಟಿಸಿ ಭಯ ಮತ್ತು ದುಃಖವನ್ನು ದೂರವಾಗಿಸಿದರು. ಎಲ್ಲರ ಜೊತೆ ಮಾತನಾಡುತ್ತಲೇ ಮೌನದ ಹಾದಿ ಹಿಡಿದು ಲೌಕಿಕದ ಸಂಬಂಧದಿಂದ ಮುಕ್ತಿಯನ್ನು ಹೊಂದಿದರು. "೧೭೬೪ ಹದಿನೇಳನೂರ ಅರವತ್ನಾಲ್ಕು ಶೋಭನಕೃತ ಸಂವತ್ಸರ ಆಷಾಡ ಶುದ್ಧ ತೃತೀಯ ಭಾನುವಾರ ಮಧ್ಯಾಹ್ನ ಶಿವಪೂಜೆ ಮುಗಿಸಿ ಮರಿಯೋಗೀಶ ಮರಿಸ್ವಾಮಿಯವರು ಲಿಂಗೈಕ್ಯರಾದರು."[೨]

## ೪.೨. ತತ್ವಪದಕಾರರ ಜೀವನ ಚರಿತ್ರೆ

### ತಿಕ್ಕಯ್ಯ

ಕಾಲ : ೧೯ನೆಯ ಶತಮಾನ

ಅಂಕಿತ : ಎರ್ರಿತಾತ, ತಿಕ್ಕಯ್ಯ

ಗುರು : ಚಳ್ಳಗುರಿಕಿ ಎರ್ರಿತಾತ

ರಚಿಸಿರುವ ತತ್ವಪದಗಳು ಮಠಗಳಲ್ಲಿ ಮತ್ತು ದೇಗುಲಗಳಲ್ಲಿ ಭಜನೆ ಪದಗಳಾಗಿ ಹಾಡಲ್ಪಟ್ಟಿವೆ.

ಬಳ್ಳಾರಿ ಜಿಲ್ಲೆಯ ತುಂಗಭದ್ರಾ ನದಿ ಪ್ರಾಂತ್ಯದ ಚಳ್ಳಗುರ್ಕಿ ಗ್ರಾಮದಲ್ಲಿರುವ ತತ್ವಪದಕಾರ ತಿಕ್ಕಯ್ಯ ಇವರು ೧೯ನೆಯ ಶತಮಾನದಲ್ಲಿ ಬಾಳಿ ಬದುಕಿದವರು.

ಚಳ್ಳಗುರ್ಕಿಯಲ್ಲಿ ಎರ್ರಿತಾತನೆಂಬ ಅವಧೂತರು ಪ್ರಸಿದ್ಧಿಯನ್ನು ಪಡೆದಿದ್ದರು. ಅನೇಕ ಸ್ಥಳಗಳಿಂದ ಜನರು ಬಂದು ತಾತನವರ ದರ್ಶನ ಮಾಡಿ ಅವರ ಅನುಗ್ರಹವನ್ನು ಪಡೆಯುತ್ತಿದ್ದರು. ಹಾಗೆ ಬಂದವರಲ್ಲಿ ತಿಕ್ಕಯ್ಯನವರು ಒಬ್ಬರು. ಈ ತಿಕ್ಕಯ್ಯನವರು ವಿಶೇಷ ಜ್ಞಾನಾಕಾಂಕ್ಷಿಗಳಾಗಿದ್ದರು. ಇವರು ಎಲ್ಲರಿಗಿಂತ ಮುಖ್ಯವಾದ ವ್ಯಕ್ತಿಗಳಾಗಿದ್ದರು. ಈತನ ನಿಜನಾಮವೇನೆಂದು ಯಾರಿಗೂ ತಿಳಿಯದು, ಯಾವ ಊರೆಂದು ಕೂಡ ಯಾರಿಗೂ ತಿಳಿಯದು, ತಿಕ್ಕಯ್ಯನವರು ಈ ಚಳ್ಳಗುರ್ಕಿಯಲ್ಲಿ ಕಾಣಿಸಿಕೊಂಡಾಗಿನಿಂದ ಒಂದು ವರ್ಷದವರೆಗೆ ಯಾರೊಂದಿಗೂ ಮಾತನಾಡಿದವರಲ್ಲ, ಸದಾ ಮೌನಿಯಾಗಿರುತ್ತಿದ್ದರು. ಎರ್ರಿತಾತನವರ ಸೇವೆಯೇ ಇವರಿಗೆ ಮುಖ್ಯವಾದ ಕಾಯಕವಾಗಿತ್ತು. ಬೇರಾವ ಕೆಲಸವೂ ಇರಲಿಲ್ಲ, ಊರಲ್ಲಿರುವ ಮನೆಮನೆಗೆ ಅಲೆದು ಭಿಕ್ಷೆ ಬೇಡುತ್ತಾ ಹೊಟ್ಟೆ ತುಂಬಿಸಿಕೊಂಡು ತಾತನವರ ಸೇವೆ ಗೈಯುತ್ತಾ ಅವರ ಬಳಿಯಲ್ಲಿಯೇ ಉಳಿದರು. ಈತನ ಈ ನಿಷ್ಠೆಯುಳ್ಳ ಸೇವೆಯನ್ನು ಕಂಡು ಸಂತೋಷಪಡುತ್ತಿದ್ದ ಜನರು ಯಾರು ಬಲವಂತದಿಂದ ನಿಮ್ಮ ಹೆಸರೇನು? ಯಾವ ಊರು? ಎಲ್ಲಿಂದ ಬಂದೇ? ತಂದೆ ತಾಯಿ ಯಾರು? ಎಂಬ ಯಾವ ಪ್ರಶ್ನೆಗಳನ್ನು ಕೇಳಲಿಲ್ಲ, ತಿಳಿಯಲೇಬೇಕೆಂಬ ಹಠವನ್ನು ಯಾರೂ ಮಾಡಲಿಲ್ಲ. ಸದಾ ಎರ್ರಿತಾತನವರ ಸೇವೆಯಲ್ಲಿಯೇ ತನ್ನ ಸರ್ವಸ್ವವನ್ನು ಕಳೆಯುವ ಇವರ ಆಶಯವನ್ನು ಕಂಡು ಜನರು ಅಚ್ಚರಿಗೊಂಡಿದ್ದರು. ಇವರಿಗಿಂತ ಮೊದಲೇ ಒಬ್ಬ ಹುಚ್ಚ ಎರ್ರಿ ಬಂದಿದ್ದಾನೆ. ಇವನೊಬ್ಬ ತಿಕ್ಕ, ಹುಚ್ಚನಿಗೊಬ್ಬ ತಿಕ್ಕ ಶಿಷ್ಯನೆಂದು ಜನರು ಹಾಸ್ಯದಿಂದ ನುಡಿಯುತ್ತಿದ್ದರು. ಈ ಹಾಸ್ಯದಿಂದ ನುಡಿದ ಹೆಸರೇ "ತಿಕ್ಕಯ್ಯ" ಪ್ರಸಿದ್ಧಿ ಪಡೆಯಿತು. ಎರ್ರಿತಾತನವರನ್ನು ತನ್ನ ಗುರುವನ್ನಾಗಿ ಮಾಡಿಕೊಂಡು ಸದಾ ಅವರ ಸೇವೆಯಲ್ಲಿಯೇ ದಿನಕಳೆಯುತ್ತಿದ್ದರು. ಆದರೆ ತಿಕ್ಕಯ್ಯನವರ ಜೀವನದ ವಿವರಗಳು ಅಸ್ಪಷ್ಟವಾಗಿವೆ.

ತಿಕ್ಕಯ್ಯ ಮೌನವಾಗಿರುವುದು, ಸದಾ ಗುರುವಿನ ಧ್ಯಾನದಲ್ಲಿದ್ದು ಅಲೌಕಿಕದ ಚಿಂತನೆಯಲ್ಲಿರುತ್ತಿದ್ದರು. ಇವರ ಲಕ್ಷಣಗಳೆಲ್ಲವು ಪರಮಾರ್ಥಿಕವಾಗಿರುವಂತೆಯೇ ಹೆಚ್ಚಾಗಿ ಕಂಡಿರುವುದು.

ಪರಮಾರ್ಥಿಕ ಸ್ಥಿತಿಯಲ್ಲಿದ್ದ ತಿಕ್ಕಯ್ಯ ಜನಸಾಮಾನ್ಯರ ನೋಟಕ್ಕೆ ಒಬ್ಬ ಹುಚ್ಚನಾಗಿ ಕಾಣಿಸಿಕೊಂಡ; ಜನರು ನೋಡುವ ನೋಟದಲ್ಲಿ ಮನುಜನ ಸ್ಥಿತಿಯನ್ನು ಗುರುತಿಸುತ್ತಾರೆ. ಜನಸಾಮಾನ್ಯರು ಲೌಕಿಕವಾದ ಜೀವನದ ಪಯಣದಲ್ಲಿರುವುದರಿಂದ ಅವರ ನೋಟವು ಎದುರಲ್ಲಿರುವ ವ್ಯಕ್ತಿಯ ದೇಹವನ್ನು ಮಾತ್ರ ಗುರುತಿಸುತ್ತದೆಯೇ ಹೊರತು ಆತನ ನಿಜ ಸ್ಥಿತಿಯನ್ನಲ್ಲ, ಹೊರನೋಟಕ್ಕೆ ತಿಕ್ಕಯ್ಯ ಹುಚ್ಚನಂತೆ ಕಂಡಕಾರಣ ಆತನನ್ನು ಹುಚ್ಚ ತಿಕ್ಕಯ್ಯನೆಂದು ಕರೆದರು. ಆದರೆ ಆತ ಒಳನೋಟದಲ್ಲಿ ಅಲೌಕಿಕನಾಗಿದ್ದ; ಅವನೊಬ್ಬ ಅನುಭಾವಿಯಾಗಿದ್ದ; ಅದನ್ನು ಜನಸಾಮಾನ್ಯರು ಗುರುತಿಸಲಿಲ್ಲ.

ತಿಕ್ಕಯ್ಯ ತನ್ನ ಸಾಂಸಾರಿಕವಾದ ಜೀವನವನ್ನು ತ್ಯಜಿಸಿ ಅಂತರಾತ್ಮ ಬಯಸಿದ ಜ್ಞಾನವನ್ನು ಅರಸುತ್ತ ಬಂದ ವ್ಯಕ್ತಿ ತನ್ನ ಗುರುವನ್ನು ಚಳ್ಳಗುರ್ಕಿಯಲ್ಲಿ ಕಂಡುಕೊಂಡ. ಪರಮಾರ್ಥಿಕವಾದ ಪಯಣದಲ್ಲಿದ್ದ ಎರ್ರಿತಾತ ಮತ್ತು ತಿಕ್ಕಯ್ಯನವರ ಗುರುಶಿಷ್ಯರ ಸಂಬಂಧ ಜನಸಾಮಾನ್ಯರ ನೋಡುವ ಕಣ್ಣುಗಳಿಗೆ ಭಿನ್ನವಾಗಿ ಕಂಡರೂ ಆಧ್ಯಾತ್ಮಿಕವಾದ ದೃಷ್ಟಿಯಲ್ಲಿ ಅದು ಸಾಧ್ಯವಾಗಿತ್ತು.

ಸದಾ ಗುರುವಿನ ಸೇವೆಯೇ ಪ್ರಸಾದವೆಂದು ಜೀವನ ಸಾಗಿಸುತ್ತಿದ್ದ ತಿಕ್ಕಯ್ಯನಿಗೆ, ಗುರುಗಳಾದ ತಾತನವರಿಗಾಗಿ ಒಂದು ಮಠ ಕಟ್ಟಬೇಕೆನ್ನುವ ಆಸೆ ಮೂಡಿತು. ಅದನ್ನು ಮನದಲ್ಲಿಟ್ಟುಕೊಂಡು ಹಾಗೆ ಕೆಲದಿನಗಳನ್ನು ಕಳೆದರು. ನಂತರ ಊರಿನ ಹಿರಿಯರ ಮುಂದೆ ಈ ವಿಷಯವನ್ನು ಪ್ರಸ್ತಾಪಿಸಿದರು; ಊರಿನ ಹಿರಿಯರು ಇದಕ್ಕೆ ತಮ್ಮೆಲ್ಲರ ಒಪ್ಪಿಗೆಯನ್ನು ತಿಕ್ಕಯ್ಯನವರಿಗೆ ನೀಡಿದರು. ಎಲ್ಲರೂ ತಮ್ಮ ಶಕ್ತಿಗನುಸಾರವಾಗಿ ಸಹಾಯ ಮಾಡಿದರು. ಊರಿನವರು ಮತ್ತು ಬೇರೆ ಗ್ರಾಮಗಳಿಂದ ಬಂದ ಭಕ್ತರ ಸಹಾಯದಿಂದ ಎರ್ರಿತಾತನವರಿಗೆ ಮಠವನ್ನು ಕಟ್ಟಿಸಿದರು. ಈಗ ನಾವು ದರ್ಶನಕ್ಕಾಗಿ ಹೋದಾಗ ನೋಡುತ್ತಿರುವ ಶಿಲಾಮಂಟಪವನ್ನು ತಿಕ್ಕಯ್ಯನವರೇ ಕಟ್ಟಿಸಿದ್ದಾರೆ.

"ವೈರಾಗ್ಯ, ಸತ್ಯ, ಗುರುಭಕ್ತಿ ವಿನಯಭಾವಗಳು ತಿಕ್ಕಯ್ಯನವರಲ್ಲಿ ಮನಮಾಡಿಕೊಂಡಿದ್ದವು. ಗುರುಸೇವೆಗಾಗಿ ಮಠ ಕಟ್ಟುವ ಕಾರ್ಯದಲ್ಲಿ ಸುತ್ತಲಿನ ಊರುಗಳಲ್ಲಿ ಅಲೆದಾಡಿ ಬೇಡಿ ಮಠದ ಕಾರ್ಯವನ್ನು ಪೂರ್ಣಗೊಳಿಸಿದ್ದಾರೆ. ಊರಿಂದೂರಿಗೆ ಕಾಣಿಕೆ ಬೇಡಲು ಕುದುರೆ ಯೊಂದನ್ನು ಉಪಯೋಗಿಸುತ್ತಿದ್ದು, ಅವರ ಸವಾರಿ ಮಾತ್ರ ಎಲ್ಲರಂತಿರದೆ, ಬಾಲದ ಕಡೆಗೆ ಮುಖಮಾಡಿ ಸವಾರಿ ಮಾಡುತ್ತಿದ್ದರೆಂಬುದು ವೈಶಿಷ್ಟ್ಯವಾಗಿದೆ."[೨೫]

ತಾಯಿ ಮತ್ತು ಮಗುವಿನ ಸಂಬಂಧದಂತೆ ತತ್ವಪದಕಾರರಲ್ಲಿ ಗುರು ಮತ್ತು ಶಿಷ್ಯನ ಸಂಬಂಧ ನಿಶ್ಚಲ ಮತ್ತು ನಿರ್ಮಲವಾಗಿರುತ್ತದೆ. ಗುರು ಶಿಷ್ಯನಿಂದ ಯಾವ ಅಪೇಕ್ಷೆಯನ್ನು ಬಯಸುವುದಿಲ್ಲ; ಶಿಷ್ಯನು ಗುರುವಿನಿಂದ ಯಾವುದನ್ನು ಬಯಸುವುದಿಲ್ಲ, ಶಿಷ್ಯ ಗುರುವಿನ ಮೇಲೆ ಅಪಾರ ಭಕ್ತಿ ಮತ್ತು ಗೌರವವನ್ನು ಹೊಂದಿರುತ್ತಾನೆ, ಗುರು ಶಿಷ್ಯನ ಸೇವೆ ಅವನು ಅವನ ಮನದಲ್ಲಿ ತನ್ನನ್ನು ಆರಾಧಿಸುವ ಬಗೆಯನ್ನು ಕಂಡು ಆನಂದಿಸುತ್ತಾನೆ. ಒಬ್ಬರಿಗೊಬ್ಬರು ನಿಸ್ವಾರ್ಥ ಪ್ರೀತಿಯನ್ನು ಹೊಂದಿರುತ್ತಾರೆ. ಈ ತಿಕ್ಕಯ್ಯನವರು ಕೂಡ ಎರ್ರಿತಾತನನ್ನು ಗುರುವೆಂದು

ಮನಸ್ಸಿನಲ್ಲಿಟ್ಟುಕೊಂಡು ಆರಾಧಿಸುತ್ತಿದ್ದರು. ಗುರುವಿಗಾಗಿ ಅನೇಕ ಭಕ್ತಿ ಗೀತೆಗಳನ್ನು ರಚಿಸಿ ಗುರುವಿನಂತೆ ವಿರಾಗಿಯಾಗಿ ಸಾಂಸಾರಿಕ ಜೀವನದ ಬಗ್ಗೆ ವೈರಾಗ್ಯ ತಾಳಿದವರಾಗಿದ್ದರು. ಅವನ ದೇಹ ಮನಸ್ಸೆಲ್ಲಾ ಗುರುಭಕ್ತಿ, ಗುರುಸೇವೆ ಬಿಟ್ಟರೆ ಬೇರೆ ಏನು ಕಾಣಿಸುತ್ತಿರಲಿಲ್ಲ. ಅಷ್ಟೊಂದು ಪ್ರೀತಿ ಗೌರವ ತುಂಬಿರುವ ತಿಕ್ಕಯ್ಯನ ಮನದಲ್ಲಿ ಸಹನೆ, ಪ್ರೀತಿ ಮಾತ್ರ ಕಾಣುತ್ತಿತ್ತು, ನಾನು ಎಂಬ ಅಹಂಕಾರ, ಕೋಪ ಮಾತ್ರ ಅವನಿಂದ ದೂರವಾಗಿತ್ತು, ಪಾರಮಾರ್ಥಿಕ ಆಲೋಚನೆಯಲ್ಲಿಯೇ ತಲ್ಲೀನರಾಗಿದ್ದುಕೊಂಡು ಗುರುಸೇವೆಯಲ್ಲಿಯೇ ತನ್ನ ಜೀವನವನ್ನು ಕಂಡರು. ಇವರ ಸೇವೆಯನ್ನು ಕಂಡ ಜನರು ತಾತನವರ ಭಕ್ತಾದಿಗಳು 'ಇದ್ದರೆ ಶಿಷ್ಯ ತಿಕ್ಕಯ್ಯನಂತಿರಬೇಕು' ಎಂದು ಇವರ ಸೇವೆಯನ್ನು ಮೆಚ್ಚುತ್ತಿದ್ದರು. ತಿಕ್ಕಯ್ಯನವರು ತಾತನವರ ಮತ್ತು ಮಠದ ಅಭಿವೃದ್ಧಿಗಾಗಿ ತನ್ನನ್ನೇ ಅರ್ಪಿಸಿಕೊಂಡಿದ್ದರು. ನಿಸ್ವಾರ್ಥ ಪ್ರೀತಿಯನ್ನೇ ಅನುಭಾವ ಎನ್ನುವುದೆಂಬುದನ್ನು ತಿಕ್ಕಯ್ಯನವರಿಲ್ಲಿ ತೋರಿಸಿಕೊಟ್ಟರು.

ಆಸೆ, ಆಕಾಂಕ್ಷೆ, ಬಯಕೆಗಳೆಲ್ಲ ಲೌಕಿಕವಾದ ಬದುಕಿಗೆ ಸಲ್ಲುತ್ತವೆ ಮತ್ತು ಅಂಥ ಬದುಕು ವೈಭೋಗ, ಆಡಂಬರದ ಜೀವನವನ್ನು ಬಯಸುತ್ತದೆ. ಇದರ ಮೇಲಿನ ಮೋಹವನ್ನು ಕಿತ್ತೆಸೆಯುವುದೇ ವೈರಾಗ್ಯ! ಜೀವನ ಕ್ಷಣಿಕ ಬದುಕು, ಕ್ಷಣಿಕ ಸುಖ, ವಿಕೃತ ಮನಸ್ಸು, ದ್ವೇಷ, ಅಸೂಯೆ ತುಂಬಿದ ಈ ಲೌಕಿಕದ ಜೀವನದಿಂದ ವೈರಾಗ್ಯ ಪಡೆದು ನಿಸ್ವಾರ್ಥದ ಬದುಕಿನಲ್ಲಿ ಬಾಳಿ ಬದುಕಿ ಈ ಸ್ವಾರ್ಥ ಬಯಕೆಗಳ ಜೀವನದಿಂದ ಮುಕ್ತಿಯನ್ನು ಪಡೆಯಲು ದಾರಿಯನ್ನು ಹುಡುಕಹೊರಟವರಿಗೆ ಸಿಗುವ ಮಾರ್ಗವೇ ಅನುಭಾವ ಮಾರ್ಗ. ಇಂಥ ದಾರಿಯತ್ತ ಮುಖಮಾಡಿ ಹೊರಟವರಲ್ಲಿ ಈ ತತ್ವಪದಕಾರರು ಕೂಡ ಸೇರಿಕೊಂಡಿದ್ದಾರೆ. ತಿಕ್ಕಯ್ಯನವರು ಈ ಸ್ವಾರ್ಥ ಜೀವನದಿಂದ ಬೇಸತ್ತು ತನ್ನ ಮಾರ್ಗಕ್ಕೆ ಗುರುವನ್ನು ಹುಡುಕುವಾಗ ತನ್ನ ವಿರಕ್ತ ಜೀವನದ ದಾರಿಯಲ್ಲಿ ಗುರುವಾಗಿ ಸಿಕ್ಕಿದ್ದು ಎರ್ರಿತಾತನವರು. ಇವರನ್ನು ಗುರುವಾಗಿ ಪಡೆದು ತನ್ನ ಮುಕ್ತಿ ಮಾರ್ಗದಲ್ಲಿ ಹೊಸ ಹೆಜ್ಜೆಯನ್ನು ಕಂಡುಕೊಂಡ ತಿಕ್ಕಯ್ಯನವವರು ಗುರುಸೇವೆಯನ್ನು ಮಾಡುತ್ತ ಗುರುವಿನ ಕೃಪೆಗೆ ಪಾತ್ರರಾಗಿದ್ದರು. ತಿಕ್ಕಯ್ಯನ ದೇಹ ಮನಸ್ಸೆಲ್ಲ ಗುರುವಿನ ಭಕ್ತಿ - ಪ್ರೀತಿ ತುಂಬಿಕೊಂಡಿತ್ತು. ಅದಲ್ಲದೆ ಅವರ ಮನದಲ್ಲಿ ಬೇರೆಯಾವ ಆಲೋಚನೆಗಳು ಇರಲಿಲ್ಲ, ಇಂಥ ಅನುಭಾವದ ಮಾರ್ಗದಲ್ಲಿ ನಡೆದ ತತ್ವಪದಕಾರರೆಂಬ ಅನುಭಾವಿಗಳಿಗೆ ಪ್ರಪಂಚದಲ್ಲಿನ ಲೌಕಿಕ ಸಂಬಂಧಗಳೊಂದಿಗೆ ವಿರಕ್ತಿಯನ್ನು ಹೊಂದಿ ತಾನು ಕಂಡುಕೊಂಡ ತನ್ನ ಗುರುವಿನ ಸಂಬಂಧದೊಂದಿಗೆ ತಮ್ಮ ಜೀವನವನ್ನು ಅಂತ್ಯಗೊಳಿಸಿಕೊಳ್ಳುತ್ತಾರೆ. ತಿಕ್ಕಯ್ಯ ಕೂಡ ತನ್ನ ಗುರುವಿನ ಸೇವೆಯಲ್ಲಿ ಸಾಧನೆಯನ್ನು ಕಂಡುಕೊಂಡು ತನ್ನ ಗುರುವಿನ ಆಲೋಚನೆಯಲ್ಲಿಯೇ ಬದುಕಿನ ಪ್ರಯಾಣವನ್ನು ಮಾಡುತ್ತ ತನ್ನ ಗುರುವನ್ನು ಹೊಗಳುತ್ತಾ ಅನುಗ್ರಹ ಪಡೆಯುತ್ತ ಅವರಿಗಾಗಿ ಅನೇಕ ಪದಗಳನ್ನು, ಭಕ್ತಿಗೀತೆಗಳನ್ನು ರಚಿಸಿದ್ದಾರೆ.

ತಿಕ್ಕಯ್ಯನವರ ಈ ರೀತಿ ಮತ್ತು ಅವನಿಗೆ ಎರ್ರಿತಾತನಲ್ಲಿರುವ ಗೌರವ ಭಕ್ತಿ ಮತ್ತು ಭಕ್ತ ಜನರು ತಿಕ್ಕಯ್ಯನವರನ್ನು ಹೊಗಳುವುದನ್ನು ಕಂಡು ಸಹಿಸಲಾಗದ ಕೆಲ ಜನರು ತಿಕ್ಕಯ್ಯನವರನ್ನು

ಕೊಲ್ಲಲು ಪ್ರಯತ್ನಿಸಿದರು. ವಿಷಯ ತಿಳಿದ ಎರ್ರಿತಾತ ತಿಕ್ಕಯ್ಯನವರು ಇಲ್ಲಿರಿವುದು ಸರಿಯಲ್ಲವೆಂದು "ಹೊರಟು ಹೋಗಯ್ಯ ಇಲ್ಲಿಂದ" ಎಂದರೆ. ತಿಕ್ಕಯ್ಯ ಅದಕ್ಕೆ ಮರುಮಾತನಾಡದೆ ಯಾಕೆ, ಏನೆಂದು ಕೇಳದೆ ಗುರುವಿನ ಆಜ್ಞೆಯನ್ನು ಪಾಲಿಸಿ ಹೊರಟು ಹೋದರು.

ತತ್ವಪದಕಾರರು ಜನರ ಮಧ್ಯದಲ್ಲಿದ್ದು ಅವರ ಆಗುಹೋಗುಗಳನ್ನರಿತು ಜನಸಾಮಾನ್ಯರಲ್ಲಿರುವ ಕುಲ-ಧರ್ಮ, ಜಾತಿಗಳ ತಾರತಮ್ಯಗಳನ್ನರಿತು, ಅದೆಲ್ಲದರಿಂದಾದ ಸುಖಮಯದ ಜೀವನದ ಹಾದಿಯನ್ನು ತೋರಿಸುವ ಪ್ರಯತ್ನವನ್ನು ತಮ್ಮ ಪದಗಳಲ್ಲಿ ಹೇಳುತ್ತಾರೆ. ಈ ತತ್ವಪದಕಾರರು ಧರ್ಮ -ಜಾತಿ ತಾರತಮ್ಯಗಳನ್ನು ಮೀರಿ ನಿಂತವರಾಗಿರುತ್ತಾರೆ. ತತ್ವಪದಗಳ ಮೂಲಕ ಜನರಲ್ಲಿರುವ ಆಜ್ಞಾನವನ್ನು ತೊಲಗಿಸುತ್ತಾ ಜ್ಞಾನದ ಬೆಳಕನ್ನು ತುಂಬುತ್ತಾರೆ. ತತ್ವಪದಕಾರರು ಜನಸಾಮಾನ್ಯರಿಗೆ ಬೆಳಕನ್ನು ಚೆಲ್ಲುವ ಪದಗಳನ್ನು ರಚಿಸಿ ತಾವು ಭಗವಂತನಿಗೆ ತೋರುವ ಭಕ್ತಿ ಗೌರವವನ್ನು ಕೂಡ ತಮ್ಮ ಪದಗಳ ಮೂಲಕ ಅಭಿವ್ಯಕ್ತ ಪಡಿಸುತ್ತಾರೆ.

ಜನಸಾಮಾನ್ಯರಲ್ಲಿರುವ ಅಜ್ಞಾನದ ನಡೆ ನುಡಿಗಳಲ್ಲಿ ಬದಲಾವಣೆಯನ್ನು ತರುವ ಪ್ರಯತ್ನ ಮಾಡುತ್ತಾರೆ. ಅವರಲ್ಲಿರುವ ಅಂಧತ್ವಕ್ಕೆ ಜ್ಞಾನವನ್ನು ಬೆಳಕಿನಲ್ಲಿ ಕೊಡುತ್ತ ಅರಿವಿನೆಡೆಗೆ ತರುತ್ತಾರೆ. ಜನಸಾಮಾನ್ಯರ ಮನಸ್ಸಿನಲ್ಲಿರುವ ವಿಕೃತ ಗುಣಗಳನ್ನು ಹೊಡೆದೊಡಿಸುವ ಪ್ರಯತ್ನ ತತ್ವಪದಕಾರರು ಮಾಡುತ್ತಾರೆ. ಜನಸಾಮಾನ್ಯರು ಪದಗಳನ್ನು ಕೇಳಿ ತಮ್ಮತನವನ್ನು, ತಪ್ಪುಗಳನ್ನು ಆದಷ್ಟು ಬೇಗ ಅರಿತು ಸರಿಪಡಿಸಿಕೊಳ್ಳುತ್ತಾರೆ. ಜನಸಾಮಾನ್ಯರಲ್ಲಿ ಎಲ್ಲ ವರ್ಗದ ಜನರು ಅಕ್ಷರಸ್ಥರೆಂದು ಹೇಳುವ ಹಾಗಿಲ್ಲ. ಕೆಲವರು ಅಕ್ಷರ ಕಲಿತವರು ಮತ್ತು ಕೆಲವರು ಕಲಿಯದವರಾಗಿರುತ್ತಾರೆ. ಇಲ್ಲಿ ಮುಖ್ಯವಾಗಿ ಹೇಳಬೇಕಾದ ವಿಷಯವೆಂದರೆ ಅಕ್ಷರ ಕಲಿಯದಿದ್ದರೂ ಇವರಲ್ಲಿ ನಾಗರಿಕತೆಯಿರುತ್ತದೆ. ಹೇಳಿದ್ದನ್ನು ಕೇಳಿ ಅರಿತುಕೊಳ್ಳುವ ಜ್ಞಾನವಿರುತ್ತದೆ. ಹಾಗಾಗಿ ಈ ತತ್ವಪದಗಳು ಇವರ ಮನಸ್ಸಿಗೆ ಮತ್ತು ಬುದ್ಧಿಗೆ ತಲುಪಿ ಲೋಕದ ಜ್ಞಾನವನ್ನು ಅರಿತು ನಡೆಯಬಲ್ಲರೆಂಬುದು ನಿಜ. ತಿಕ್ಕಯ್ಯರವರು ತನ್ನ ಮನದ ಆಶಯವನ್ನು ಗುರುವಿನಲ್ಲಿಟ್ಟಿರುವ ಭಕ್ತಿಯನ್ನು ಮೌನದಿಂದ ತೋರುತ್ತಾ ಜೊತೆಗೆ ಈ ತತ್ವಪದಗಳ ಮುಖಾಂತರ ವ್ಯಕ್ತಪಡಿಸಿದರು. ಅವರು ತನ್ನ ಗುರುವಿನಲ್ಲಿಟ್ಟಿರುವ ಗೌರವ -ಪ್ರೀತಿಯನ್ನು ತತ್ವ ಪದದಲ್ಲಿ ತೋರಿಸದಿದ್ದರೆ ಜನಸಾಮಾನ್ಯರಿಗೆ ಇವರ ಗುರು ಶಿಷ್ಯನ ಸಂಬಂಧದ ವಿಷಯ ತಿಳಿಯುವುದು ಕಷ್ಟವಾಗಿರುತ್ತಿತ್ತು. ಅವರನ್ನು ನೋಡಿದ ಕೆಲವರಿಗೆ ಮಾತ್ರ ಸ್ಪಷ್ಟವಾಗಿರುತ್ತಿತ್ತು. ಗುರು ಎರ್ರಿತಾತ ಶಿಷ್ಯನನ್ನು ಯಾವ ರೀತಿ ಅನುಗ್ರಹಿಸಿದ್ದನೆಂಬುದು ಮತ್ತು ಶಿಷ್ಯ ತಿಕ್ಕಯ್ಯ ತಾನು ಗುರುವಿನ ಬಗೆಗಿನ ಗೌರವ ಪ್ರೀತಿಯನ್ನು ಯಾವ ರೀತಿಯಲ್ಲಿ ಗುರುವಿನ ಅನುಗ್ರಹ ಆಶೀರ್ವಾದಕ್ಕೆ ಒಳಗಾಗಿದ್ದನೆಂಬುದು ಅರಿಯಲು ತಿಕ್ಕಯ್ಯನವರು ರಚಿಸಿದ ಪದಗಳಿಂದ ತಿಳಿಯಬಹುದು. ಆ ಪದಗಳಿಂದ ಅವರ ಸಂಬಂಧವನ್ನು ಅರಿಯಬಹುದಾಗಿದೆ. ಈ ಪದಗಳಲ್ಲಿ ಬರೀ ಪ್ರೀತಿ - ಅನುಗ್ರಹ ಒಂದೇ ಇರುವುದಿಲ್ಲ. ಅನುಭವಗಳ ಜೊತೆ ನೋವು–ನಲಿವುಗಳು ಕೂಡ

ಒಳಗೊಂಡಿರುತ್ತವೆ. ತಿಕ್ಕಯ್ಯರವರು ತಾವು ರಚಿಸಿದ ಪದಗಳಲ್ಲಿ ತಮ್ಮ ಗುರುವಿನ ಮಹಿಮೆಯನ್ನು ಮತ್ತು ತನ್ನ ನೋವು -ನಲಿವನ್ನು ಕೂಡ ಒಳಗು ಮಾಡಿಕೊಂಡಿದ್ದಾರೆ. ಒಮ್ಮೆ ತಮ್ಮ ಗುರು ಎರ್ರಿತಾತರವರು ತಿಕ್ಕಯ್ಯರವರನ್ನು ಚಳ್ಳಗುರ್ಕಿಯಲ್ಲಿದ್ದು ಸೇವೆ ಸಲ್ಲಿಸುತ್ತಿರುವುದು ಸಾಕು. ನೀನಿನ್ನು ಎಲ್ಲಾದರು ಹೊರಟು ಹೋಗು ಇಲ್ಲಿರಬೇಡ ಎಂದು ಹೇಳಿದಾಗ ಗುರುವಿನ ಮನಸ್ಸಿನಲ್ಲಿ ನೋವಿತ್ತು! ಆದರೆ ಆ ಮಾತು ತಿಕ್ಕಯ್ಯನವರ ಒಳಿತಿಗಾಗಿತ್ತು. ತಿಕ್ಕಯ್ಯನಿಗೆ ನೋವಾಯಿತು! ಆದರೆ ಗುರುವಿನ ಈ ಮಾತು ಅರ್ಥವಾಗದೆ ಹೋಯಿತು. ಆದರೂ ಈ ಮಾತು ಇವರ ಮನಸ್ಸಿನಿಂದ ಹೇಳುತ್ತಿಲ್ಲ ನನ್ನ ಗುರು ನನಗೇನೆಂಬುದು ಗೊತ್ತು! ಇದರ ಹಿಂದೆ ಏನೋ ಕಾರಣವಿರಬಹುದೆಂಬುದು ತಿಳಿದಿತ್ತು.

ಈ ಪದಗಳು ಸರಳವಾಗಿ ಜನಸಾಮಾನ್ಯರಿಗೆ ಅರ್ಥವಾಗುವ ರೀತಿಯಲ್ಲಿ ಪದಗಳನ್ನು ರಚಿಸುವ ಇವರು ಅನುಭಾವಿ ತತ್ವಪದಕಾರರೆಂದು ಕರೆಯಿಸಿಕೊಳ್ಳುತ್ತಾರೆ. ತಿಕ್ಕಯ್ಯನವರು ತಮ್ಮ ಆಧ್ಯಾತ್ಮದ ಮೂಲಕ ಮುಕ್ತಿಯ ಮಾರ್ಗವನ್ನು ಕಂಡುಕೊಂಡು ಗುರುವನ್ನು ಪಡೆದುಕೊಂಡು ಅನುಭಾವಿಗಳಾಗಿ ಅನೇಕ ತತ್ವ ಪದಗಳನ್ನು ರಚಿಸಿದವರಾಗಿದ್ದಾರೆ.

**ಮೈಲಾರ ಬಸಲಿಂಗ ಶರಣರು:**

ಕಾಲ : ೧೯ನೆಯ ಶತಮಾನದ ಪೂರ್ವಾರ್ಧ

ಊರು : ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ತಾಲ್ಲೂಕಿನ ಮೈಲಾರ

ಅಂಕಿತ : ಚನ್ನವೀರೇಶ

ತಂದೆ ತಾಯಿ : ಮಾಹಿತಿಯಿಲ್ಲ

ಗುರು : ಲಿಂಗನಾಯಕನ ಹಳ್ಳಿಯ ಹಾಲವರ್ತಿ ಚನ್ನವೀರಸ್ವಾಮಿಗಳು

ಕೃತಿಗಳು: ಗುರುತರುಣ ತ್ರಿವಿಧಿ, ಷಟಸ್ಥಲ, ನಿರಾಭಾರ ವೀರಶೈವ ಸಿದ್ಧಾಂತ, ಷಡ್‌ಸ್ಥಲ, ಜ್ಞಾನಾನುಭಾವ, ಲಿಂಗಪೂಜಾ ವಿಧಾನ, ಶಿವಾನುಭವದರ್ಪಣ, ಭಕ್ತಿಭಿನ್ನಹ ದಂಡಕ ಮತ್ತು ಇತರ ಕೃತಿಗಳು.

ಬಸಲಿಂಗ ಶರಣರು ತತ್ವಪದಗಳನ್ನು ರಚಿಸಿದ್ದಾರೆ. ಇವರು ರಚಿಸಿರುವ ಪದಗಳನ್ನು ಭಜನೆ ಪದಗಳನ್ನಾಗಿ ಎಲ್ಲ ಮಠ ಮತ್ತು ದೇಗುಲಗಳಲ್ಲಿ ಹಾಡುತ್ತಿದ್ದಾರೆ.

ಬಳ್ಳಾರಿ ಜಿಲ್ಲೆಯ ತುಂಗಭದ್ರಾ ನದಿ ಪ್ರಾಂತ್ಯದ ಹೂವಿನಹಡಗಲಿ ತಾಲೂಕಿನ ಮೈಲಾರ ಗ್ರಾಮದಲ್ಲಿರುವ ತತ್ವಪದಕಾರ ಬಸವಲಿಂಗ ಶರಣರು. ಇವರನ್ನು ಬರೀ ಬಸವಲಿಂಗ ಶರಣರೆನ್ನುವುದಿಲ್ಲ, ಊರಿನ ಹೆಸರಿನೊಂದಿಗೆ ಕರೆಯುತ್ತಾರೆ. ಮೈಲಾರ ಬಸವಲಿಂಗ ಶರಣರೆಂದೇ ಪ್ರಸಿದ್ಧಿಯಾಗಿದ್ದಾರೆ.

ಬಸವಲಿಂಗ ಶರಣರು ಹುಟ್ಟಿ ಬೆಳೆದ ಊರು ಮೈಲಾರ; ಇವರು ಅಂಗಡಿ ವ್ಯಾಪಾರಿಗಳಾಗಿದ್ದರು. ಮೈಲಾರಲಿಂಗನ ಗುಡಿಗೆ ಹೋಗುವ ದಾರಿಯಲ್ಲಿ ಬಸವಲಿಂಗ ಶರಣ ಅಂಗಡಿ ಅಲ್ಲಿಯೇ ಕುಳಿತು ಮೈಲಾರಲಿಂಗನ ಗುಡಿಗೆ ಹೋಗುವ ಬರುವ ಭಕ್ತರನ್ನು ನೋಡುತ್ತಿದ್ದರು. ಒಮ್ಮೆ ಮೈಲಾರಲಿಂಗನ ಜಾತ್ರೆಗೆ ಭಕ್ತಜನರು ಹಿಂಡುಹಿಂಡಾಗಿ ಹೋಗುತ್ತಿದ್ದರು ಅದನ್ನು ನೋಡಿ ಭಾವೋದ್ರೇಕಗೊಂಡು ಹಾಡುತ್ತಿದ್ದರು. ಅಂಗಡಿಯಲ್ಲಿ ಕುಳಿತಲ್ಲಿಯೇ ಹಾಡನ್ನು ಹಾಡುತ್ತಿದ್ದರು. ತೇರನ್ನು ನೋಡುತ್ತಿದ್ದ ಭಕ್ತರಿಗೆ ಮೈಲಾರಲಿಂಗನ ತೇರಿನ ವರ್ಣನೆಯನ್ನು ತನ್ನ ಪದಗಳಲ್ಲಿ ಹಾಡಿಹೇಳುತ್ತಿದ್ದನು.

ಅಂಗಡಿಯಲ್ಲಿ ವ್ಯಾಪಾರ ಮಾಡಿಕೊಂಡು ಜೀವನ ನಡೆಸುತ್ತಿದ್ದ ಬಸವಲಿಂಗ ಶರಣರಿಗೆ ಶಿವಾನುಭವ ಮೂಡಿರುವುದು ಅವರ ಅಂತರಾತ್ಮದ ಆಶಯವಾಗಿತ್ತೆಂದೇ ಹೇಳಬಹುದು. ಈ ಶಿವಾನುಭವದ ಸಂಬಂಧ ಅವರಲ್ಲಿ ಬಂದಿರುವುದಕ್ಕೆ ಮೂಲ ಪ್ರೇರಣೆ ಗುರುವಾದ ಚನ್ನವೀರ ಬಸವಲಿಂಗರು ತನ್ನ ಅನುಭವವನ್ನು ಪದವಾಗಿ ಹೆಣೆದು ಹಾಡಿನ ಮೂಲಕ ತಿಳಿಸುತ್ತ ತನ್ನ ಗುರು ಚನ್ನವೀರನನ್ನು ಅಂಕಿತವನ್ನಾಗಿ ಮಾಡಿಕೊಂಡು ಗುರು ಚನ್ನವೀರನ ಚರಿತೆಯನ್ನು ಎದೆತುಂಬಿ ಹಾಡಿದ್ದಲ್ಲದೆ, "೩೩೩ ತ್ರಿಪದಿಗಳ ಗುರುಕರುಣ ತ್ರಿವಿಧಿಯನ್ನೇ ರಚಿಸಿದ್ದಾರೆ."[೨೫]

ಚನ್ನವೀರ ಇವರು ಲಿಂಗನಾಯಕನಹಳ್ಳಿಯಲ್ಲಿ ಗುರುಕುಲ ಪ್ರಾರಂಭಿಸಿದರು. ಆ ಗುರುಕುಲದ ಸುತ್ತಮುತ್ತೆಲ್ಲ ವನವನ್ನು ಬೆಳೆಸಿದರು. ಈ ಸುತ್ತಲಿನ ಚಿಕ್ಕ ಗಿಡಗಳು ಬೆಳೆದವು. ಬಸವಲಿಂಗನೆನ್ನುವ ವನ ಬೆಳೆದು ಬಲು ಸೊಬಗಿನಿಂದ ಗೋಚರಿಸುತ್ತಿತ್ತು. ಇದನ್ನೇ ಗುರುಕುಲವೆನ್ನುವುದು; ಗುರುಕುಲದ ವಾತಾವರಣವೇ ಹಾಗೇ ಎನ್ನಬೇಕು. ಅಲ್ಲಿ ಕಲಿಯುವ ಮತ್ತು ಕಲಿಸುವ ವಾತಾವರಣ ತುಂಬಿರುತ್ತದೆ. ನಕರಾತ್ಮಕದ ದೃಷ್ಟಿ ಇಲ್ಲದೆ ಎಲ್ಲವೂ ಸಕರಾತ್ಮಕವಾಗಿ ಬೆಳೆಯುತ್ತದೆ. ಈ ಗುರುಕುಲವೆಲ್ಲ ಆಧ್ಯಾತ್ಮ ಆವರಿಸಿಕೊಂಡಿರುತ್ತದೆ.·· ಇಲ್ಲಿರುವ ಪ್ರತಿಯೊಂದು ಪ್ರಾಣಿ - ಪಕ್ಷಿಗಳು ಕೂಡ ಓಂಕರಿಸುತ್ತಿರುತ್ತವೆ. ಅಂಥ ವಾತಾವರಣವಿರುವ ಈ ಗುರುಕುಲದಲ್ಲಿ ಬಸವಲಿಂಗ ಶರಣರು ಆಧ್ಯಾತ್ಮವನ್ನು ಪಡೆದು ಅನುಭಾವಿಯಾದರು. ತನ್ನ ಅನುಭವದ ಹಾದಿಯಲ್ಲಿ ಕಂಡ ಏಳು ಬೀಳುಗಳನ್ನು ಜೋಡಿಸಿ ಅದಕ್ಕೆ ಪದಗಳ ಸರಮಾಲೆಯನ್ನು ಪೋಣಿಸಿ ಅದರ ಸ್ವರೂಪವನ್ನು ಹಾಡಿಗೆ ತಂದು ತನ್ನದೇ ನೆಲೆಯಲ್ಲಿ ರಾಗವನ್ನು ಕಂಡುಕೊಂಡು ತತ್ವಪದಗಳನ್ನು ಹಾಡುತ್ತಿದ್ದರು. ಇದೆಲ್ಲವನ್ನು ಮಾಡಿದ ಬಸವಲಿಂಗರವರು ತಮ್ಮ ತಂದೆ ತಾಯಿಗಳ ವಿಚಾರವನ್ನು ವಿವರವನ್ನಾಗಲಿ ಎಲ್ಲೂ ತಿಳಿಸಿಲ್ಲ.

ಮೈಲಾರಲಿಂಗನ ದೇವಾಲಯಕ್ಕೆ ಹೋಗುವ ದಾರಿಯಲ್ಲಿ ಎಡಭಾಗದಲ್ಲಿ ಬಸವಲಿಂಗಪ್ಪನವರ ಅಂಗಡಿಯಿದ್ದು ವ್ಯಾಪಾರ ವಹಿವಾಟನ್ನು ಮಾಡುತ್ತ ಮನದ ತುಂಬ ಭಗವಂತನ ನೆನೆಯುತ್ತ ದಿನಗಳೆಯುತ್ತಿದ್ದರು. ಚಿಕ್ಕದಾದ ಮನೆಯಲ್ಲಿಯೇ ಮನೆ ಮತ್ತು ಅಂಗಡಿಯನ್ನು ಮಾಡಿಕೊಂಡು ಅದರಲ್ಲಿಯೇ ಒಂದು ಚಿಕ್ಕ ಕೋಣೆಯನ್ನು ತನ್ನ ಲಿಂಗಪೂಜೆಗಾಗಿ ಮೀಸಲಾಗಿಟ್ಟಿದ್ದರು.

ಬಡವರ ಮನೆ ನೋಡಿ ಹೋಗುವುದಕ್ಕಿಂತ ಅವರ ಮನ ನೋಡಬೇಕೆನ್ನುವ ಗಾದೆ ಮಾತಿಗೆ ಬಸವಲಿಂಗಪ್ಪನವರು ಒಂದು ಅರ್ಥವನ್ನು ತಂದು ಕೊಟ್ಟಿರುವುದು ಇಲ್ಲಿ ಕಾಣಸಿಗುತ್ತದೆ.

"ಗುರುಗಳಲ್ಲಿ ಇಷ್ಟು ಅನನ್ಯ ಭಕ್ತಿಯಿದ್ದರೂ ಸ್ವತಂತ್ರಶೀಲ ಶರಣರಾದ ಬಸವಲಿಂಗರು ಒಮ್ಮೆಯೂ ಗುರುಗಳ ಅಭಿಪ್ರಾಯವೊಂದರ ಬಗ್ಗೆ ತಮ್ಮ ಮತಭೇದವನ್ನು ವ್ಯಕ್ತಪಡಿಸಿರಲಿಲ್ಲ. ಸಹಪಾಠಿಗಳಾಗಿದ್ದ ಮುಳಗುಂದ ಬಾಲಲೀಲಾ ಮಹಾಂತ ಶಿವಯೋಗಿಗಳ 'ಹರ ಮುನಿದರೆ ಗುರು ಕಾಯ್ವನು, ಗುರು ಮುನಿದರೆ ಹರ ಕಾಯನು ಎಂಬುದನ್ನು ಮನವರಿಕೆ ಮಾಡಿಕೊಡಲು ಪಶ್ಚಾತ್ತಾಪ ಹುಟ್ಟಿ ಗುರುಕರುಣ ತ್ರಿವಿಧಿಯನ್ನು ರಚಿಸಿ ಹಾಡಿ, ಮತ್ತೆ ಗುರುಕಾರುಣ್ಯವನ್ನು ಪಡೆದರು."[೨೬]

ಬಸವಲಿಂಗ ಅವರಲ್ಲಿರುವ ಛಲ, ಅಂತರಂಗದ ಬಯಕೆ ಭಗವಂತನ ಪೂಜಿಸುವ ಬಯಕೆ ಇವೆಲ್ಲವೂ ಯಾರ ಒತ್ತಾಯಕ್ಕೆ ಅಲ್ಲ, ಯಾರೋ ಮಾಡುವುದನ್ನು ನೋಡಿ ತಾನು ಅದನ್ನು ಮಾಡಬೇಕೆಂಬ ಡಾಂಭಿಕತೆಯೂ ಅಲ್ಲ. ಇದು ಒಂದು ಪರಮಾತ್ಮನ ಅನುಗ್ರಹವೆಂದು ಹೇಳುವುದೇ ಸೂಕ್ತವಾದುದಾಗಿದೆ. ಬಸವಲಿಂಗರು ಜೀವನಪೂರ್ತಿ, ಕಾಯಕ ಯೋಗಿಗಳಾಗಿಯೇ ಬಾಳಿ ಬದುಕಿದ್ದಾರೆ.

ಬಸವಲಿಂಗ ಅವರಲ್ಲಿರುವ ಒಂದು ಮುಖ್ಯವಾದ ಸಂಗತಿಯೆಂದರೆ ಇವರು ನಿಷ್ಠುರವಾದಿ. ಅರಿವಿಲ್ಲದೆ ಅಜ್ಞಾನದಲ್ಲಿದ್ದು ಆಡಂಬರಕ್ಕಾಗಿ ಗುರುವೆನಿಸಿಕೊಂಡು ಶಿಷ್ಯರನ್ನು ಪಡೆದು ತಾನೊಬ್ಬ ದೊಡ್ಡ ಗುರುವೆಂದು ಅಹಂಕಾರವನ್ನು ತೋರಿಸಿಕೊಂಡು ಓಡಾಡುವ ಗುರುವನ್ನು ಕರೆದು ಎದುರಿನಲ್ಲಿಯೇ ಬಯ್ಯುತ್ತಿದ್ದರು. ಜ್ಞಾನ ಬುತ್ತಿಯನ್ನು ಮೈಮನದಲ್ಲಿ ಹೊತ್ತು ತಿರುಗುವವನೇ ಗುರುವೆನಿಸಿಕೊಳ್ಳುತ್ತಾನೆ. ಅದೇ ಇಲ್ಲದವ ಶಿಷ್ಯಂದಿರಿಗೆ ಏನು ಬೋಧಿಸಲು, ಕಲಿಸಲು ಸಾಧ್ಯವೆನ್ನುವುದು ಬಸವಲಿಂಗ ಅವರ ವಾದ. ಕೆಲವರು ತಾವು ಗುರುವಲ್ಲದಿದ್ದರೂ ಗುರುವೆಂದು ಜನಸಾಮಾನ್ಯರನ್ನು ನಂಬಿಸಿ ಧ್ವಜವನ್ನು ಹಿಡಿದುಕೊಂಡು ಅಹಂ ಮೈದುಂಬಿಸಿಕೊಂಡು ಓಡಾಡುತ್ತಿರುತ್ತಾರೆ. ಅಂಥವರನ್ನು ಕಂಡು ಬಸವಲಿಂಗರು ನಿರಾಕರಿಸುತ್ತಾರೆ. ಇಲ್ಲಿ ಧ್ವಜವೆಂಬುದು ಗುರುವನ್ನು ಗುರುತಿಸುವ ಒಂದು ಸಂಕೇತ, ಆ ಸಂಕೇತವನ್ನು ಕಿತ್ತುಕೊಂಡು ಅಲ್ಪಜ್ಞಾನಿಯಾಗಿ ಬಾಳುವುದಕ್ಕೆ ಜ್ಞಾನಿಯೆಂದು ಶಿಷ್ಯಂದಿರನ್ನು ಮೋಸಗೊಳಿಸುವುದಕ್ಕಿಂತ ನೀನು ನಿಜವಾದ ಒಬ್ಬ ಮನುಜನಾಗು, ನಿನ್ನಲ್ಲಿರುವ ಅಹಂಕಾರ, ನಾನು ಎನ್ನುವ ದುರಹಂಕಾರವೆಲ್ಲವನ್ನು ಬಿಡು; ಆಗ ನೀನು ನಿಜವಾದ ಗುರುವಿನ ಸ್ಥಾನಕ್ಕೆ ಗೌರವ ತಂದು ಕೊಟ್ಟಂತಾಗುವುದೆಂದು, ಗುರು ಚನ್ನವೀರರಲ್ಲಿ ಹೋಗಿ ಗುರುವಿನ ಮೌಲ್ಯವನ್ನು ಅರಿತು ಗುರುವಾಗುವ ಅರ್ಹತೆಗಳನ್ನು ಕಲಿತು ಬಾ ಎಂದು ಹೇಳುತ್ತಿದ್ದರು. ಇದನ್ನರಿತ ಡಾಂಭಿಕತೆಯಿಂದ ಗುರುವೆಂದು ಓಡಾಡಿಕೊಂಡಿರುವವರು ಇವರ ಮಾತನ್ನು ಆಲಿಸಿ ಚನ್ನವೀರರವರಲ್ಲಿಗೆ ಹೋಗಿ ಗುರುಸೇವೆಯನ್ನು ಮಾಡಿ ಗುರುಸೇವೆಯಲ್ಲಿ ತಮ್ಮನ್ನು ತಾವರಿತು ತಮ್ಮ ಜ್ಞಾನದಿಂದ ಪಡೆದುದನ್ನು ಬಸವಲಿಂಗರಲ್ಲಿ

ಹಂಚಿಕೊಂಡು ಅವರಿಂದ ತಾವೀಗ ಸಂಪೂರ್ಣ ಗುರುವೆನಿಸಿಕೊಂಡಾದ ಮೇಲೆ ಗುರುವಿನ ಸಂಕೇತವಾದ ಲಾಂಛನವನ್ನು ಹಿಡಿದುಕೊಂಡು ಮುನ್ನಡೆಯುತ್ತಿದ್ದರು.

ಬಸವಲಿಂಗ ಅವರು ಬಡತನವನ್ನು ಕಂಡವರಾಗಿರುವುದರಿಂದ ತನ್ನ ಅಂಗಡಿಗೆ ಬರುವ ಹೋಗುವ ಜನರೊಂದಿಗೆ ಪಾರಮಾರ್ಥಿಕವಾದ ಅನುಭಾವದ ಮಾತುಗಳನ್ನು ನೊಂದ ಜೀವಿಗಳಿಗೆ ಧರ್ಮದ ನೆಲೆಯೇನೆಂಬುದು ಅರ್ಥೈಸಿ ಅವರಲ್ಲಿ ಧೈರ್ಯವನ್ನು ತುಂಬುತ್ತಿದ್ದರು. ನೊಂದು ಬೆಂದವರ ಶಕ್ತಿಯಾಗಿ ನಿಂತರು. ದಿನಕಳೆದಂತೆ ಬಸವಲಿಂಗರು ಮೆಚ್ಚುವ, ಅವರ ಸನಿಹ ಬಂದು ಮಾತನಾಡುವ ವ್ಯಕ್ತಿಗಳ ಸಂಖ್ಯೆ ಅಧಿಕವಾಗಿ ಬೆಳೆಯತೊಡಗಿತು. ಬಸವಲಿಂಗರು ದಿನಕಳೆದಂತೆ ಪ್ರಸಿದ್ಧಿಯಾಗತೊಡಗಿದರು. ಇದನ್ನು ಸಹಿಸಲಾಗದ ಕೆಲವರು ವಿಷ್ಣುವಿನ ಭಕ್ತರೆನಿಸಿಕೊಂಡ ಅಧಿಕಾರಿಗಳಿಗೆ ಬಸವಲಿಂಗರು ವಿಷ್ಣು ನಿಂದಕರೆಂದು ಇವರ ಬಗ್ಗೆ ಅಪಪ್ರಚಾರ ಮಾಡಿದರು. ಅಧಿಕಾರಿಗಳು ಬಸವಲಿಂಗ ಅವರನ್ನು ಕರೆದು ಕೋಪದಿಂದ ಬೈಯ್ದರು. ನಾನೊಬ್ಬ ನಿರಪರಾಧಿ! ನಾನೇಕೆ ತಾರತಮ್ಯ ಮಾಡಲಿ, ಭಗವಂತನೊಬ್ಬನೆ ಎಲ್ಲ ಸೃಷ್ಟಿಗೆ ಒಡೆಯ. ಅವನು ನಮಗೆ ಕೊಟ್ಟಿರುವ ಮಾನವ ಜನ್ಮವನ್ನು ದುರಹಂಕಾರದಿಂದ ಹಾಳು ಮಾಡಿಕೊಳ್ಳದೆ ಆ ಭಗವಂತ ಸೇವೆಗಾಗಿ ಉಪಯೋಗಿಸೋಣವೆಂಬ ಆಲೋಚನೆ ನನ್ನದು. ನನ್ನ ಮನದಲ್ಲಿ ಪರಮಾತ್ಮನ ಪ್ರೀತಿ ಬಿಟ್ಟರೆ ಜಾತಿ - ಕುಲಗಳ ತಾರತಮ್ಯವೆಂಬ ಪದಕ್ಕೆ ಜಾಗವಿಲ್ಲವೆಂಬ ಪಾರಮಾರ್ಥಿಕ ಪದಗಳನ್ನಾಡಿದರು. ಇದಕ್ಕೂ ಒಪ್ಪದ ಅವರು ನೀನು ವಿಷ್ಣು ನಿಂದಕನಲ್ಲದಿದ್ದರೆ ವಿಷ್ಣು ಸ್ತುತಿಯನ್ನು ಬರೆದುಕೊಡಬೇಕೆಂದರು.

ಬಸವಲಿಂಗರು ಹಿಂದುಗಳ ದೇವತೆ ಕಾಮಧೇನು ಎಂದು ಪೂಜಿಸುವ ಪವಿತ್ರ ಗೋಮಾತೆಯನ್ನು ಕುರಿತಾದ ಸ್ತುತಿಯನ್ನು ರಚಿಸಿ ವಿಷ್ಣುಭಕ್ತರನ್ನು ಸಮಾಧಾನ ಪಡುವಂತೆ ಮಾಡಿದರು. ಬಸವಲಿಂಗರಿಗೆ ತನ್ನ ಗುರುವಿನ ಬಗ್ಗೆಯೂ ಅಪಾರವಾದ ಭಕ್ತಿಯಿತ್ತು; ಸದಾ ಗುರು ಚನ್ನವೀರರನ್ನು ನೆನೆಯುತ್ತಿದ್ದರು. ಗುರುವನ್ನು ಕುರಿತಾಗಿ ಪದವನ್ನು ರಚಿಸಿದ್ದಾರೆ. ತುಂಗಭದ್ರಾ ನದಿ ತೀರದ ಲಿಂಗನಾಯಕನಹಳ್ಳಿಯಲ್ಲಿ ಹೇಗೆ ನೆಲೆಸಿದನೆಂಬುದನ್ನು ತನ್ನ ಪದದಲ್ಲಿ ಬಿಡಿಸಿದ್ದಾರೆ.

ಬಡತನದ ಬಗೆಗಿನ ಅರಿವಿನ ಜೀವನವನ್ನುಂಡು ತನ್ನಂತೆ ಇರುವ ಇತರೆ ನೊಂದ, ಬೆಂದ ಬಡಜೀವಿ ಕಷ್ಟಗಳಿಗೆ ಸ್ಪಂದಿಸಿ ಬಡತನದಲ್ಲೂ ಸಿರಿತನವನ್ನು ಕಾಣುವ ಬಗೆಯನ್ನು ತಿಳಿಸಿ ಎದೆಗುಂದದ ವ್ಯಕ್ತಿ ಹೇಗೆ ಬದುಕಿ ಬಾಳಬಲ್ಲ, ಬಾಳುವುದನ್ನು ಹೇಗೆ ತೋರಿಸಬಲ್ಲ, ತನ್ನಂತಿರುವ ಇತರರಿಗೆ ಹೇಗೆ ಸ್ಫೂರ್ತಿಯಾಗಬಲ್ಲನೆಂಬುದನ್ನು ಬಸವಲಿಂಗ ಅವರು ತೋರಿಸಿಕೊಟ್ಟಿದ್ದಾರೆ. ಜೀವನ ಸಂಸಾರವೆಂಬುದು ಭಗವಂತನ ಸೃಷ್ಟಿ; ಅದಕ್ಕೆ ಅಂಜದೆ ಧೈರ್ಯಗೆಡದೆ ಎದುರಿಸಿ ಬಾಳುವವನೇ ಮನುಜ; ಅದಕ್ಕೆ ಅನುಗ್ರಹ ನೀಡುವವನೇ ಪರಮಾತ್ಮ.

ತತ್ವಪದಕಾರರು ಸಂಸಾರದ ಅನುಭವವನ್ನುಂಡವರಾಗಿರುತ್ತಾರೆ. ಕುಟುಂಬದ ಆಗು-ಹೋಗುಗಳನ್ನು ಅನುಭವಿಸಿದವರಾಗಿರುತ್ತಾರೆ. ಸಮಾಜದಲ್ಲಿ ಜನರ ಜೊತೆ ಬೆರೆತವರಾಗಿರುತ್ತಾರೆ.

ಜನರ ಒಡನಾಟವನ್ನು ಬಲ್ಲವರಾಗಿರುತ್ತಾರೆ. ಜೀವನದಲ್ಲಿ ಬರುವ ಕಷ್ಟಗಳಿಗೆ ಧೈರ್ಯವಾಗಿನಿಂತು ಎದುರಿಸಿ ಬದುಕಿ ಬಾಳುವ ಶಕ್ತಿ ಹೆಚ್ಚಿರುತ್ತದೆ. ಹಾಗೆಯೇ ಬಸವಲಿಂಗ ಅವರು ಅಷ್ಟು, ಚಿಕ್ಕ ಮನೆಯಲ್ಲಿದ್ದು ದೊಡ್ಡ ಸಾಧನೆಯನ್ನು ಗೈದು ಭಗವಂತನ ನಾಮಸ್ಮರಣೆಯಲ್ಲಿ ಆಧ್ಯಾತ್ಮದಲ್ಲಿ ಲೀನನಾಗಿ ಸಾಧನೆಗೈದು ಮಹಾನ್ ವ್ಯಕ್ತಿಯೆನಿಸಿಕೊಂಡವರು. ಶಿವನನ್ನೇ ನೆನೆಯುತ್ತಾ ಗುರುವನ್ನು ಸ್ಮರಿಸುತ್ತಾ ಶಿವನು, ಸೃಷ್ಟಿಸಿದ ಜಗತ್ತಿನಲ್ಲಿ ಬಾಳಿ ಬದುಕುತ್ತ ಶಿವನ ಸಾಮೀಪ್ಯವನ್ನು ಬಯಸಿ ತನ್ನ ಬದುಕನ್ನು ಭಗವಂತನಿಗೆ ಅರ್ಪಿಸಿದವರು. ತತ್ವಪದಗಳನ್ನು ಬರೆಯುತ್ತ ಜ್ಯೋತಿಯಾಗಿ ಬೆಳಗುತ್ತ ಹೆಸರಾಗಿದ್ದ ಮೈಲಾರ ಬಸವಲಿಂಗರು ಎಲ್ಲರ ಮನೆಮನಗಳಲ್ಲಿ ಜ್ಯೋತಿಯಾಗಿ ಉಳಿದರು.

ಈ ತತ್ವಪದಕಾರರೆಂಬ ಅನುಭಾವಿಗಳಿಗೆ ಬದುಕಿನ ಬಗ್ಗೆ ಬಯಕೆಗಳಿರುವುದಿಲ್ಲ ಸಾವಿನ ಬಗ್ಗೆ ಚಿಂತೆಯಿರುವುದಿಲ್ಲ. ಹುಟ್ಟು ಸಾವಿನ ಮಧ್ಯದ ಸಾಧನೆಯ ಜೀವನವೇ ಫಲ. ಅದು ನಿಸ್ವಾರ್ಥದ ಫಲ, ಆ ಫಲ ಭಗವಂತ ತಾನೇ ಸ್ವತಃ ಸಾಧಕನನ್ನು ಮೆಚ್ಚಿ ಕೊಡುವ ಫಲ. ಈ ಫಲದಲ್ಲಿ ಪರಮಾತ್ಮನ ಪ್ರೀತಿ ಅಪಾರವಾಗಿರುತ್ತದೆ. ಆತನ ಸಾಮೀಪ್ಯದಲ್ಲಿ ನಮ್ಮ ದೇಹದೊಳಗಿನ ಆತ್ಮಕ್ಕೆ ಪ್ರವೇಶವಿರುತ್ತದೆ. ದೇಹಕ್ಕೆ ಮುಕ್ತಿಯಿದೆ. ಆತ್ಮಕ್ಕೆ ಭಗವಂತನ ಅನುಗ್ರಹವಿದೆ. ಆತ್ಮವನ್ನು ಪರಿಶುದ್ಧವಾಗಿಟ್ಟುಕೊಂಡು ಅಹಂಕಾರವನ್ನು ತೊಲಗಿಸಿ ಸದಾ ಪರಮಾತ್ಮನನ್ನು ಧ್ಯಾನಿಸಿದರೆ ಆಧ್ಯಾತ್ಮದಲ್ಲಿ ನಿರತನಾಗಿ ನಡೆದು ಪರಮಾತ್ಮನ ಅನುಗ್ರಹ ದೊರೆತು ಅನುಭಾವಿ ಯಾಗುತ್ತಾನೆ. ಇದನ್ನು ತತ್ವಪದಕಾರ ತನ್ನ ತತ್ವಪದಗಳಲ್ಲಿ ತಿಳಿಸುತ್ತಾನೆ.

**ಶಿಲವೇರಿ ಶಿವಪ್ಪ (ಶಿವಮೂರ್ತಿ)**

ಕಾಲ : ಕ್ರಿ.ಶ.೧೯೦೫

ಅಂಕಿತ : ಅಲ್ಲಿ ಸಾಹೇಬ

ಊರು : ಬಳ್ಳಾರಿ

ಇವರು ತತ್ವಪದಕಾರರು ಅನೇಕ ತತ್ವಪದಗಳನ್ನು ರಚಿಸಿದ್ದಾರೆ. ಅವುಗಳನ್ನು ಇಂದಿಗೂ ಪ್ರಸ್ತುತವಾಗಿ ಭಜನೆ ಪದಗಳಾಗಿ ಹಾಡುತ್ತಿದ್ದಾರೆ.

ಬಳ್ಳಾರಿ ಜಿಲ್ಲೆಯ ತುಂಗಭದ್ರಾ ನದಿ ಪ್ರಾಂತ್ಯದಲ್ಲಿರುವ ಬಳ್ಳಾರಿಯಲ್ಲಿರುವ ತತ್ವಪದಕಾರ ಶಿಲವೇರಿ ಶಿವಪ್ಪ (ಶಿವಮೂರ್ತಿ) ಇವರು ಮೂಲತಃ ಬಳ್ಳಾರಿಯವರಾಗಿದ್ದು ಬಳ್ಳಾರಿಯಲ್ಲಿಯೇ ತಮ್ಮ ಕೆಲಸಕಾರ್ಯಗಳನ್ನು ಕೈಗೊಂಡು ಕ್ರಿ.ಶ. ಹತ್ತೊಂಬತ್ತೂರ ಐದರಲ್ಲಿ ಬಾಳಿ ಬದುಕಿದವರು. ಇವರ ಅಂಕಿತ ಅಲ್ಲಿ ಸಾಹೇಬ! ಶಿಲವೇರಿ ಶಿವಪ್ಪನವರ ಜೀವನ ಚರಿತ್ರೆಯ ವಿವರಗಳ ಲಭ್ಯವಿಲ್ಲದಿದ್ದರೂ ಇವರು ರಚಿಸಿರುವ ತತ್ವಪದಗಳು ಲಭ್ಯವಿದೆ.

ಬಳ್ಳಾರಿಯವರಾದ ಶಿಲವೇರಿ ಶಿವಪ್ಪನವರು ಬಾಳಿ ಬದುಕಿದ್ದು ಇಲ್ಲೇ ಆದರೂ ಇವರು ತಮ್ಮ ಬಗೆಗಿನ ಹೆಚ್ಚಿನ ವಿವರಣೆಯನ್ನು ತಿಳಿಸಿಲ್ಲ.

**ಮಲ್ಲಿಕಾರ್ಜುನ (ಎತ್ತಿನಹಟ್ಟಿ ಈಶ)**

ಕಾಲ : ೧೮ನೇ ಶತಮಾನ

ಅಂಕಿತ : ಎತ್ತಿನ ಹಟ್ಟಿ ವೀರ

ಕಾರ್ಯಸ್ಥಳ : ಬಳ್ಳಾರಿ ಜಿಲ್ಲೆ

ಇವರು ಅನೇಕ ತತ್ವಪದಗಳನ್ನು ರಚಿಸಿದ್ದಾರೆ. ಇವರು ರಚಿಸಿದ ತತ್ವಪದಗಳು ಮಠ ಮತ್ತು ದೇಗುಲಗಳಲ್ಲಿ ಭಜನೆಯ ಪದಗಳಾಗಿ ಹಾಡಲ್ಪಡುತ್ತಿವೆ.

ಬಳ್ಳಾರಿ ಜಿಲ್ಲೆಯ ತುಂಗಭದ್ರಾ ನದಿ ಪ್ರಾಂತ್ಯದಲ್ಲಿರುವ ಎತ್ತಿನಹಟ್ಟಿ ಎಂಬ ಗ್ರಾಮದಲ್ಲಿರುವ ತತ್ವಪದಕಾರ ಮಲ್ಲಿಕಾರ್ಜುನ. ಇವರು ಹುಟ್ಟಿದ ಊರು ಎತ್ತಿನಹಟ್ಟಿ ಹದಿನೆಂಟನೆಯ ಶತಮಾನದಲ್ಲಿ ಬಾಳಿ ಬದುಕಿದ ಇವರು ತತ್ವಪದಗಳ ರಚನೆಯನ್ನು ಮಾಡುತ್ತ ತಮ್ಮ ಕೆಲಸಕಾರ್ಯವನ್ನು ಗೈದ ಸ್ಥಳ ಬಳ್ಳಾರಿ ಜಿಲ್ಲೆ. ಇವರ ಅಂಕಿತ ಎತ್ತಿನ ಹಟ್ಟಿವೀರ.

ಇವರ ಜೀವನ ಚರಿತ್ರೆಯ ಮಾಹಿತಿ ಸಂಪೂರ್ಣ ಲಭ್ಯವಿಲ್ಲ. ಇವರ ತತ್ವಪದಗಳು ನಮಗೆ ಕಾಣಸಿಗುತ್ತವೆ.

**ಓರೆಬಾಯಿ ಲಕ್ಷ್ಮಿದೇವಮ್ಮ:**

ಕಾಲ : ಕ್ರಿ.ಶ. ೧೮೬೫

ಅಂಕಿತ : ನರಸಿಂಹ ವಿಠ

ಊರು : ಬಳ್ಳಾರಿ

ಇವರು ಅನೇಕ ತತ್ವಪದಗಳನ್ನು ರಚಿಸಿದ್ದಾರೆ. ಈ ತತ್ವಪದಗಳು ಮಠಗಳಲ್ಲಿ ಭಜನೆಯ ಹಾಡುಗಳಾಗಿ ಹಾಡಲ್ಪಡುತ್ತಿವೆ.

ತತ್ವಪದಕಾರರು ಹೇಗೆ ಆಚರಣೆಯಲ್ಲಿದ್ದಾರೆ? ಇವರನ್ನು ಯಾರು ಆರಾಧಿಸುತ್ತಾರೆ. ಇವರಲ್ಲಿ ಯಾರು ನಂಬಿಕೆಯಿಟ್ಟು ಪೂಜಿಸುತ್ತಾರೆ ಎನ್ನುವ ಪ್ರಶ್ನೆಗಳು ಗ್ರಹಿಕೆಯಲ್ಲಿ ಬರುವುದು ಸಹಜ. ತತ್ವಪದಕಾರರು ಕೂಡ ಶರಣರು ಮತ್ತು ಸೂಫಿಗಳಂತೆ ಆರಾಧ್ಯ ದೈವಸಂಭೂತರಾಗಿದ್ದಾರೆ. ಇವರನ್ನು ಕೂಡ ಜನರು ಆರಾಧಿಸಿ ಪೂಜಿಸುತ್ತಾರೆ. ಭಕ್ತ ಜನರು ಪೂಜಿಸಲು ಆರಾಧಿಸಲು ಇವರದೇ ಆದ ಮಠ ಇಲ್ಲವೇ ದೇವಸ್ಥಾನವಿರಬೇಕೆಂಬ ಪ್ರಶ್ನೆಯು ಉದ್ಭವವಾಗುತ್ತದೆ ನಿಜ. ಆದರೂ ತತ್ವಪದಕಾರರನ್ನು ಭಕ್ತ ಜನರು ಪೂಜಿಸುತ್ತಾರೆ, ಆರಾಧಿಸುತ್ತಾರೆ.

ತತ್ವಪದಕಾರರು ರಚಿಸಿರುವ ತತ್ವಪದಗಳನ್ನು ಎಲ್ಲ ಮಠ ಮತ್ತು ದೇವಸ್ಥಾನಗಳಲ್ಲಿ ಭಕ್ತರೆಲ್ಲರೂ ಸೇರಿ ಭಜನೆ ಹಾಡುಗಳ ರೂಪದಲ್ಲಿ ಹಾಡುತ್ತಾರೆ. ಈ ಹಾಡುಗಳಲ್ಲಿ ತತ್ವಪದಕಾರರ ಅನುಭವವಿದೆ. ಪಾರಮಾರ್ಥಿಕವಾಗಿರುವ ವಿಷಯಗಳನ್ನೊಳಗೊಂಡ ಈ ಪದಗಳು ಭಗವಂತನಿಗೆ,

ಶರಣರ, ಸಂತರ ಮಠಗಳಲ್ಲಿ ಹಾಡಲ್ಪಡುತ್ತಿರುವುದರಿಂದ ತತ್ವಪದಕಾರರು ಆಚರಣೆಯಲ್ಲಿದ್ದಾರೆ. ಭಕ್ತ ಜನರು ಭಜಿಸುವ ಪೂಜಿಸುವ ಆರಾಧ್ಯ ದೈವಗಳಾಗಿದ್ದಾರೆಂದೇ ಹೇಳಬಹುದಾಗಿದೆ.

"ತತ್ವಪದ ಗತದ ಕುತೂಹಲವಾದ ಒಂದು ಕಾವ್ಯ ಪ್ರಕಾರವಲ್ಲ. ಅದೊಂದು ಸಂಸ್ಕೃತಿ, ಆಚರಣೆ! ಯಾಕೆಂದರೆ ಅದಕ್ಕೆ ಒಂದು ಸಾಮೂಹಿಕ ಚಹರೆಯಿದೆ. ಸಂಗೀತ, ಹಾಡುಗಾರಿಕೆ, ತಾತ್ವಿಕತೆ ಧೂಪದೀಪಗಳು ಎಲ್ಲವೂ ಅದರಲ್ಲಿ ಕೂಡಿಕೊಳ್ಳುತ್ತವೆ. ಜೊತೆಗೆ ಅದಕ್ಕೊಂದು ಪವಿತ್ರ ಭೂಗೋಳವಿದೆ. ಅದು ನಡೆಯುವುದು ಸಂತರ ಸನ್ನಿಧಿಯಲ್ಲಿ, ಗದ್ದುಗೆಯಲ್ಲಿ, ದೇವಸ್ಥಾನದ ಹಜಾರದಲ್ಲಿ."೪೪

ಒಪ್ಪಿಕೊಳ್ಳಬಹುದಾದ ವಿಷಯ ತತ್ವಪದವೆಂಬುದು ಓದಿ ಬಿಡುವ ಹಾಡಿ ಮರೆಯುವ ಕಾವ್ಯವಲ್ಲ. ಅದಕ್ಕೆ ತನ್ನದೇ ಆದ ಸಂಸ್ಕೃತಿ ಆಚರಣೆಯಿದೆ. ಈ ಸಂಸ್ಕೃತಿ ಇರುವುದರಿಂದಲೇ ಈ ತತ್ವಪದಗಳನ್ನು ಮಠ, ದೇಗುಲಗಳಲ್ಲಿ ಭಜನೆಯನ್ನು ಮಾಡುತ್ತಾ ಹಾಡುತ್ತಿರುವುದು.

**೫.೩. ಸೂಫಿಗಳ ಜೀವನ ಚರಿತ್ರೆ**

**ಶಾ ಮುಸ್ತಫಾ ಖಾದ್ರಿ (ಬಡೇ ಸಾಹೇಬ್ ಖಾದ್ರಿ)**

ಬಳ್ಳಾರಿ ಜಿಲ್ಲೆಯ ತುಂಗಭದ್ರಾ ನದಿ ಪ್ರಾಂತ್ಯದಲ್ಲಿ ಬರುವ ಒಂದು ಗ್ರಾಮ ಕಂಪ್ಲಿ. ಕಂಪ್ಲಿ ಗ್ರಾಮದಲ್ಲಿ ಬಡೇ ಸಾಹೇಬ್ ಖಾದ್ರಿ ಎಂಬ ಸೂಫಿ ಸಂತನು ಬಂದು ನೆಲೆಸಿ ಅಲ್ಲಿನ ಜನರ ಆರಾಧ್ಯ ದೈವವಾಗಿದ್ದಾನೆ. ಬಡೇಸಾಹೇಬ್ ಖಾದ್ರಿಯವರಿಗಿರುವ ಮತ್ತೊಂದು ಹೆಸರು ಶಾ ಮುಸ್ತಫಾ ಖಾದ್ರಿ. ಇದು ಇವರ ಮೂಲ ಹೆಸರು; ಜನರು ಇವರಿಗೆ ಪೂಜಿಸುತ್ತ ಆರಾಧಿಸುತ್ತ ಬಂದಂತೆ ಇವರನ್ನು ಬಡೇಸಾಹೇಬ್ ಖಾದ್ರಿ ಎಂದು ಕರೆಯಲು ಪ್ರಾರಂಭಿಸಿದರು. ಬಡೇಸಾಹೇಬ್ ·· ಅಂದರೆ ದೊಡ್ಡ ದೇವರೆಂದು ಅರ್ಥ. ಆ ದೇವರು ಖಾದ್ರಿ ಹೆಸರಿನ ಇವರು ದೊಡ್ಡ ದೇವರು ಭಕ್ತರು ತಾವು ಪೂಜಿಸುತ್ತಿರುವ ಈ ಸೂಫಿ ದೊಡ್ಡದೇವರೆಂಬ ನಂಬಿಕೆಯಲ್ಲಿಯೇ ಇವರನ್ನು ಪೂಜಿಸುತ್ತಿದ್ದರು.

ಬಡೇಸಾಹೇಬ್ ಖಾದ್ರಿಯವರು ತಮ್ಮ ವಂಶಸ್ಥರಾದ ಹಜರತ್ ಮೆಹಬೂಬ್ ಸುಬಾನಿಯವರೊಂದಿಗೆ ಅರಬ್ ದೇಶದ ಬಗ್ದಾದ್‌ನಿಂದ ಕರ್ನಾಟಕದ ಬೀದರ್ ಜಿಲ್ಲೆಗೆ ಬಂದು ನೆಲೆನಿಂತರು. ಅಲ್ಲಿಂದ ಬಡೇಸಾಹೇಬ್ ಖಾದ್ರಿಯವರು ಗುಲಬರ್ಗಾ, ಬಿಜಾಪುರ, ಕನ್ನಾಲ್ ಮುಖಾಂತರವಾಗಿ ಕಂಪ್ಲಿಗೆ ಬಂದು ನೆಲೆಸಿದರು. ಧ್ಯಾನ, ಯೋಗ, ಆಧ್ಯಾತ್ಮಕ್ಕೆ ಈ ಪ್ರದೇಶವು ಪ್ರಶಾಂತವಾಗಿತ್ತಲ್ಲದೆ ಪಾರಮಾರ್ಥಿಕ ಪಥದಲ್ಲಿನ ಜೀವನವನ್ನು ಕಂಡುಕೊಳ್ಳಲು ಸೂಕ್ತವಾಗಿತ್ತು. ಬಡೇಸಾಹೇಬ್ ಖಾದ್ರಿಯವರು ಕಂಪ್ಲಿಯಲ್ಲಿ ನೆಲೆಸಿದ್ದನ್ನು ಕಂಡು ಕೆಲವರು ಈ ಸೂಫಿ ಸಂತನ ವೇಷವನ್ನು ನೋಡಿ ಎಲ್ಲಿಂದಲೋ ಬಂದು ಕುಳಿತಿರುವ ಒಬ್ಬ ಹುಚ್ಚನಂತೆ ಕಾಣುತ್ತಿರುವನೆಂದು ತಿಳಿದು ತಿಳಿಯದಂತೆ ತಮ್ಮದೇ ಆದ ನೆಲೆಯಲ್ಲಿ

ಯೋಚಿಸುತ್ತಿದ್ದರು. ದಿನ ಕಳೆದಂತೆಲ್ಲ ಜನರು ಒಬ್ಬೊಬ್ಬರಾಗಿ ಬಂದು ಇವರನ್ನು ಮಾತನಾಡಿಸತೊಡಗಿದಾಗ ಈ ಸೂಫಿ ಸಂತನು ಆಡುವ ಹಿತನುಡಿಗಳನ್ನು ಕೇಳಿ ದಿಟ್ಟಿಸಿ ನೋಡುತ್ತಾರೆ. ಆಗ ಸೂಫಿಯ ಕಣ್ಣುಗಳಲ್ಲಿ ಹೊಳೆಯುವ ಹೊಳಪು ಅವನ ಆ ತೇಜಸ್ಸು ಜನಸಾಮಾನ್ಯನಿಗಿಂತ ಭಿನ್ನವಾಗಿತ್ತು. ಇದನ್ನು ಗಮನಿಸಿ ಇವನೊಬ್ಬ ದೈವಪುರುಷನಂತೆ ಕಾಣುತ್ತಿದ್ದಾನೆಂದು ತಮ್ಮ ಮನದಲ್ಲಿ ಅಂದುಕೊಂಡು ಆ ಸೂಫಿ ಸಂತನಿಗೆ ಕೈ ಮುಗಿಯುತ್ತಾರೆ. ಸೂಫಿ ಸಂತನು ಇವರನ್ನು ನೋಡಿ ಮುಗುಳ್ನಗುತ್ತಾನೆ. ಸೂಫಿಯ ಆ ಮುಗುಳ್ನಗೆಯಲ್ಲಿ ಕರುಣೆಯಿತ್ತು. ಈ ವ್ಯಕ್ತಿಯ ಬಗ್ಗೆ ಕ್ಷಮೆಯಿತ್ತು - ಪ್ರೀತಿಯಿತ್ತು. ಈ ಸೂಫಿಯು ತನ್ನ ಮುಂದಿರುವ ವ್ಯಕ್ತಿಯ ಕಷ್ಟವನ್ನರಿತು ಅದನ್ನು ನಿವಾರಣೆ ಮಾಡುತ್ತಾನೆ. ಇದನ್ನರಿತ ಆ ವ್ಯಕ್ತಿಯು ಸೂಫಿ ಸಾಮಾನ್ಯ ಮನುಜನಲ್ಲ ದೈವಪುರುಷನೆಂದು ಅರಿತು ತನಗರಿವಿಲ್ಲದೆ ತನ್ನ ಕಷ್ಟ ನಿವಾರಣೆಯಾಗಿರುವುದನ್ನು ನೋಡಿ ಈ ಸೂಫಿಗೆ ಶರಣಾಗುತ್ತಾನೆ. ಅಂದಿನಿಂದ ಒಬ್ಬರು ಇಬ್ಬರಂತೆ ಜನರು ಈ ಸೂಫಿಯ ಬಳಿ ಬರಲು ಪ್ರಾರಂಭಿಸುತ್ತಾರೆ. ಅವರ ಅನುಗ್ರಹವನ್ನು ಪಡೆಯಲು ಪ್ರಾರಂಭಿಸುತ್ತಾರೆ. ಅಂದಿನಿಂದ ಈ ಸೂಫಿಯು ಅಲ್ಲಿಯ ಜನರು ಕಷ್ಟ ಎಂದು ಬಳಿ ಬಂದವರಿಗೆ ಪರಿಹಾರವನ್ನು ಸೂಚಿಸುತ್ತಿದ್ದನು.

ಸೂಫಿ ಎಂದರೆ ದೇವರಿಗೆ ಬಹಳ ಪ್ರಿಯವಾದ ವ್ಯಕ್ತಿ. ದೇವರಿಗೆ ಪ್ರಿಯವಾದವನೆಂದರೆ ಇವನಲ್ಲಿ ದೈವಿ ಗುಣಗಳೇ ತುಂಬಿರುತ್ತದೆ. ಸದಾ ಸಹನೆ, ಪ್ರೀತಿ, ಕರುಣೆ ಇದ್ದು, ಕೆಟ್ಟ ವಿಚಾರಗಳಿಗೆ ಜಾಗವಿರುವುದಿಲ್ಲ. ಸದಾ ದೈವತ್ವದ ಆಲೋಚನೆಗಳೇ ಇರುವಾಗ ಜನರ ಮನದ ನೋವು ಇವರ ಅರಿವಿಗೆ ಬರುತ್ತದೆ. ಜನರನ್ನು ಇವರು ಸದಾ ಪ್ರೀತಿಸುತ್ತಾರೆ, ಜನರೊಂದಿಗೆ ಬೆರೆಯುತ್ತಾರೆ. ಜನಸಾಮಾನ್ಯರು ತಮ್ಮತಮ್ಮಲ್ಲಿಯೇ ದ್ವೇಷ ಅಸೂಯೆಗಳನ್ನು ಹೊಂದದಿರ್ಭುವಂತೆ ಅರ್ಥ ಮಾಡಿಸುತ್ತಾರೆ. ಸೂಫಿಯ ಪ್ರೀತಿಗೆ ಜನಸಾಮಾನ್ಯರು ಶರಣಾಗುತ್ತಿದ್ದರು. ಅವರ ನಡೆ - ನುಡಿಗಳಿಂದ ಪ್ರೇರಣೆಯಾಗಿ ತನ್ನಲ್ಲಿರುವ ವಿಕೃತ ಮನಸ್ಸನ್ನು ಸರಿಪಡಿಸಿಕೊಳ್ಳುತ್ತಿದ್ದರು. ಸೂಫಿಗಳು ಎಲ್ಲ ಜಾತಿ, ಧರ್ಮಗಳನ್ನು ಮೆಟ್ಟಿ ನಿಂತು ಎಲ್ಲರಿಗಿರುವ ತಂದೆ ಒಬ್ಬನೇ ಅವನೇ ಆ ಪರಮಾತ್ಮ ಎಂಬುದರ ಬಗ್ಗೆ ಜನಸಾಮಾನ್ಯರಲ್ಲಿ ತಿಳುವಳಿಕೆ ಮೂಡಿಸುತ್ತಿದ್ದರು. ಬಡೇ ಸಾಹೇಬ್ ಖಾದ್ರಿ ಎಂಬ ಸೂಫಿಯು ತಿಳುವಳಿಕೆಯನ್ನು ಈ ಜನಸಾಮಾನ್ಯರಲ್ಲಿ ಮೂಡಿಸಿದನು.

ತಿಳಿಯದ ಜನರಿಗೆ ತಿಳುವಳಿಕೆಯನ್ನು ನೀಡುತ್ತ ಅನೇಕ ಭಕ್ತರನ್ನು ಹೊಂದಿದ್ದನು. ಎಲ್ಲ ಧರ್ಮ - ಕುಲದವರಿಗೆ ಸರ್ವಸಮಾನತೆಯನ್ನು ಬೋಧಿಸುತ್ತಿದ್ದನು. ಬಡೇಸಾಹೇಬ್ ಖಾದ್ರಿಯವರನ್ನು ನೋಡಲು, ಅವರಿಂದ ಅನುಗ್ರಹ, ಆಶೀರ್ವಾದವನ್ನು ಪಡೆಯಲು ಅನೇಕ ಊರುಗಳಿಂದ ಬರಲು ಪ್ರಾರಂಭಿಸಿದರು.

**ಬಡೇಸಾಹೇಬ್ ಖಾದ್ರಿಯವರು ತೋರಿದ ಮಹಿಮೆಗಳು**

ಬಡೇಸಾಹೇಬ್ ಖಾದ್ರಿಯವರು ಕಂಪ್ಲಿಗೆ ಬರುವ ಮುನ್ನ ಹಟ್ಟಿ ಎಂಬ ಗ್ರಾಮದಲ್ಲಿ ನೆಲೆಸಿದ್ದರು. ಅಲ್ಲಿ ಒಂದು ದಿನ ಅಡವಿಯಲ್ಲಿ ಧ್ಯಾನದಲ್ಲಿ ತಲ್ಲೀನರಾಗಿ ಕುಳಿತಿದ್ದರು. ಸೂಫಿಸಂತ

ಧ್ಯಾನಕ್ಕೆ ಕುಳಿತ ಮಾರ್ಗವಾಗಿಯೇ ಟಿಪ್ಪುವಿನ ಸೈನಿಕರು ವಿಜಾಪುರಕ್ಕೆ ಹೊರಟಿದ್ದರು. ಅವರಿಗೆ ತುಂಬಾ ಬಾಯಾರಿಕೆಯಾಗಿ ನೀರಿಗಾಗಿ ಹುಡುಕಾಡುತ್ತಿರುವಾಗ ಎಲ್ಲೂ ನೀರು ಸಿಗಲಿಲ್ಲ. ಕಾರಣ ಅದು ಅಡವಿಯ ಮಾರ್ಗವಾಗಿತ್ತು. ಅಲ್ಲಿ ಜನರ ಸುಳಿದಾಟ ಕೂಡ ಇರಲಿಲ್ಲ. ಅವರಿಗೆ ಕಾಣಿಸಿದ್ದು ಹಟ್ಟಿಯ ಅಡವಿಯಲ್ಲಿ ಧ್ಯಾನಕ್ಕೆ ಕುಳಿತಿದ್ದ ಈ ಬಡೇಸಾಹೇಬ್ ಖಾದ್ರಿ ಮಾತ್ರ. ಇವರಲ್ಲಿಗೆ ಒಬ್ಬ ಸೈನಿಕ ಬಂದು ಕುಡಿಯಲು ನೀರನ್ನು ಕೇಳಿದ! ಆಗ ಬಡೇ ಸಾಹೇಬ್ ಖಾದ್ರಿಯವರು ಎದುರಲ್ಲಿರುವ ಒಂದು ತಂಬಿಗೆಯನ್ನು ತೋರಿಸಿ ತೆಗೆದುಕೊಂಡು ಹೋಗಲು ಹೇಳಿದರು. ಆ ಸೈನಿಕ ಬಾಬಾ ನಾವು ತುಂಬ ಜನ ಇದ್ದೇವೆ, ಒಂದು ತಂಬಿಗೆ ನೀರು ಕುಡಿಯಲು ಸಾಕಾಗುವುದಿಲ್ಲ ಎಂದರೂ ಅದೇ ತಂಬಿಗೆಯನ್ನು ತೆಗೆದುಕೊಂಡು ಕೈಯಲ್ಲಿ ಹಿಡಿದು ಪರಮಾತ್ಮನನ್ನು ನೆನೆದು ಕೊಟ್ಟನು. ಸೈನಿಕ ಅದನ್ನು ತೆಗೆದುಕೊಂಡು ತನ್ನ ಸೈನಿಕರಿದ್ದಲ್ಲಿಗೆ ಹೋಗಿ ಒಬ್ಬೊಬ್ಬರಿಗೆ ನೀರನ್ನು ಹಾಕುತ್ತ ಹೋದಂತೆ ತಂಬಿಗೆಯಲ್ಲಿರುವ ನೀರು ನಲ್ಲಿಯಲ್ಲಿ ನೀರು ಬರುವಂತೆ ಬರುತ್ತಿತ್ತು. ಅದನ್ನು ಕಂಡು ಸೈನಿಕರೆಲ್ಲರೂ ಗಾಬರಿಯಾದರು. ಎಲ್ಲ ಸೈನಿಕರು ನೀರು ಕುಡಿದು ತೃಪ್ತರಾದರೂ ತಂಬಿಗೆಯಲ್ಲಿನ ನೀರು ಖಾಲಿಯಾಗಲಿಲ್ಲ. ಎಲ್ಲರೂ ಬಾಬಾರವರನ್ನು ನೋಡುತ್ತ ಇವರೊಬ್ಬ ಮಹಾನ್ ಪುರುಷ, ದೈವಮಾನವನಿದ್ದಾನೆ. ಸಾಮಾನ್ಯನಂತು ಅಲ್ಲ ಎಂದು ಅರಿತು ಸೂಫಿ ಸಂತನಿಗೆ ಕೈ ಮುಗಿದು ಮುನ್ನಡೆದರು. ಇದನ್ನು ತಮ್ಮ ಮಹಾರಾಜರಾದ ಟಿಪ್ಪುವಿಗೆ ತಿಳಿಸಿದರು. ಕೆಲದಿನಗಳು ಸೂಫಿ ಸಂತ ಹಟ್ಟಿಯಲ್ಲಿದ್ದು ಕಂಪ್ಲಿಯತ್ತ ತಮ್ಮ ಪ್ರಯಾಣವನ್ನು ಬೆಳೆಸಿ ಕಂಪ್ಲಿಯಲ್ಲಿಯೇ ನೆಲೆ ನಿಂತರು. ಇವರ ಮಹಿಮೆಯನ್ನರಿತ ಟಿಪ್ಪುಸುಲ್ತಾನ್ ಆನೆಗುಂದಿಯಲ್ಲಿರುವ ರಾಜನಿಗೆ ವಿಷಯ ತಿಳಿಸಿ ಆ ಸೂಫಿಸಂತನಿಗೆ ಸಹಾಯ ಮಾಡು ನಮ್ಮವರಿಗೆ ಆ ಸೂಫಿ ಉಪಕಾರ ಮಾಡಿ ಯುದ್ಧವನ್ನು ನೀವೇ ಗೆಲ್ಲುತ್ತೀರೆಂದು ಆಶೀರ್ವಾದ ಮಾಡಿದ ಹಾಗೆ ನಾವು ಗೆದ್ದಿದ್ದೇವೆಂದು ಹೇಳಿದ. ಆನೆಗುಂದಿಯನ್ನಾಳುತ್ತಿದ್ದ ರಾಜ ಬಹದ್ದೂರ್ ಕಂಪ್ಲಿಯಲ್ಲಿರುವ ಸೂಫಿಯನ್ನು ಭೇಟಿ ಮಾಡಿ ಅವನಿಗೆ ಕಂಪ್ಲಿಯಲ್ಲಿ ಭೂಮಿಯನ್ನು ಇನಾಮ್ ಕೊಟ್ಟು ಅವರ ಆಶೀರ್ವಾದ ಪಡೆದನು. ಆಗಿನಿಂದ ಬಡೇ ಸಾಹೇಬ್ ಖಾದ್ರಿ ಆ ಜಾಗದಲ್ಲಿಯೇ ಒಂದು ಕುಟೀರವನ್ನು ಮಾಡಿಕೊಂಡು ಅಲ್ಲಿಯೇ ನೆಲೆನಿಂತರು. ಅಲ್ಲಿಂದ ಮುಂದೆ ಯಾವ ಊರಿಗೆ ತಮ್ಮ ಪ್ರಯಾಣವನ್ನು ಮುಂದುವರಿಸಲಿಲ್ಲ.

ಕಣ್ಣಿಲ್ಲದ ಒಬ್ಬ ವ್ಯಕ್ತಿ ಬಂದು ಬಡೇಸಾಹೇಬ್ ಖಾದ್ರಿಯವರಿಗೆ ನಂಬಿಕೆಯಿಂದ ನಮಸ್ಕರಿಸುತ್ತ ತನಗೆ ಕಣ್ಣುಗಳನ್ನು ದಯಪಾಲಿಸಿ; ಈ ಲೋಕವನ್ನು ನೋಡುವ ಅವಕಾಶವನ್ನು ಮಾಡಿಕೊಡೆಂದು ಕೇಳಿಕೊಂಡನು. ಅವನಿಗೆ ಕಣ್ಣುಗಳನ್ನು ಕಾಣುವಂತೆ ಮಾಡಿದನು ಸೂಫಿ ಬಡೇ ಸಾಹೇಬ್ ಖಾದ್ರಿ. ಇದನ್ನು ತಿಳಿದ ಕಂಪ್ಲಿ ಮತ್ತು ಅದರ ಅಕ್ಕಪಕ್ಕದ ಗ್ರಾಮಸ್ಥರು ಬಂದು ಸೂಫಿ ಸಂತನಲ್ಲಿ ತಮ್ಮ ಕಷ್ಟಗಳ ಪರಿಹಾರಕ್ಕಾಗಿ ಮೊರೆಹೋಗುತ್ತಿದ್ದರು.

ಮದುವೆಯಾಗಿ ಎಷ್ಟೋ ವರ್ಷಗಳು ಕಳೆದರೂ ಮಕ್ಕಳಾಗದ ಒಬ್ಬ ಮಹಿಳೆ ಬಂದು ಸೂಫಿ ಸಂತನಿಗೆ ಮೊರೆಹೋದಳು. ಅವರನ್ನು ನಿತ್ಯ ವಂದಿಸಿ ಪೂಜಿಸಿದಳು. ತಾನು ಮಾಡುವ

ಈ ಪೂಜೆಗೆ ಪ್ರತಿಫಲವಾಗಿ ನನಗೆ ತಾಯ್ತನವನ್ನು ಕರುಣಿಸೆಂದಳು. ಇದನ್ನರಿತ ಸೂಫಿಯು ಆ ಮಹಿಳೆಯ ಮಡಿಲಲ್ಲಿ ಮಗುವನ್ನು ಕೊಟ್ಟರು. ಇದರಿಂದ ತೃಪ್ತಿಗೊಂಡ ಆ ಮಹಿಳೆ ತನಗೆ ಮಗುವನ್ನು ಕರುಣಿಸಿ ತನಗಿರುವ ಬಂಜೆತನವನ್ನು ನಿವಾರಣೆ ಮಾಡಿರುವ ವಿಷಯವನ್ನು ಎಲ್ಲರಿಗೆ ತಿಳಿಸಿ ಆನಂದಿಸಿ ಬಾಬಾರವರ ಮಹಿಮೆಯನ್ನು ಕೊಂಡಾಡಿದಳು.

ಊರಿನ ಸುತ್ತಲಿನ ಗ್ರಾಮಗಳಲ್ಲಿ ವ್ಯವಸಾಯವನ್ನು ಮಾಡುತ್ತಿರುವ ರೈತರು ಬೆಳೆಗಳಿಗೆ ಎಷ್ಟೇ ಗೊಬ್ಬರ, ನೀರು ಹಾಕಿದರೂ ಫಲವತ್ತಾದ ಫಸಲು ಬಾರದೆ ಕಂಗಾಲಾಗಿದ್ದರು. ರೈತರನೇಕರು ಬಂದು ಸೂಫಿಯಲ್ಲಿ ಬೇಡಿಕೊಂಡರು. ಇರುವ ದುಡ್ಡನ್ನು ಸುರಿದು ಬೆಳೆಯನ್ನು ಬೆಳೆದಿರುವೆವು, ಫಸಲು ಇಲ್ಲದೆ ಕಂಗಾಲಾಗಿದ್ದೇವೆ! ನಮ್ಮ ಬೆಳೆಗೆ ಉತ್ತಮ ಫಸಲು ಕೊಟ್ಟು ನಮ್ಮನ್ನು ಕಾಪಾಡೆಂದು ಬೇಡಿಕೊಂಡರು. ಸೂಫಿಯು ಆ ರೈತರಿಗೆ ಭರವಸೆಯನ್ನು ಕೊಟ್ಟನು. ನಾನಿರುವ ಈ ಪ್ರದೇಶದ ಜನರೆಲ್ಲ ಸಂತೋಷದಿಂದ ಇರುವಂತೆ ನೋಡಿಕೊಳ್ಳುತ್ತೇನೆ, ಚಿಂತಿಸದಿರಿ ಈ ಸಲದಿಂದ ಪ್ರತಿ ಬೆಳೆಯು ಉತ್ತಮ ಫಸಲು ಕೊಟ್ಟು ನಿಮ್ಮ ಮುಖದಲ್ಲಿ ಸದಾ ಮಂದಹಾಸ ಮೂಡುತ್ತದೆಂದು ಹೇಳಿ ಅವರಿಗೆಲ್ಲ ನೀರನ್ನು ಒಂದು ಬಾಟಲಿಗೆ ಹಾಕಿ ದೇವರ ನಾಮದಿಂದ ಧ್ಯಾನದಿಂದ ಪೂಜಿಸಿ ಇದನ್ನು ನಿಮ್ಮ ಹೊಲದಲ್ಲಿ ಬೆಳೆಗಳಿಗೆ ಚಿಮುಕಿಸಿ ಎಂದರು. ರೈತರು ಹಾಗೆ ಮಾಡಿ ಕೆಲದಿನಗಳಲ್ಲಿ ಬೆಳೆ ಚೆನ್ನಾಗಿ ಬೆಳೆದು ಉತ್ತಮ ಫಲವನ್ನು ಕಂಡುಕೊಂಡರು. ರೈತರು ತಮ್ಮ ಸಂತೋಷದ ವಿಷಯವನ್ನು ತಮ್ಮೂರಿಗೊಂದೇ ಅಲ್ಲದೆ ಸುತ್ತಲಿನ ಊರಿಗೆಲ್ಲ ತಿಳಿಸಿದರು. ಇದರಿಂದ ಬರುವ ಭಕ್ತರ ಸಂಖ್ಯೆ ಅಧಿಕವಾಗಿ ಬೆಳೆಯತೊಡಗಿತು. ಕಂಪ್ಲಿ ಬಡೇಸಾಹೇಬ್ ಖಾದ್ರಿಯವರನ್ನು ಕಾಣಲು, ತಮ್ಮ ಕಷ್ಟಗಳನ್ನು ಪರಿಹರಿಸಿಕೊಳ್ಳಲು ದೂರದ ಊರುಗಳಿಂದ ಕೂಡ ಜನರು ಬಂದು ಇವರಿಂದ ಒಳಿತನ್ನು ಕಂಡುಕೊಳ್ಳುತ್ತಿದ್ದರು. ಭಕ್ತ ಜನಸಮೂಹವು ಅಧಿಕ ಸಂಖ್ಯೆಯಲ್ಲಿ ಬೆಳೆಯಿತು.

ಊರಿನಲ್ಲಿ ಮಳೆಯಿಲ್ಲದೆ ಜನರು ಕಂಗಾಲಾಗಿ ಪ್ರಾಣಿ ಪಕ್ಷಿಗಳಿಗೆ ಕುಡಿಯಲು ನೀರಿಲ್ಲದೆ ದನ-ಕರುಗಳಿಗೆ ತಿನ್ನಲು ಮೇವು ಇಲ್ಲದೆ ಚಿಂತಾಜನಕ ಸ್ಥಿತಿಯಲ್ಲಿದ್ದಾಗ ಊರ ಜನರೆಲ್ಲ ಬಂದು ಸೂಫಿಯಲ್ಲಿ ಬೇಡಿಕೊಂಡರು. ನಮ್ಮ ಊರಿಗೆ ಬರಗಾಲ ಬಂದು ಕ್ಷಾಮದ ಭೀತಿ ನಮ್ಮ ಪ್ರಾಣವನ್ನು ಕಿತ್ತು ತಿನ್ನುತ್ತಿದೆ. ಈ ಸ್ಥಿತಿಯನ್ನು ನೋಡಿ ಕರುಣಿಸಿ ನಮ್ಮನ್ನು ಅನುಗ್ರಹಿಸಿ ನಮ್ಮೂರಿನ ಕ್ಷಾಮವನ್ನು ನಿವಾರಣೆ ಮಾಡಿ ಎಂದು ಕೇಳಿಕೊಂಡರು. ಧ್ಯಾನಾವಸ್ಥೆಯಲ್ಲಿದ್ದ ಸೂಫಿ ಬಾಬಾ ಬಡೇ ಸಾಹೇಬ್ ಖಾದ್ರಿಯವರು ಜನರನ್ನೊಮ್ಮೆ ನೋಡಿ ಮೌನದಿಂದ ಕುಳಿತು ಸ್ವಲ್ಪ ತಡೆಯಿರೆಂದು ಸನ್ನೆಯಲ್ಲಿ ತಿಳಿಸಿ ನಂತರ ತನ್ನ ಧ್ಯಾನಸ್ಥಾನದಿಂದ ಎದ್ದು ಬಂದು ಜನರಿಗೆ ಧೈರ್ಯವನ್ನು ಕೊಟ್ಟರು. ಚಿಂತಿಸದಿರಿ, ನೀವೆಲ್ಲ ದೇವರ ಮಕ್ಕಳು, ಎಲ್ಲದಕ್ಕೂ ದೇವರೆ ಕಾರಣ. ಆ ದೇವರನ್ನು ನಂಬಿ, ನಿಮ್ಮನೆಂದೂ ಕೈ ಬಿಡಲಾರ, ಕೈ ಹಿಡಿದು ಕಾಪಾಡುತ್ತಾನೆ. ಎಲ್ಲರೂ ಮನದಲ್ಲಿ ಆ ಪರಮಾತ್ಮನನ್ನು ಪ್ರಾರ್ಥಿಸಿರಿ! ಎಂದು ಹೇಳಿ ತಾನು

ಆ ದೇವರ ಮೊರೆಹೋಗುತ್ತಾನೆ. ಈ ಸಂಜೆಯೊಳಗೆ ಮಳೆ ಬರುವುದು, ಎಲ್ಲರೂ ಕಾದು ನೋಡಿ ಎನ್ನುತ್ತಾನೆ. ಜನರೆಲ್ಲ ಸೂಫಿ ಸಂತನಿಗೆ ಕೈ ಮುಗಿದು ಅವರ ಕುಟೀರದ ಮುಂದೆ ಕುಳಿತು ಆಕಾಶವನ್ನು ನೋಡುತ್ತ ಸೂಫಿಗೆ ಕೈ ಮುಗಿಯುತ್ತ ದೇವರನ್ನು ನೆನೆಯುತ್ತ ಕುಳಿತ್ತಿರುತ್ತಾರೆ. ಸಂಜೆಯೊಳಗಾಗಿ ಮೋಡವೇ ಇಲ್ಲದ ಆಗಸದಿಂದ ಮಳೆಯ ಹನಿಗಳು ಭೂಮಿಯ ಮೇಲೆ ಹನಿ ಹನಿಯಾಗಿ ಬಿದ್ದಂತೆಲ್ಲ ಜನರು ಮುಗುಳ್ನಗುತ್ತಾರೆ. ಸ್ವಲ್ಪರಲ್ಲಿಯೇ ರಭಸದಿಂದ ಮಳೆ ಬಂದು ಭೂಮಿಯೆಲ್ಲ ಹಸಿಯಾಯಿತು. ಇದನ್ನು ಕಂಡು ಅಲ್ಲಿ ನೆರೆದಿರುವ ಜನರೆಲ್ಲ ಗಟ್ಟಿಯಾದ ಧ್ವನಿಯಲ್ಲಿ ಸೂಫಿ ಸಂತನಿಗೆ ಘೋಷಣೆಯನ್ನು ಕೂಗುತ್ತಾ ಶರಣು ತಂದೆ ನಿನಗೆನ್ನುತ್ತಾ ಎಲ್ಲರೂ ಅವರ ಪಾದಗಳಿಗೆ ವಂದಿಸಿದರು. ಮೋಡವಿಲ್ಲದ ಆಗಸದಿಂದ ಮಳೆಯನ್ನು ತಂದು ಜನರ ಕಷ್ಟಕ್ಕೆ ಕಾರಣವಾದ ಕ್ಷಾಮವನ್ನು ನಿವಾರಣೆ ಮಾಡಿದರು.

ಊರಿನಲ್ಲಿರುವ ಜಾನುವಾರುಗಳು ಹಲವು ರೀತಿಯ ರೋಗಕ್ಕೆ ತುತ್ತಾಗುತ್ತಿದ್ದವು. ಇದನ್ನು ಸೂಫಿ ಸಂತ ನಿವಾರಣೆ ಮಾಡಿದರು. ಊರಿಗೆ ಬಂದಿರುವ ಮಾರಿಬೇನೆ, ಕಾಲರಾ, ಪ್ಲೇಗ್ ಇಂತಹ ರೋಗಗಳ ನರ್ತನೆಯನ್ನು ನಿಲ್ಲಿಸಿದರು. ಸದಾ ಜನರ ಒಳಿತಿಗಾಗಿ ಹಗಲಿರುಳು ಜನರ ಸೇವೆಗೈದರು. ತನ್ನ ಶಕ್ತಿಯನ್ನೆಲ್ಲ ಜನರ ಶುಭಕ್ಕಾಗಿ ಧಾರೆಯೆರೆದರು. ಜನರು ಬೇಡಿದ್ದನ್ನೆಲ್ಲ ಕೊಟ್ಟು ತಾನು ತೃಪ್ತಿಪಡುತ್ತಿದ್ದರು. ಊರನ್ನು, ಊರಿನ ಜನರನ್ನು ಸದಾ ಕಾಪಾಡುತ್ತಿದ್ದರು. ಬಡೇಸಾಹೇಬ್ ಖಾದ್ರಿಯವರು ಸದಾ ಜನರೊಂದಿಗೆ ಬೆರೆಯುತ್ತಿದ್ದುದರಿಂದ ಅವರ ಕಷ್ಟಗಳಿಗೆ ಸ್ಪಂದಿಸಿತ್ತಿದ್ದರು. ಪರಮಾತ್ಮನಿಂದ ಪಡೆದಿರುವ ಅನುಭಾವದ ಶಕ್ತಿಯನ್ನು ಹಂಚಿಕೊಳ್ಳುವುದರಲ್ಲಿ ಸುಖವಿದೆ ಎನ್ನುತ್ತಿದ್ದರು. ಭಕ್ತ ಜನ ಸಮೂಹವು ಇವರಿಂದ ಉಸಿರಾಡುವಂತಾಯಿತು. ಭಕ್ತರ ಜೀವನಕ್ಕೆ ಬಡೇಸಾಹೇಬ್ ಖಾದ್ರಿಯವರು ಉಸಿರಾಗಿದ್ದರು. ಆಸರೆಯಾಗಿದ್ದರೆಂದೇ ಹೇಳಬಹುದು. ಜನರು ಸೂಫಿಯ ಬಗ್ಗೆ ಅಪಾರವಾದ ಪ್ರೀತಿಯನ್ನು ಹೊಂದಿದ್ದರು. ಸೂಫಿಯನ್ನು ಕೊಂಡಾಡದ ಕ್ಷಣವೇ ಇಲ್ಲ. ಸೂಫಿ ಬಡೇ ಸಾಹೇಬ್ ಖಾದ್ರಿಯವರು ಭಕ್ತ ಜನ ಸಮೂಹಕ್ಕೆ ಆರಾಧ್ಯ ದೈವವಾಗಿದ್ದರು.

### ಸೂಫಿ ಸಾದಿಕ್‌ವಲಿ ಶಾ ಖಾದ್ರಿ ಲೋಲಂಗರ್

ಬಳ್ಳಾರಿ ಜಿಲ್ಲೆಯ ತುಂಗಭದ್ರಾ ನದಿ ಪ್ರಾಂತ್ಯದಲ್ಲಿ ಬರುವಂಥ ಕೂಡ್ಲಿಗೆ ತಾಲೂಕಿನ ಗ್ರಾಮದಲ್ಲಿರುವ ಸೂಫಿಯ ಹೆಸರು ಸಾದಿಕ್ ವಲಿ ಶಾ ಖಾದ್ರಿ ಲೋಲಂಗರ್. ಈ ಸೂಫಿಯು ಭಾರತಕ್ಕೆ ಬಂದದ್ದು ಬಾಗ್ದಾದ್‌ನಿಂದ. ಬಂದು ನೆಲೆಸಿದ್ದು ವಿಜಾಪುರದಲ್ಲಿ. ಅಲ್ಲಿ ಕೆಲದಿನಗಳ ಕಾಲ ಕಳೆದು ನಂತರ ಬಂದು ಗಟ್ಟಿಯಾಗಿ ತನಗೆ ಒಂದು ನೆಲೆಯನ್ನು ಕಂಡುಕೊಂಡದ್ದು ಉಜ್ಜನಿಯಲ್ಲಿ. ಈ ಪ್ರದೇಶದ ಒಂದು ಬಯಲಾದ ಊರ ಹೊರಗಿರುವ ವಿಶಾಲವಾದ ಪ್ರಶಾಂತವಾದ ಜಾಗದಲ್ಲಿ ಒಂದು ಮರವಿತ್ತು. ಆ ಮರದ ಕೆಳಗೆ ವಾಸವಾಗಿದ್ದರು. ಇಲ್ಲಿಗೆ ಬಂದಾಗ ಇವರು ಒಬ್ಬರೇ ಇದ್ದರು; ಜೊತೆಯಲ್ಲಿ ಯಾರು ಇರಲಿಲ್ಲ ಇವರೊಬ್ಬರೂ

ಕುಳಿತು ಒಂದು ವಾರ ಕಳೆಯಿತು. ಅಲ್ಲೇ ಕುಳಿತು ಮಲಗುವುದನ್ನು ಕೆಲವರು ಕಂಡರು, ಬಂದು ಮಾತನಾಡಿಸಿದರು. ಸೂಫಿಗಳು ಕೇಳಿದಾಕ್ಷಣ ಅವರಿಗೆ ಎಲ್ಲವೂ ಹೇಳುತ್ತಿರಲಿಲ್ಲ ಮೊದಮೊದಲು ಮುಗುಳ್ನಗೆಯನ್ನು ಬೀರುವವರಾಗಿದ್ದರು. ಬಂದಿರುವ ವ್ಯಕ್ತಿಗಳು ಕೇಳುವ ಪ್ರಶ್ನೆಗೆ ಬರಿ ಮುಗುಳ್ನಗೆಯಲ್ಲೇ ಉತ್ತರವನ್ನು ನೀಡುತ್ತಿದ್ದರು. ನಿಧಾನವಾಗಿ ದಿನಗಳು ಉರುಳಿದಂತೆ ಲೋಲಂಗರ್ ತಾವಿದ್ದ ಜಾಗಕ್ಕೆ ಬಂದು ಮಾತನಾಡುವ ವ್ಯಕ್ತಿಗಳೊಂದಿಗೆ ತಾವು ಮಾತನಾಡುತ್ತಿದ್ದರು. ಇವರು ಮಾತನಾಡುವ ಪರಿಯು ವಿಶೇಷತೆಯಿಂದ ಕೂಡಿದ್ದಾಗಿತ್ತು. ಇದರ ಅರ್ಥ ತಿಳಿಯದೆ ಕೆಲವರು ಮೂಕರಂತಾಗಿ ಇವನಾರು ಗೊತ್ತಿಲ್ಲ, ಭಾಷೆಯ ಅರ್ಥ ತಿಳಿಯುತ್ತಿಲ್ಲವೆಂದು ಅವರಿವರು ಮಾತನಾಡುತ್ತಿದ್ದರು.

ಜನರು ಅಲ್ಲಿಯೇ ಸಮೀಪದಲ್ಲಿದ್ದ ಉಜ್ಜನಿ ಮಠದವರಿಗೆ ವಿಷಯ ತಿಳಿಸುತ್ತಾರೆ. ಯಾರೋ ಒಬ್ಬ ವ್ಯಕ್ತಿ ನಿಲುವಂಗಿಯನ್ನು ಧರಿಸಿ ಮಗ್ಗುಲಲ್ಲಿ ಒಂದು ಹಳೆಯ ಪೆಟ್ಟಿಗೆಯನ್ನು ಹಿಡಿದುಕೊಂಡು ಬಂದು ಊರ ಹೊರಗೆ ಹೊಲಗಳಿರುವ ಪ್ರದೇಶದಲ್ಲಿ ಕುಳಿತ್ತಿದ್ದಾನೆ. ಅದನ್ನು ಕೇಳಿದ ಮಠದ ಹಿರಿಯರು ಬಂದು ಈತನನ್ನು ನೋಡಲು ಸಾಮಾನ್ಯನಿಗಿಂತ ವಿಶೇಷವಾಗಿ ಕಾಣಿಸಿದನು. ಕುಳಿತಿರುವ ರೀತಿ ನೋಡುತ್ತಿರುವ ನೋಟ ವಿಶೇಷತೆಯಿಂದ ಕೂಡಿತ್ತು. ಈತನ ಸಹನಾತ್ಮಕ ನುಡಿಗಳನ್ನು, ಮೌನದ ಮಂದಹಾಸವನ್ನು ನೋಡಿ ಈತನೊಬ್ಬ ಮಹಾನ್ ಪುರುಷ ಅಥವಾ ಒಬ್ಬ ಸಂತನಿರಬೇಕೆಂದುಕೊಂಡರು. ಆತನಿಗೆ ನಮಸ್ಕರಿಸಿ ಮಾತನಾಡಿಸಿದರು. ನಂತರ ಅವರು ಹಿಂದಿರುಗಿ ಮಠದ ಕಡೆಗೆ ಹೋದರು. ಆದರೆ ಆ ಸಂತ ಅಲ್ಲಿಯೇ ಕುಳಿತ್ತಿದ್ದ. ಅಲ್ಲಿಯ ಹೊಲಗಳ ಯಜಮಾನರು ತಮ್ಮ ಹೊಲಗಳಿಗೆ ಹೋಗಲು ಅಲ್ಲಿ ದೊಡ್ಡದಾದ ನೀರಿನ ಹಳ್ಳವೊಂದಿತ್ತು. ಎಲ್ಲರೂ ತೆಪ್ಪದಲ್ಲಿ ತಮ್ಮ ಹೊಲಗಳಿಗೆ ಹೋಗುತ್ತಿದ್ದರು. ಒಂದು ದಿನ ಈ ಸೂಫಿಯನ್ನು ಕರೆದರು, ನೀವು ಸದಾ ಇಲ್ಲೇ ಕುಳಿತಿರುತ್ತೀರಿ ಬನ್ನಿ ನಮ್ಮ ಜೊತೆಗೆ ಹೊಲವನ್ನು ತೋರಿಸುತ್ತೇವೆಂದು ಕರೆದುಕೊಂಡು ಹೋಗಿ ಅವರೆಲ್ಲ ತೆಪ್ಪದಲ್ಲಿ ಕುಳಿತು ಇವರನ್ನು ಕೂಡಲು ಹೇಳಿದರು. ಆದರೆ ಈ ಸೂಫಿಯು ತಾನು ತಂದಿರುವ ಪೆಟ್ಟಿಗೆಯ ಮೇಲೆ ಕುಳಿತು ಆ ಹಳ್ಳವನ್ನು ದಾಟಿದನು. ಪ್ರತಿಯೊಬ್ಬರು ಗಾಬರಿಗೊಂಡು ಮಾತೇ ಬಾರದವರಂತೆ ಈ ಸೂಫಿ ಲೋಲಂಗರ್‌ನನ್ನು ನೋಡುತ್ತಿದ್ದರು. ಇವರು ಸಾಮಾನ್ಯ ಪುರುಷರಲ್ಲವೆಂದರಿತು ಮತ್ತೆ ಹೋಗಿ ಮಠದ ಹಿರಿಯರಿಗೆ ತಿಳಿಸಿದರು. ಉಜ್ಜನಿ ಮಠದ ಹಿರಿಯರೆಲ್ಲ ಬಂದು ಇವರ ಚಮತ್ಕಾರವನ್ನರಿತು ಅವರು ಅಂದು ನೋಡಿದ್ದು ಅನಿಸಿಕೆ ಮಾಡಿಕೊಂಡದ್ದೆಲ್ಲ ನಿಜವೆಂದುಕೊಂಡು ಲೋಲಂಗರ್ ಬಾಬಾರವರಿಗೆ ಇಲ್ಲಿ ಯಾಕೆ ಇರುವಿರಿ? ಬನ್ನಿ ನಮ್ಮ ಜೊತೆ ನಮ್ಮಲ್ಲಿ ನಿಮಗೆ ಒಂದು ಕೋಣೆಯನ್ನು ಕೊಡುತ್ತೇವೆ. ಅಲ್ಲೇ ಇರಬಹುದೆಂದಾಗ ಲೋಲಂಗರ್‌ರು ನಾನು ಕುಳಿತಿರುವ ಕಡೆ ನೀವು ನನಗೆ ಜಾಗ ಕೊಟ್ಟರೆ ನಾನು ಇಲ್ಲೇ ಇರುತ್ತೇನೆ. ನನಗೆ ಇಲ್ಲೇ ಇರಲು ಮನಸ್ಸಿದೆ ಎಂದನು. ಆ ಜಾಗವು ಮಠದವರಿಗೆ ಸೇರಿದ ಜಾಗವೆಂದು ನಿನ್ನೆ ಮೊನ್ನೆ ಬಂದಿರುವ ಇವರಿಗೆ ತಿಳಿದಿದೆ ಎಂದರೆ ಇವರು ಸಾಮಾನ್ಯರಲ್ಲವೆಂದುಕೊಂಡು ಅವರು ಸರಿ

ನಿಮಗೆಷ್ಟು ಜಾಗಬೇಕೆಂದಾಗ ಲೋಲಂಗರ್ ತನ್ನ ಮೈ ಮೇಲಿರುವ ಒಂದು ಬಟ್ಟೆಯನ್ನು ಹಾಸುತ್ತೇನೆ ಅದು ಎಷ್ಟು ದೂರ ಹೋಗುತ್ತದೊ ಅಷ್ಟನ್ನು ಕೊಡಬೇಕೆಂದನು. ಅದಕ್ಕೆ ಹಿರಿಯರು ಒಪ್ಪಿದರು. ನೋಡಲು ಚಿಕ್ಕದಿದ್ದ ಬಟ್ಟೆ ಕೆಳಗೆ ಹಾಸಲು ದೊಡ್ಡ ಗಾತ್ರದಲ್ಲಿ ಬೆಳೆಯಿತು ಸರಿ ಎಂದು ಅಷ್ಟನ್ನು ಕೊಟ್ಟರು. ಈ ಸೂಫಿಗೆ ಉಡುಗೊರೆಯಾಗಿ ಕೊಟ್ಟ ಆ ಜಾಗದಲ್ಲಿಯೇ ಲೋಲಂಗರ್ ಬಾಬಾ ನೆಲೆಸಿದರು. ಅಲ್ಲಿಯೇ ಬಾಬಾ ಅವರ ದರ್ಗಾವನ್ನು ಇಂದು ನಾವು ನೋಡಬಹುದು.

ಲೋಲಂಗರ್ ಬಾಬಾರವರು ಸದಾ ಧ್ಯಾನ, ಆಧ್ಯಾತ್ಮದಲ್ಲಿಯೇ ದಿನ ಕಳೆಯುತ್ತಿದ್ದರು. ಅವರು ಮೆಚ್ಚಿದ ಆ ಸ್ಥಳ ಪ್ರಶಾಂತತೆಯಿಂದಿತ್ತು. ಲೋಲಂಗರ್‌ರವರು ತಮ್ಮ ದಿನನಿತ್ಯದ ಕೆಲಸ ಕಾರ್ಯಗಳಲ್ಲಿ ನಿರತರಾಗಿರುತ್ತಿದ್ದರು. ಲೋಲಂಗರ್ ಬಾಬಾರವರನ್ನು ನೋಡಲು, ತಮ್ಮ ಕಷ್ಟಗಳನ್ನು ಪರಿಹರಿಸಿಕೊಳ್ಳಲು ಜನರು ಬರಲು ಪ್ರಾರಂಭಿಸಿದರು. ಸೂಫಿ ಸಂತರು ಹೆಚ್ಚಾಗಿ ಮೌನಿಗಳಾಗಿದ್ದರೂ ಜನರು ಕಷ್ಟಗಳೆಂದು ಬಳಿಬಂದಾಗ ಸದಾ ಸಹಾಯಕರಾಗಿರುತ್ತಾರೆ. ಇವರಲ್ಲಿ ಜಾತಿ, ಮತ, ಧರ್ಮಗಳಿಗೆ ಜಾಗವಿರುವುದಿಲ್ಲ. ತಮ್ಮ ಒಂದು ಮನಸ್ಸಿನ ಮಾರ್ಗದಂತೆಯೇ ನಡೆಯುವರು. ಸದಾ ಪರಮಾತ್ಮನ ಧ್ಯಾನ, ಅವನ ಅನುಗ್ರಹಕ್ಕಾಗಿ ಹಗಲಿರುಳು ಪ್ರಾರ್ಥಿಸುತ್ತಾರೆ. ಸದಾ ಪ್ರೀತಿ ತುಂಬಿದ ಹೃದಯ, ಪರಿಶುದ್ಧವಾದ ಮನಸ್ಸು ಇರುವುದರಿಂದ ನೋಡಿದಾಕ್ಷಣ ವಿಶೇಷವಾದ ಶಕ್ತಿಯಿರುವ ಮಹಾನ್ ಪುರುಷರಂತೆ ಕಾಣುತ್ತಾರೆ.

ಜನಸಾಮಾನ್ಯರ ಮನಸ್ಸು ಎಷ್ಟು ವಿಕೃತವೆಂಬುದು ಈ ಅನುಭಾವಿಗಳಾದ ಸೂಫಿಗಳಿಗೆ ತಿಳಿಯುತ್ತದೆ. ಅವರು ಅದೇ ವಿಕೃತ ದೃಷ್ಟಿಯಲ್ಲಿಯೇ ಇತರರನ್ನು ನೋಡುತ್ತಾರೆ. ಮನುಜ ಮನುಜನಲ್ಲಿಯೇ ದ್ವೇಷ ಅಸೂಯೆಗಳು, ಅಹಂ, ಕೋಪ, ಅನುಕಂಪವಿಲ್ಲದ ದೇಹ ಹೊತ್ತ ಮನುಜನನ್ನು ಪಾರಮಾರ್ಥಿಕವಾಗಿ ಸಂಬಂಧಗಳನ್ನು ತಿಳಿಸಿ ಆತ್ಮದ ಸಂಪರ್ಕದ ತತ್ವವನ್ನು ತಿಳಿಸುವ ಪ್ರಯತ್ನದಲ್ಲಿರುತ್ತಾರೆ. ಸೂಫಿ ಲೋಲಂಗರ್ ತನ್ನ ಆಶ್ರಮಕ್ಕೆ ಬಂದಿರುವ ಭಕ್ತಾದಿಗಳಿಗೆ ಇಂಥ ಪರಮಾತ್ಮನ ಅನುಗ್ರಹದ ಸುಖವನ್ನು ತಿಳಿಸುತ್ತಾರೆ. ದೇಹವನ್ನು ಹೊತ್ತು ಈ ಭೂಮಿ ಮೇಲೆ ಇರುವವರೆಗೆ ಅಜ್ಞಾನದ ಹಾದಿಯಲ್ಲಿದ್ದು ಜ್ಞಾನದ ಹಾದಿಯನ್ನು ಕಂಡು ಕಾಣದಂತೆ ಇರುವ ಮನುಜನನ್ನು ಕಂಡು ಮರುಗುತ್ತಾರೆ ಸೂಫಿ ಸಂತ. ಸೂಫಿ ಲೋಲಂಗರ್ ಬಾಬಾ ಕೂಡ ತನ್ನ ಭಕ್ತ ಜನಸಮೂಹವನ್ನು ಸರಿಯಾದ ಜ್ಞಾನದ ಬೆಳಕಿನೆಡೆಗೆ ಕೊಂಡೊಯ್ಯುವ ಪ್ರಯತ್ನದಲ್ಲಿಯೇ ಇರುತ್ತಾರೆ. ತನ್ನ ನಂಬಿ ಬಂದಿರುವವರ ಕಷ್ಟವನ್ನು ಪರಿಹಾರ ಮಾಡುತ್ತ ಅಧಿಕ ಭಕ್ತರ ಸಂಖ್ಯೆಯನ್ನು ಹೊಂದಿದ್ದರು.

**ಸೂಫಿ ಲೋಲಂಗರ್ ಅವರು ತೋರಿದ ಮಹಿಮೆಗಳು**

ಸೂಫಿಗಳು ತಮ್ಮ ಶಕ್ತಿಯನ್ನು ತಮ್ಮಲ್ಲಿಯೇ ಇಟ್ಟುಕೊಳ್ಳುವುದಿಲ್ಲ. ತಾವು ಪಡೆದ ಸಾಧನೆಯ ಸಿದ್ಧಿಯ ಫಲವನ್ನು ಇತರರಿಗಾಗಿ ಉಪಯೋಗಿಸುತ್ತಾರೆ. ಒಂದು ಪ್ರದೇಶದಲ್ಲಿ ನೆಲೆ ನಿಂತು

ಆ ಪ್ರದೇಶದ ಸುತ್ತಮುತ್ತಲಿನ ಪ್ರದೇಶದ ಜನರ ಕಷ್ಟಗಳನ್ನು ಪರಿಹರಿಸುವ ಕಾಯಕವನ್ನು ಮಾಡುತ್ತ ತಮ್ಮ ಜೀವನವನ್ನು ಪರಮಾತ್ಮನ ಪ್ರೀತಿಯ ಅನುಗ್ರಹದ ಸ್ಪರ್ಶದಲ್ಲಿ ಕಳೆಯುತ್ತಾರೆ. ಸೂಫಿ ಲೋಲಂಗರ್ ಅವರು ಒಮ್ಮೆ ತಾನು ನೆಲೆಸಿದ ಜಾಗದಲ್ಲಿ ಸುಮ್ಮನೆ ಕುಳಿತಿದ್ದಾಗ ಅವರಿದ್ದ ಜಾಗದ ಸುತ್ತಮುತ್ತ ಹೊಲಗಳಿರುವುದರಿಂದ ಅಲ್ಲಿ ನೀರಿನ ಅಂಶ ಹೆಚ್ಚಾಗಿತ್ತು. ಇರಲು ಯೋಗ್ಯವಲ್ಲದ ಪ್ರದೇಶವಾಗಿತ್ತು. ರೈತರು ಸಾಗುವಳಿ ಮಾಡುವ ಜಮೀನು ನೀರಿನಲ್ಲಿ ಮುಳುಗಿ ಹೋಗಿತ್ತು. ಇದನ್ನೆಲ್ಲ ಹೇಗೆ ನಿವಾರಿಸುವುದೆಂದು ಜನ ಚಿಂತೆಯಲ್ಲಿದ್ದಾಗ ಒಮ್ಮೆ ಅವರು ಲೋಲಂಗರ್ ಬಾಬಾರವರ ಬಳಿಬಂದು ಸಹಾಯ ಬೇಡುತ್ತಾರೆ. ಜಮೀನಿನ ಯಜಮಾನರು ದುಃಖದಲ್ಲಿರುವುದನ್ನು ಕೇಳಿ ಲೋಲಂಗರ್ ಬಾಬಾ ತನ್ನ ಬಳಿ ಇರುವ ಪೆಟ್ಟಿಗೆಯನ್ನು ನೀರಿನಲ್ಲಿ ಬಿಟ್ಟು ಈ ನೀರನ್ನು ನಿವಾರಣೆ ಮಾಡಲು ಕೇಳಿಕೊಂಡರು. ಆಗ ನೀರೆಲ್ಲ ನಿವಾರಣೆಯಾಗುತ್ತದೆ. ಸೂಫಿ ಲೋಲಂಗರ್ ಅವರ ಈ ಮಹಿಮೆಯನ್ನು ಜನರು ಕೊಂಡಾಡಿದರು.

ಲೋಲಂಗರ್ ಬಾಬಾ ಅವರು ವಾಸಿಸುವ ಪ್ರದೇಶದ ಸುತ್ತಮುತ್ತ ಸೊಪ್ಪು ಬೆಳೆದಿತ್ತು. ಆ ಸೊಪ್ಪನ್ನು ಪ್ರತಿದಿನವೂ ಒಂದು ಆಕಳು ಬಂದು ತಿಂದು ಹಾಕುತ್ತಿತ್ತು. ಇದರಿಂದ ಲೋಲಂಗರ್ ಅವರಿಗೆ ಕೋಪ ಬಂದು ಬಾಬಾ ಹತ್ತಿರ ಬರುವ ಜನಕ್ಕೆ ಹೇಳಿದರಂತೆ ಈ ಹಸುವನ್ನು ಕೊಯ್ದು ಇದರ ಮಾಂಸವನ್ನೆಲ್ಲ ತಿಂದು ಚರ್ಮ ಕಾಲು, ತಲೆ ಬಿಡಿ ಎಂದರಂತೆ. ಆತನ ಅನುಯಾಯಿಗಳು ಲೋಲಂಗರ್ ಬಾಬಾ ಹೇಳಿದಂತೆ ಮಾಡಿದರು. ಹಸುವಿನ ಮನೆಯವರು ಹಸುವನ್ನು ನೋಡಿದಿರಾ ಈ ಕಡೆ ಬಂದಿರುವುದು ನಮಗೆ ಗೊತ್ತು ಆದರೆ ಈಗ ಕಾಣಿಸುತ್ತಿಲ್ಲವೆಂದು ಲೋಲಂಗರ್ ಬಾಬಾ ಅವರನ್ನು ಕೇಳಿದರು. ಬಾಬಾರವರು ನಿಮ್ಮ ಹಸು ಇಲ್ಲೇ ಮಲಗಿದೆ ನೋಡಿ ಕರೆದುಕೊಂಡು ಹೋಗಿ ಎಂದು ಎಬ್ಬಿಸಿ ತೋರಿಸಿದರು. ಆದರೆ ಹಸುವಿಗಾಗಿರುವ ಗತಿ ಅದರ ಮನೆಯವರಿಗೂ ತಿಳಿದಿತ್ತು. ಈಗ ಜೀವಂತವಾದ ನಮ್ಮ ಹಸುವನ್ನು ನಮಗೆ ತೋರಿಸಿದ್ದಾರೆಂದು ಸಂತೋಷಗೊಂಡು ಇವರ ಮಹಿಮೆ ದೊಡ್ಡದೆಂದು ಲೋಲಂಗರ್ ಬಾಬಾರವರಿಗೆ ಕೈಮುಗಿದರು.

ಲೋಲಂಗರ್ ಬಾಬಾರವರ ಮಹಿಮೆಯನ್ನು ನೋಡಿ ಮತ್ತು ಕೇಳಿದ ಜನರು ಇವರನ್ನು ನೋಡಿ ಮಾತನಾಡುವ ಆತುರದಿಂದ ಓಡೋಡಿ ಬಂದರು. ಇವರ ದರ್ಶನ ಪಡೆದು ತಮ್ಮ ಕಷ್ಟಗಳಿಗೆ ಪರಿಹಾರವನ್ನು ಕಂಡುಕೊಂಡು ನಿವಾರಣೆ ಮಾಡಿಕೊಂಡು ಬಾಬಾರವರ ಮಹಿಮೆಗೆ ಭಕ್ತರು ಶರಣಾದರು. ಉಜ್ಜನಿಯಲ್ಲಿರುವ ಲೋಲಂಗರ್ ಬಾಬಾರವರ ಭಕ್ತರು ತಮ್ಮ ಕಷ್ಟ ನಿವಾರಣೆಗಾಗಿ ಪ್ರತಿನಿತ್ಯ ಪ್ರಾರ್ಥನೆ ಮಾಡಿಕೊಳ್ಳುತ್ತಿದ್ದರು. ರೈತರು ಬೆಳೆಯುವ ಬೆಳೆಗೆ ಉತ್ತಮವಾದ ಮಳೆಯಾಗಿ ಫಸಲು ಬಂದು ರಾಶಿ ಮಾಡಿ ಲಾಭವನ್ನು ಪಡೆಯುವ ಸಮಯದಲ್ಲಿ ಬೆಳೆ ಅತಿವೃಷ್ಟಿ ಮತ್ತು ಅನಾವೃಷ್ಟಿಗೆ ಹಾನಿಯಾಗುತ್ತಿತ್ತು. ಇದರಿಂದ ನಷ್ಟವನ್ನು ಅನುಭವಿಸುತ್ತಿದ್ದ

ಜನರು ಲೋಲಂಗರ್ ಬಾಬಾರವರ ಬಳಿ ಬಂದು ಕೇಳಿಕೊಂಡರು. ಅದರ ತಡೆಯುವಿಕೆಗಾಗಿ ಪ್ರಾರ್ಥಿಸಿದರು. ಆಗ ಲೋಲಂಗರ್ ಬಾಬಾರವರು ಅವರ ಬೆಳೆ ಹಾನಿಗಾಗಿ ಭಗವಂತನಲ್ಲಿ ಪ್ರಾರ್ಥಿಸಿ ತಾವು ಪಡೆದ ಶಕ್ತಿಯಿಂದ ಈ ಹಾನಿಯಾಗುವುದನ್ನು ನಿಲ್ಲಿಸಿದರು. ಅಂದಿನಿಂದ ಮಳೆಯು ಹಿತಮಿತವಾಗಿ ಬಂದು ಬೆಳೆಗೆ ತಕ್ಕ ಫಲ ಸಿಕ್ಕು ಸಂತೋಷಗೊಂಡರು. ಬಾಬಾರ ಮಹಿಮೆಯನ್ನು ಕೂಡ ಜನರು ಮೆಚ್ಚಿಕೊಂಡು ನಲಿದಾಡಿದರು.

ಕೆಲವರು ಮಾನಸಿಕವಾಗಿ ಹಿಂಸೆಗಳಿಗೊಳಗಾಗಿ ಹುಚ್ಚು ಹಿಡಿದಂತೆ ವರ್ತಿಸುವವರು, ದೆವ್ವದ ಹೆಸರಲ್ಲಿ ತಮಗೆ ದೆವ್ವ ಹಿಡಿದಿದೆಂದು ಹುಚ್ಚರಂತೆ ವರ್ತಿಸುವವರನ್ನು ಲೋಲಂಗರ್ ಬಾಬಾ ಅವರಲ್ಲಿಗೆ ಕರೆ ತರುತ್ತಿದ್ದರು. ಇದು ಯಾವ ಕೆಟ್ಟ ವಿಚಾರ - ವಿಷಯವೂ ಅಲ್ಲ ಎಂದು ಹೇಳಿ ಅವರ ಮುಖದ ಮೇಲೆ ಲೋಲಂಗರ್ ಬಾಬಾರವರು ನೀರನ್ನು ಕೈಯಲ್ಲಿ ಹಿಡಿದು ಪ್ರಾರ್ಥನೆಯನ್ನು ಮಾಡಿ ಚಿಮುಕಿಸಿದರೆ ಅವರು ವಾಸಿಯಾಗುತ್ತಿದ್ದರು.

ಕೆಲವು ಜನರು ಶ್ರೀಮಂತಿಕೆಯಿಂದ ಜೀವನ ಸಾಗಿಸುತ್ತಿದ್ದು ಯಾವ ಕಷ್ಟವಿಲ್ಲವೆಂದರೂ, ಬಾಬಾರವರ ಆಶ್ರಯಿಸಿ ಬರುತ್ತಿದ್ದರು. ಮಾನಸಿಕವಾದ ಚಿಂತೆ, ಹೃದಯ ಭಾರ, ಯಾವ ವಿಚಾರದಲ್ಲೂ ಆಸಕ್ತಿಯಿಲ್ಲ. ಮೇಲಾಗಿ ಎಲ್ಲ ಇದ್ದು ಏನು ಇಲ್ಲವೆಂದು ಮನಸ್ಸಿಗೆ ಅನಿಸುತ್ತದೆಂದು ಪರಿಹಾರ ನೀಡಿ ಎಂದು ಬಾಬಾ ಅವರಲ್ಲಿಗೆ ಬರುತ್ತಿದ್ದರು. ಬಾಬಾ ಅವರು ಇದಕ್ಕೆ ಸರಿಯಾದ ಔಷಧಿಯನ್ನು ಕೊಡುತ್ತಿದ್ದರೆ, ಪಾರಮಾರ್ಥಿಕವಾದ ಅನುಭವಗಳನ್ನು ಹೇಳುತ್ತ ಇವರ ಮನದಲ್ಲಿರುವ ಸಮಸ್ಯೆಯು ಕೆಲ ದಿನಗಳಲ್ಲಿಯೇ ಸಂಪೂರ್ಣವಾಗಿ ಮಾಯವಾಗುವಂತೆ ಮಾಡುತ್ತಿದ್ದರು. ಈ ಮಹಿಮೆಯನ್ನು ಕೇಳಿ ಅನೇಕ ಜನರು ಲೋಲಂಗರ್ ಬಾಬಾ ಅವರಿಗೆ ನಮಸ್ಕರಿಸಿ ಶರಣಾಗುತ್ತಿದ್ದರು.

ಲೋಲಂಗರ್ ಬಾಬಾರವರ ಕೀರ್ತಿ ಬೆಳೆದಂತೆಲ್ಲ ಉಜ್ಜನಿ ಗ್ರಾಮವಲ್ಲದೆ ಅಕ್ಕಪಕ್ಕದ ಊರಿನ ಜನರೆಲ್ಲ ಬರಲು ಪ್ರಾರಂಭಿಸಿದರು. ಅನೇಕರು ತಮ್ಮ ಕರ್ಮ ನಿವಾರಣೆ ಮಾಡಿಕೊಳ್ಳಲು ತಮಗಂಟಿರುವ ಕಷ್ಟವೆಂಬ ದಾರಿದ್ರ್ಯವನ್ನು ಪರಿಹರಿಸಿಕೊಳ್ಳಲು ಲೋಲಂಗರ್ ಬಾಬಾರವರಲ್ಲಿಗೆ ಬರಲು ಪ್ರಾರಂಭಿಸಿದರು. ಜನರು ತಮ್ಮ ಕಷ್ಟವನ್ನು ಹೊತ್ತು ಬರುವವರ ಸಂಖ್ಯೆಯೇ ಹೆಚ್ಚಾಯಿತು. ಬಂದವರೆಲ್ಲರೂ ಒಳಿತನ್ನು ಕಂಡುಕೊಂಡರು. ಲೋಲಂಗರ್ ಬಾಬಾರವರಿಗೆ ಶರಣು ಹೋಗಿ ಭಕ್ತರಾದರು. ತಾವು ಆರಾಧಿಸುವ ದೇವರಾಗಿ ಮಾಡಿಕೊಂಡು ನಿತ್ಯ ತಮ್ಮ ಪೂಜೆಯಲ್ಲಿ ಇವರನ್ನು ಸೇರಿಸಿಕೊಂಡು ಪೂಜಿಸಲು ಪ್ರಾರಂಭಿಸಿದರು.

ಬರುವ ಭಕ್ತರಲ್ಲಿ ಕೆಲವರಿಗೆ ಮಕ್ಕಳಿರಲಿಲ್ಲ. ಎಷ್ಟು ವೈದ್ಯ ತಪಾಸಣೆಯಾದರೂ ಪ್ರಯೋಜನ ವಾಗಿರಲಿಲ್ಲ ಅವರು ಲೋಲಂಗರ್ ಬಾಬಾ ಅವರಲ್ಲಿಗೆ ಬಂದು ತಮ್ಮ ತೊಂದರೆ ನೋವನ್ನು ಹೇಳಿಕೊಂಡು ತಮ್ಮ ಮನೆಯಲ್ಲಿ ತೊಟ್ಟಿಲನ್ನು ತೂಗುವಂತೆ ಮಾಡೆಂದು ಕೇಳಿದರು. ಪರಮಾತ್ಮನನ್ನು ನೆನೆದು ಅವರ ಆಶೀರ್ವಾದ ನಿಮ್ಮ ಮೇಲಿದೆ ಚಿಂತಿಸದಿರಿ ಎಂದು ನಿಂಬೆ ಹಣ್ಣುಗಳನ್ನು

ಅವರ ಉಡಿಯಲ್ಲಿ ಹಾಕಿದರು. ಆ ಹೆಂಗಸರು ಅದನ್ನು ಮನೆಯಲ್ಲಿಟ್ಟು ಲೋಲಂಗರ್ ಬಾಬಾ ಅವರನ್ನು ನೆನೆದು ಪೂಜಿಸುತ್ತ ಕೆಲ ದಿನಗಳು ಕಳೆಯುವಷ್ಟರಲ್ಲಿಯೇ ಮಕ್ಕಳಿಲ್ಲದವರಿಗೆ ಮಗು ಬರುವುದೆಂಬ ಶುಭ ಸೂಚನೆ ಸಿಕ್ಕಿತು. ಇದರಿಂದ ಅವರು ಪ್ರಪಂಚದಲ್ಲಿ ಯಾರಿಗಿಲ್ಲದ ಸಂತೋಷ ತಮಗೆ ಸಿಕ್ಕಿದೆ ಎನ್ನುವಷ್ಟರಮಟ್ಟಿಗೆ ಸಂತೋಷಪಟ್ಟರು. ಇವರ ಕೀರ್ತಿಯನ್ನು ತಮಗೆ ಪರಿಚಯವಿರುವಷ್ಟು ಊರುಗಳಿಗೆ ಮುಟ್ಟುವಂತೆ ಪ್ರಚಾರ ಮಾಡಿದರು.

**ಮಕ್ದುಂ ಜಾನಿಬಾಬಾ**

ಬಳ್ಳಾರಿ ಜಿಲ್ಲೆಯಲ್ಲಿರುವ ಮುಕ್ದುಂ ಜಾನಿಬಾಬಾರವರು ಭಾರತಕ್ಕೆ ಬಂದದ್ದು ಇರಾಕ್‌ನಿಂದ. ದೇಶವೆಲ್ಲ ಸುತ್ತಿ ಬಳ್ಳಾರಿಗೆ ಬಂದಾಗ ಈ ಪ್ರದೇಶವು ಇವರಿಗೆ ಇಷ್ಟವಾಗಿ ಇಲ್ಲಿಯೇ ನೆಲೆಸಿದರು. ಊರಿನ ಹೊರಗಿನ ಪ್ರದೇಶವು ತುಂಬ ವಿಶಾಲವಾಗಿ ಪ್ರಶಾಂತವಾಗಿತ್ತು. ಈ ಸ್ಥಳ ಯೋಗ, ಧ್ಯಾನ ಮಾಡಲು ಸೂಕ್ತವಾಗಿರುವುದೆಂದು ಮುಕ್ದುಂ ಜಾನಿಬಾಬಾ ಅವರು ಆ ಜಾಗದಲ್ಲಿ ನೆಲೆಸಿದರು. ಅವರು ನೆಲೆಸಿದಾಗ ಬಳ್ಳಾರಿ ಜಿಲ್ಲೆಯಲ್ಲಿ ಬಿಸಿಲು ಬಣಗುಡುತ್ತಿತ್ತು. ಇಲ್ಲಿಯ ಜನರು ಈ ಬಿಸಿಲಿನ ತಾಪಮಾನವನ್ನು ಮೈಗೆ ಒಗ್ಗಿಸಿಕೊಂಡು ತಮ್ಮ ತಮ್ಮ ಕೆಲಸಗಳಿಗೆ ಓಡಾಡಿಕೊಂಡು ಜೀವನ ನಡೆಸಿಕೊಂಡಿದ್ದರು. ಬಾಬಾರವರು ತಂಗಿರುವ ಪ್ರದೇಶದ ಸುತ್ತ ಮುತ್ತ ಕೂಲಿ ಕೆಲಸ ಮಾಡಿಕೊಂಡು ಓಡಾಡುತ್ತಿದ್ದ ಜನರು ಆಗೊಮ್ಮೆ, ಈಗೊಮ್ಮೆ ಬಾಬಾ ಅವರ ಕಡೆ ನೋಡಿಕೊಂಡು ಹಾಗೆ ಹೋಗುತ್ತಿದ್ದರು. ಯಾರೋ ದಾರಿತಪ್ಪಿ ಬಂದಿರಬಹುದು ಒಂದೆರಡು ದಿನವಿದ್ದು ಹೋಗಬಹುದೆಂದುಕೊಂಡಿದ್ದರು. ದಿನ ಕಳೆದಂತೆ ಬಾಬಾ ಅಲ್ಲಿಯೇ ಗಟ್ಟಿಯಾಗಿ ನಿಂತಿರುವುದನ್ನು ಕಂಡರೂ ಹಾಗೆ ಸುಮ್ಮನಿದ್ದರು.

ದಿನ ಕಳೆದಂತೆ ಮಕ್ದುಂ ಜಾನಿಬಾಬಾರವರು ತಂಗಿದ್ದ ಪ್ರದೇಶದ ಅಕ್ಕಪಕ್ಕದಲ್ಲಿ ಕೆಲಸ ಮಾಡಿಕೊಂಡಿದ್ದ ಕೆಲಸಗಾರರು ಬಿಸಿಲಿನ ಬೇಗೆಯಿಂದ ದಣಿವಾರಿಸಿಕೊಳ್ಳಲು ಬಾಬಾ ಇರುವ ಕಡೆ ಬರುತ್ತಿದ್ದರು. ಊರೆಲ್ಲ ಬಿಸಿಲಿನಿಂದ ಧಗಧಗ ಎನ್ನುತ್ತಿದ್ದರೂ ಬಾಬಾ ಇರುವ ಕಡೆ ತಂಪಿರುವುದನ್ನು ಕಂಡು ಅಲ್ಲಿಗೆ ಬಂದು ಕೆಲವರು ನಿಟ್ಟುಸಿರುಬಿಟ್ಟು ಹಾಗೆ ನಿದ್ದೆಗೆ ಜಾರುತ್ತಿದ್ದರು. ಸ್ವಲ್ಪ ಹೊತ್ತಿನ ನಂತರ ಜನರೆಲ್ಲ ಮಲಗಿದ್ದವರು ಎದ್ದು ಈ ಜಾಗದಲ್ಲಿ ಎಷ್ಟು ತಂಪಿದೆ ಎನ್ನುವಷ್ಟರಲ್ಲಿ ಮೌನವಾಗಿ ಎದುರಿಗೆ ಕುಳಿತ ಬಾಬಾರವರು ಕಂಡರು. ಅವರಿಗೆ ಕೈ ಮುಗಿದು ಅವರೊಂದಿಗೆ ಮಾತನಾಡಿಸುತ್ತಿದ್ದರು. ಬಾಬಾ ಹೆಚ್ಚಾಗಿ ಮಾತನಾಡದೆ ನಗೆಯಲ್ಲಿಯೇ ಅವರಿಗೆ ಉತ್ತರವನ್ನು ಕೊಡುತ್ತಿದ್ದರು. ಹೀಗೆ ವಿಷಯ ತಿಳಿದು ಅಲ್ಲಿಗೆ ಬಂದು ತಂಗುವವರ, ದಣಿವಾರಿಸಿಕೊಳ್ಳುವವರ ಸಂಖ್ಯೆ ಹೆಚ್ಚಾಯಿತು. ಬಿಸಿಲಿನ ತಾಪಮಾನಕ್ಕೆ ಒಬ್ಬ ವ್ಯಕ್ತಿ ಕೂಲಿ ಕೆಲಸ ಮಾಡುತ್ತಿರುವ ವೇಳೆ ತಲೆಸುತ್ತಿ ಬಿದ್ದು ಪ್ರಜ್ಞೆಯಿರಲಿಲ್ಲ. ಎಲ್ಲರೂ ಸೇರಿ ಅವರನ್ನು ಈ ಬಾಬಾಯಿರುವ ಸ್ಥಳಕ್ಕೆ ಎತ್ತಿಕೊಂಡು ಬಂದು ಹಾಕಿದರು. ವಿಷಯ ತಿಳಿದ ಬಾಬಾ ಮೊದಲೇ ಮರಭೂಮಿಯಂತಿದ್ದ ಈ ಪ್ರದೇಶದಲ್ಲಿನ ಜನ ಬಡತನದಲ್ಲಿ ನರಳುತ್ತಿದ್ದಾರೆ. ಅಂಥದರಲ್ಲಿ ಈ

ರೀತಿಯ ಘಟನೆ ಘೋರವೆನಿಸಿತು. ಬಾಬಾ ಬಂದು ಆ ವ್ಯಕ್ತಿಯ ತಲೆ ಸವರಿ ಮುಖಕ್ಕೆ ನೀರು ಹಾಕಿ ಎಬ್ಬಿಸಿ ಕುಡಿಯಲು ನೀರು ಕೊಟ್ಟರು. ಆ ವ್ಯಕ್ತಿ ತಕ್ಷಣವೇ ಎದ್ದು ನಿಂತು ಎಲ್ಲರಂತೆ ಓಡಾಡಿ ನಾನು ಆರಾಮವಾಗಿದ್ದೇನೆಂದು ಸಂತೋಷಪಟ್ಟನು. ಇದನ್ನು ಕಂಡು ಅಲ್ಲಿದ್ದ ಜನರು ಬಾಬಾ ಅವರನ್ನು ಮಹಾನ್ ವ್ಯಕ್ತಿ ಸಾಮಾನ್ಯದವರಂತು ಅಲ್ಲವೆಂದು ತಿಳಿದರು. ಅವರೊಬ್ಬ ದೈವಪುರುಷನಾಗಿ ಕಂಡನು. ಎಲ್ಲರೂ ಬಾಬಾಗೆ ಕೈ ಮುಗಿದು ಬಾಬಾ ಇದು ನಿಮ್ಮ ಅನುಗ್ರಹ. ನೀವಿರುವ ಈ ಜಾಗ ಇಷ್ಟೊಂದು ತಂಪಾಗಿರುವುದೆಂದರೆ ಇದು ದೇವರಿರುವ ದೇವಸ್ಥಾನವೆಂದರ್ಥ; ಇಲ್ಲಿರುವ ಈ ವ್ಯಕ್ತಿ ದೇವರೆಂದು ಎಲ್ಲರೂ ಮಕ್ದುಂ ಜಾನಿ ಬಾಬಾರವರಿಗೆ ಕೈ ಮುಗಿದರು.

ಮಕ್ದುಂ ಜಾನಿ ಬಾಬಾರವರಲ್ಲಿಗೆ ಬರುವ ಭಕ್ತರ ಸಂಖ್ಯೆ ವೃದ್ಧಿಯಾಗತೊಡಗಿತು. ಇವರನ್ನು ದೇವರೆಂದು ನಂಬಿ ಭಕ್ತಿ ಗೌರವದಿಂದ ವಂದಿಸಿ ಅನುಗ್ರಹ - ಆಶೀರ್ವಾದ ಪಡೆಯಲು ಅನೇಕ ಸುತ್ತಮುತ್ತಲಿನ ಊರುಗಳಿಂದ ಜನರು ಬರಲು ಪ್ರಾರಂಭಿಸಿದರು. ಬಾಬಾರವರ ಬಳಿ ಬಂದ ಭಕ್ತ ಜನಸಮೂಹದೊಂದಿಗೆ ಮನತುಂಬಿ ಮಾತನಾಡಿ ಪ್ರೀತಿಯಿಂದ ಅವರೊಂದಿಗೆ ಬೆರೆಯುತ್ತಿದ್ದರು. ಬಾಬಾರವರು ಎಲ್ಲರೊಂದಿಗೆ ಇಷ್ಟೊಂದು ಸರಳವಾಗಿ ಬೆರೆಯುವುದನ್ನು ಕಂಡು ಜನರು ಬೆರಗಾಗಿ ನೋಡುತ್ತಿದ್ದರು. ಯಾರೊಂದಿಗೂ ಭೇದಭಾವ ಮಾಡದೆ ಯಾವುದೇ ಜಾತಿ - ಧರ್ಮವೆನ್ನದೆ ಎಲ್ಲರನ್ನು ಪ್ರೀತಿಯಿಂದ ಕಾಣುವ, ಮಾತನಾಡುವ ಇವರ ಸರಳತೆಯನ್ನು ಭಕ್ತರು ಹೊಗಳುತ್ತಿದ್ದರು. ಬಾಬಾ ಅವರಿಗೆ ಈ ವಿನಯತೆಯ ಗುಣವಿರುವುದನ್ನು ಕಂಡು ಕೆಲವರು ತಾವು ಅವರಂತೆ ಇರಬೇಕೆಂದು ಬಯಸುತ್ತಿದ್ದರು. ಬಾಬಾ ಅವರಿಗೆ ಒಂದು ದಿನವೂ ಕೋಪ ಬಂದದ್ದನ್ನು ಕಾಣಲಿಲ್ಲ. ಸಹನಾ ಮೂರ್ತಿ ಇವರು ಅವರ ಮನದ ತುಂಬೆಲ್ಲ ಬರೀ ಪ್ರೀತಿಯೇ ತುಂಬಿದೆ. ಅಸೂಯೆ, ದ್ವೇಷವೆಂಬುದು ಇಲ್ಲವೆ ಇಲ್ಲವೆಂದು ಭಕ್ತರು ಆಶ್ಚರ್ಯದಿಂದ ಮಾತನಾಡಿಕೊಳ್ಳುತ್ತಿದ್ದರು.

ಮಕ್ದುಂ ಜಾನಿ ಬಾಬಾ ಮನದ ಮಾತುಗಳನ್ನು ಅರಿತು ಅವರೊಂದಿಗೆ ಬೆರೆತು ತನ್ನ ಸುತ್ತ ಭಕ್ತರನ್ನು ಕೂಡಿಸಿಕೊಂಡು ಅನುಭಾವದ ನುಡಿಯಿಂದ ಬೋಧನೆಯನ್ನು ಮಾಡುತ್ತಿದ್ದರು. ನಾನೊಬ್ಬ ಪರಮಾತ್ಮನ ಮಗ ಅದರಲ್ಲೂ ಪರಮಾತ್ಮನಿಗೆ ತೀರ ಹತ್ತಿರವಾಗಿರುವ ಅವರ ಸಾಮಿಪ್ಯದಲ್ಲಿರುವ ಸದಾ ಅವರ ಅನುಗ್ರಹದಲ್ಲಿರುವವ. ಅದನ್ನು ಪಡೆದುಕೊಳ್ಳಲು ನಮ್ಮ ದೇಹವನ್ನು ಮಾತ್ರ ಶುದ್ಧ ಮಾಡಿಕೊಳ್ಳದೆ ಮನಸ್ಸನ್ನು ಶುದ್ಧಮಾಡಿಕೊಳ್ಳಬೇಕು. ಯಾವತ್ತಿಗೂ ಮನಸ್ಸನ್ನು ವಿಕೃತವಾಗಿ ಹರಿಬಿಡದೆ ಪರಿಶುದ್ಧವಾಗಿಟ್ಟುಕೊಳ್ಳಬೇಕು. ಅಂಥ ಮನಸ್ಸಿನಲ್ಲಿ ದ್ವೇಷ, ಕೋಪ, ಅಹಂಕಾರ, ನಾನು ನನ್ನದೆನ್ನುವುದನ್ನು ತೊರೆಯಬೇಕು. ಅದಕ್ಕೆ ಮನಸ್ಸಿನಲ್ಲಿ ಅವಕಾಶ ಮಾಡಿಕೊಡಬಾರದು. ಯಾವಾಗಲೂ ಅಂತರಾತ್ಮದ ದೃಷ್ಟಿಯಲ್ಲಿಯೇ ಪ್ರಪಂಚವನ್ನು ನೋಡಬೇಕು. ಅಂತರಾತ್ಮ ಪರಿಶುದ್ಧತೆಯಿಂದ ನಾವು ಭಗವಂತನ ಕಾಣಲು ಸಾಧ್ಯ. ನಮ್ಮ ಅಂತರಾತ್ಮವನ್ನು

ಪರಿಶುದ್ಧವಾಗಿಟ್ಟುಕೊಂಡಾಗ ಮಾತ್ರ ಪರಮಾತ್ಮನ ಪ್ರೀತಿ ಸಿಗುತ್ತದೆ. ಪರಮಾತ್ಮನ ಅನುಗ್ರಹ ಸಿಕ್ಕಾಗ ನಮ್ಮಲ್ಲಿ ದೈಹಿಕವಾದ ಬಯಕೆಗಳು, ಕೋಪ, ದ್ವೇಷ, ಅಹಂಕಾರಗಳಾವುವೂ ನಮ್ಮಲ್ಲಿ ರುವುದಿಲ್ಲವೆಂಬ ಅನುಭಾವದ ಮಾತುಗಳಿಂದ ಭಕ್ತರಿಗೆ ಬೋಧನೆಯನ್ನು ಮಾಡುತ್ತಿದ್ದರು. ಬಾಬಾ ಅವರ ಬೋಧನೆಯಿಂದ ಭಕ್ತರು ಜ್ಞಾನದ ಅರಿವೇನೆಂಬುದನ್ನು ಅರ್ಥ ಮಾಡಿ ಕೊಳ್ಳುತ್ತಿದ್ದರು. ಪರಮಾತ್ಮನ ಮೆಚ್ಚುಗೆಗೆ ಪಾತ್ರರಾಗಲು ಏನು ಮಾಡಬೇಕು! ಹೇಗೆ ಜೀವಿಸಬೇಕೆಂಬುದರ ಅರಿವನ್ನು ಅವರು ಪಡೆದುಕೊಳ್ಳುತ್ತಿದ್ದರು.

ಮಕ್ದುಂ ಜಾನಿಬಾಬಾರವರ ಈ ಅನುಭಾವ ಮಾರ್ಗದ ಬೋಧನೆಯನ್ನು ಭಕ್ತರು ಸಂತೋಷದಿಂದ ಆಲಿಸುತ್ತಿದ್ದರು. ಬಾಬಾ ಅವರು ಪರಮಾತ್ಮನನ್ನು ಕುರಿತು ಪ್ರವಚನವನ್ನು ಕೊಡುತ್ತಿದ್ದರು. ಮನುಜನ ಮನಸ್ಸು ಪರಮಾತ್ಮನನ್ನು ಕಾಣಲು ಬಯಸಿದರೆ ಸದಾ ಅವನನ್ನೇ ನೆನೆಯುತ್ತಿರಬೇಕು. ಮನಸ್ಸಿನ ತುಂಬ ಪ್ರೀತಿಯನ್ನು ತುಂಬಿಕೊಂಡಿರಬೇಕು. ಭಯ - ಆತಂಕಗಳಿಗೆ ಜಾಗವಿರಬಾರದು. ಸದಾ ಭಗವಂತನನ್ನು ಧ್ಯಾನ ಮಾಡುತ್ತಿರಬೇಕು. ದೇಹ ಮನಸ್ಸುಗಳು ಯೋಗ ಮತ್ತು ಆಧ್ಯಾತ್ಮದಲ್ಲಿ ಲೀನವಾಗಿರಬೇಕು. ಆಗ ಪರಮಾತ್ಮನ ಅನುಗ್ರಹ - ಆಶೀರ್ವಾದ ಸಿಕ್ಕು ಅವನ ಸಾಮಿಪ್ಯವನ್ನು ಪಡೆಯುವ ಸಮಯವು ಒದಗಿ ಬರುತ್ತದೆಂಬುದನ್ನು ಮಕ್ದುಂ ಜಾನಿ ಬಾಬಾರವರು ಭಕ್ತ ಜನರಿಗೆ ಪ್ರವಚನವನ್ನು ಕೊಡುತ್ತಲೇ ಪರಮಾತ್ಮನ ಆಶೀರ್ವಾದವನ್ನು ಕೊಡಿಸುತ್ತಿದ್ದರು. ಒಬ್ಬ ಅನುಭಾವಿಗೆ ಅನುಭಾವಿಕವಾದ ಯೋಚನೆಗಳಿರುತ್ತವೆಂಬುದನ್ನು ಮಕ್ದುಂ ಜಾನಿ ಬಾಬಾರವರು ತೋರಿಸಿಕೊಟ್ಟಿದ್ದಾರೆ. ಈ ಆಧ್ಯಾತ್ಮದಿಂದ ಅನುಭಾವದ ಕಡೆಗೆ ಮಾರ್ಗವನ್ನು ಪಡೆಯುವ ರೀತಿಯನ್ನು ತಿಳಿಸಿ ಒಬ್ಬ ವ್ಯಕ್ತಿ ತನ್ನನ್ನು ತಾನು ಹೇಗೆ ಪರಿಶುದ್ಧೀಕರಿಸಿಕೊಳ್ಳು ವುದೆಂಬುದನ್ನು ಬಾಬಾ ತೋರಿಸಿಕೊಟ್ಟರು. ಭಕ್ತಜನರು ಇದರಿಂದ ಬೆಳಕಿನೆಡೆಗೆ ಪಯಣ ಬೆಳೆಸಲು ಸಿದ್ಧರಾದರು.

**ಮಕ್ದುಂ ಜಾನಿ ಬಾಬಾರವರು ತೋರಿದ ಮಹಿಮೆಗಳು**

ಬಾಬಾರವರ ಮಹಿಮೆಯನ್ನು ತಿಳಿದು ಬಳ್ಳಾರಿ ಜಿಲ್ಲೆಯ ಪಕ್ಕದೂರಿನಿಂದ ಒಬ್ಬ ವ್ಯಕ್ತಿ ಬಂದು ಬಾಬಾರವರ ಪಾದಗಳಿಗೆ ನಮಸ್ಕರಿಸಿ ಕುಳಿತುಕೊಂಡ. ಆ ವ್ಯಕ್ತಿ ಸ್ವಲ್ಪ ಸಮಯದ ನಂತರ ಬಾಬಾರವರ ಬಳಿ ತನ್ನ ಸಮಸ್ಯೆಯನ್ನು ಹೇಳಿಕೊಂಡ. ತನಗೆ ಹುಟ್ಟಿನಿಂದಲೇ ಎರಡು ಕಣುಗಳಿಲ್ಲ ಅವುಗಳನ್ನು ಕೊಡಿ; ನನಗೂ ಇತರರಂತೆ ಎರಡು ಕಣ್ಣುಗಳಿಂದ ಪ್ರಪಂಚವನ್ನು ನೋಡಬೇಕೆಂದು ಕೇಳಿಕೊಂಡ. ಬಾಬಾ ಅವನ ಸಮಸ್ಯೆಗೆ ಸ್ಪಂದಿಸಿ ಪರಮಾತ್ಮನನ್ನು ನೆನೆಯುತ್ತ ಅವನ ಕಣ್ಣುಗಳನ್ನು ತನ್ನ ಕರದಿಂದ ಸವರಿದ ಕೆಲವೇ ಹೊತ್ತಿನಲ್ಲಿ ಆ ಕುರುಡನಿಗೆರಡು ಕಣ್ಣುಗಳು ಕಾಣಿಸತೊಡಗಿದವು. ಆ ಕುರುಡನಿಗೆ ಕಣ್ಣು ಬಂದಿರುವುದನ್ನು ಕಂಡು ಅಲ್ಲಿದ್ದ ಜನರೆಲ್ಲ ಬಾಬಾ ಮನುಷ್ಯ ಜನ್ಮ ಹೊತ್ತು ಈ ಭೂಮಿ ಮೇಲೆ ಬಂದ ಭಗವಂತ ನೀನೆಂದು ಎಲ್ಲರೂ ವಂದಿಸಿದರು. ಕಣ್ಣು ಬಂದ ಕುರುಡ ನನ್ನ ಕಣ್ಣುಗಳಿಂದ ಪ್ರಪಂಚವನ್ನು ನೋಡುವಂತೆ

ಮಾಡಿದ ನಿನಗೆ ನಾನೆಂದಿಗೂ ನಿನ್ನ ಮಗುವಾಗಿ ಶಿಷ್ಯನಾಗಿ ಸದಾ ನಿನ್ನ ಜೊತೆಯಲ್ಲಿಯೇ ಇರಲು ಬಯಸುವನೆಂದು ಬಾಬಾ ಅವರಿಗೆ ವಂದಿಸಿದ.

ಮಳೆಯಿಲ್ಲದೆ ಮರುಭೂಮಿಯಂತಿರುವ ಬಳ್ಳಾರಿಯು ಬಿಸಿಲಿನಿಂದ ಧಗಧಗಿಸುತ್ತಿತ್ತು. ತಂಪು ಎಂದರೇನೆಂದು ಜನ ಕೇಳುವಂತಾಗಿತ್ತು. ಅಂಥ ಬಿಸಿಲಿನ ತಾಪಕ್ಕೆ ಜನರು ತತ್ತರಿಸಿದ್ದರು. ಆ ತಾಪದ ಬೇಗೆ ತಾಳದೆ ಊರಿನ ಜನರೆಲ್ಲ ಬಾಬಾ ಬಳಿ ಬಂದು ಬಾಬಾ ನಮ್ಮೂರಿಗೆ ಮಳೆಯನ್ನು ತಂದು ಊರನ್ನು ತಂಪುಗೊಳಿಸು. ಊರಿನಲ್ಲಿರುವ ಕೆಲವು ಸ್ಥಳಗಳಲ್ಲಿ ಕುಡಿಯಲು ನೀರಿಲ್ಲದೆ ಜನರು ತತ್ತರಿಸುತ್ತಿದ್ದಾರೆಂದು ಜನರು ಮೊರೆಯಿಟ್ಟರು. ಬಾಬಾ ಆ ಊರಿನ ಸಮಸ್ಯೆಯನ್ನು ದಿನೇ ದಿನೇ ನೋಡುತ್ತಲಿದ್ದ ಜನರ ಕಷ್ಟಗಳು ಕಣ್ಮುಂದೆ ಕಾಣಿಸುತ್ತಿದ್ದವು. ಮಕ್ದುಂ ಜಾನಿ ಬಾಬಾ ಜನರ ಸಮಸ್ಯೆಯನ್ನು ಆಲಿಸಿ ಭಗವಂತನನ್ನು ಧ್ಯಾನಿಸಿ ಪ್ರಾರ್ಥಿಸಿದ ಸಂಜೆಯ ಒಳಗಾಗಿ ಮಳೆ ಬಂದಿತು; ಊರೆಲ್ಲ ತಂಪಾಗಿ ಬಿಸಿಲಿನ ತಾಪದಿಂದ ಬೆಂದ ಊರಿನ ಜನರು ಆ ತಂಪಿನ ವಾತಾವರಣದಿಂದ ಮನತುಂಬಿ ಆನಂದಿಸಿದರು.

ಮದುವೆಯಾಗಿ ಹತ್ತು ವರ್ಷಗಳಾಗಿದ್ದರೂ ಮಕ್ಕಳಾಗಿರಲಿಲ್ಲ. ಅವಳಿಗೆ ಅವಳ ಅತ್ತೆಯ ಮನೆಯವರು ಹಿಂಸೆಯನ್ನು ಕೊಡಲಾರಂಭಿಸಿದ್ದರು. ಮಕ್ಕಳಿಲ್ಲದ ಬಂಜೆ ನೀನು ಈ ಭೂಮಿಗೆ ಭಾರ. ಎಂಥವಳನ್ನು ಮನೆಗೆ ತಂದುಕೊಂಡು ತಪ್ಪು ಮಾಡಿದಿವಿ ಎಂದು ಪ್ರತಿದಿನ ಸೊಸೆಯನ್ನು ನಿಂದಿಸುತ್ತಿದ್ದರು; ಒಮ್ಮೊಮ್ಮೆ ಹೊಡೆಯುತ್ತಿದ್ದರು. ಈ ಕಷ್ಟ ತಾಳಲಾಗದೆ ಆ ಮಹಿಳೆ ಸಾಯಬೇಕೆಂದು ನಿರ್ಧರಿಸಿದಳು. ಆದರೂ ಮನದಲ್ಲಿ ಒಂದು ಕಡೆ ಬದುಕುವ ಆಸೆ. ಮಕ್ಕಳಿಲ್ಲದ ಕೊರಗು ಒಂದು ಕಡೆ, ಅವಳಿರುವ ಗ್ರಾಮದಲ್ಲಿ ಕೆಲವರು ಮಕ್ದುಂ ಜಾನಿ ಬಾಬಾ ಅವರ ಅನುಗ್ರಹದಿಂದ ಒಳಿತನ್ನು ಕಂಡುಕೊಂಡಿದ್ದನ್ನು ಇವಳಿಗೆ ತಿಳಿಸಿದ್ದರು. ಇವಳಿಗೂ ಮನಸ್ಸಾಯಿತು. ಬಾಬಾ ಅವರನ್ನು ಭೇಟಿ ಮಾಡಿ ತನ್ನ ಸಮಸ್ಯೆಯನ್ನು ಪರಿಹರಿಸಿಕೊಳ್ಳಲು ಬಾಬಾರವರನ್ನು ಭೇಟಿಯಾದಳು. ಅವರ ಬಳಿ ತನ್ನ ಸಮಸ್ಯೆಯನ್ನು ಹೇಳಿಕೊಂಡಳು. ಬಂದ ಭಕ್ತರಿಗೆಲ್ಲ ಸಮಸ್ಯೆಗಳ ಮಹಾಪೂರವೇ ತುಂಬಿತ್ತು. ಎಲ್ಲರಂತೆ ಇವಳಿಗೂ ಸಮಸ್ಯೆ ಇರುವುದನ್ನು ತಿಳಿದು ಬಾಬಾ ಅವರು ಇವಳ ಕಣ್ಣೀರೊರಸಿ ನಿನಗೆ ಒಂದು ತಿಂಗಳಲ್ಲಿ ತಾಯಿಯಾಗುವ ಸೂಚನೆ ಸಿಗುವುದು. ಚಿಂತೆ ಪಡದಿರು; ಪ್ರತಿನಿತ್ಯ ಭಗವಂತನನ್ನು ನೆನೆದು ಕೆಲ ಹೊತ್ತು ಕಣ್ಣು ಮುಚ್ಚಿ ಪ್ರಾರ್ಥಿಸೆಂದು ಅವಳಿಗೆ ಆಶೀರ್ವಾದವನ್ನು ಮಾಡಿದರು. ಸಂತೋಷದಿಂದ ಆ ಮಹಿಳೆ ತನ್ನೂರಿಗೆ ಹೋದಳು. ಒಂದು ತಿಂಗಳಲ್ಲಿ ಅವಳಿಗೆ ತಾಯಿಯಾಗುವ ಶುಭಸುದ್ದಿ ದೊರಕಿತು. ಆಗ ಅವಳ ಸಂತೋಷಕ್ಕೆ ಮಿತಿಯೇ ಇಲ್ಲ. ಆನಂದದಿಂದ ತಾನು ತಾಯಿ ಯಾಗುತ್ತಿರುವ ವಿಷಯವನ್ನು ಬಾಬಾರವರ ಆಶೀರ್ವಾದದ ಫಲವೆಂದು ಎಲ್ಲರಲ್ಲಿ ಹೇಳಿಕೊಂಡಳು. ವಿಷಯ ತಿಳಿದ ಜನರೆಲ್ಲ ಬಾಬಾ ಅವರದು ಎಂಥ ಮಹಿಮೆ ಇವರು ಭೂಮಿಯ ಮೇಲಿರುವ ದೇವರು ದೇವಮಾನವರೆಂದು ಕೊಂಡಾಡಿದರು. ಬಾಬಾ ಅವರ ಮಹಿಮೆಯನ್ನು

ತಿಳಿದ ಸುತ್ತಮುತ್ತಲಿನ ಊರಿನ ಜನರೆಲ್ಲ ಬಂದು ಬಾಬಾರವರ ಅನುಗ್ರಹವನ್ನು ಪಡೆಯುತ್ತಿದ್ದರು. ದಿನ ಕಳೆದಂತೆ ಬಾಬಾ ಅವರ ಬಳಿ ಬರುವ ಭಕ್ತರ ಸಂಖ್ಯೆಗೆ ಮಿತಿಯೇ ಇಲ್ಲದಂತಾಯಿತು.

ಮಕ್ದುಂ ಜಾನಿ ಬಾಬಾರವರು ಕಿವಿಯಿಲ್ಲದ ವ್ಯಕ್ತಿಗೆ ಕಿವಿಕೊಟ್ಟರು. ಕಾಲಿಲ್ಲದ ವ್ಯಕ್ತಿಗೆ ಕಾಲು ಬರುವಂತೆ ಮಾಡಿದರು. ಬಡತನದಲ್ಲಿ ಬೇಯುತ್ತಿದ್ದ ಬಳ್ಳಾರಿಯ ಒಂದು ಕುಟುಂಬದವರು ಉಸಿರಾಡಲಾಗದೆ ಸಾಯಲು ನಿರ್ಧರಿಸಿದ್ದರು. ಒಮ್ಮೆ ಬಾಬಾ ಅವರನ್ನು ಭೇಟಿಯಾಗಲು ಬಂದರು. ಇವರನ್ನು ಬಾಬಾ ಆಶೀರ್ವದಿಸಿ ಬಡತನದ ನಿವಾರಣೆಯನ್ನು ಮಾಡಿದರು. ಅಂದಿನಿಂದ ಆ ಕುಟುಂಬ ಶ್ರೀಮಂತಿಕೆಯ ಹಾದಿಯಲ್ಲಿಯೇ ಮುನ್ನಡೆಯಿತು. ಬಾಬಾ ಅವರು ಮಾಡಿದ ಮಹಿಮೆಗಳು ಅನೇಕ; ಮಹಿಮೆಯ ಅನುಗ್ರಹದಿಂದ ಅನೇಕರು ಒಳಿತನ್ನು ಕಂಡುಕೊಂಡಿದ್ದಾರೆ. ಬಾಬಾ ಅವರನ್ನು ನಂಬಿ ಬಂದ ಭಕ್ತರ ಬೇಡಿಕೆಗಳನ್ನೆಲ್ಲ ಈಡೇರಿಸಿದ್ದಾರೆ. ಬಾಬಾರವರು ದೂರದ ಊರುಗಳಿಂದ ಬಂದ ಭಕ್ತರಿಗೂ ಅವರ ಸಮಸ್ಯೆಯನ್ನು ಬಗೆಹರಿಸಿ ಅವರು ಸಂತೋಷದಿಂದ ತಮ್ಮ ಊರುಗಳಿಗೆ ಮರುಳುವಂತೆ ಮಾಡಿದ್ದಾರೆ.

ಬಾಬಾ ಅವರು ತಾವು ಪಡೆದ ಆಧ್ಯಾತ್ಮದ ಶಕ್ತಿಯಿಂದ ತನ್ನ ನಂಬಿ ಬಂದ ಮತ್ತು ಕಷ್ಟದಲ್ಲಿದ್ದ ಜನರಿಗೆ ಪರಿಹಾರವನ್ನು ಕೊಟ್ಟು ಅವರಿಗೆ ಒಳಿತನ್ನುಂಟುಮಾಡಿದ್ದಾರೆ. ಮುಕ್ದುಂ ಜಾನಿ ಬಾಬಾರವರು ಒಬ್ಬ ಅನುಭಾವಿ ಸೂಫಿ. ಈ ಅನುಭಾವಿಗಳ ಸ್ವರೂಪವೆಂದರೆ ತಾವು ಪಡೆದ ಶಕ್ತಿಯನ್ನು ತಮ್ಮ ಸ್ವಂತದ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳದೆ ಇತರರಿಗಾಗಿ ಉಪಯೋಗಿಸುವುದು.

ಮಕ್ದುಂ ಜಾನಿ ಬಾಬಾರವರು ತಮ್ಮಲ್ಲಿಗೆ ಬರುವ ಭಕ್ತರಿಗೆ ತಿಳಿಯದ ಜ್ಞಾನವನ್ನು ತಂಬುತ್ತಿದ್ದರು. ಬೆಳಕಿನಲ್ಲಿಯೂ ಅಂಧಕಾರದ ಜೀವನವನ್ನು ನಡೆಸುವ ಜನಸಾಮಾನ್ಯರಿಗೆ, ಭಕ್ತ ಜನಸಮೂಹಕ್ಕೆ ಬೆಳಕಿನ ಮಹತ್ವವನ್ನು ತಿಳಿಸಿಕೊಟ್ಟಿದ್ದಾರೆ. ಭೂಮಿಯ ಮೇಲಿನ ಕ್ಷಣದ ಸುಖ ಬಯಸದೆ ಶಾಶ್ವತ ಸುಖಕ್ಕಾಗಿ ಪರಮಾತ್ಮನಲ್ಲಿ ಮೊರೆಹೋಗಿ, ಅವನನ್ನು ಪ್ರಾರ್ಥಿಸಿ, ಈ ಪ್ರಪಂಚದ ಪ್ರತಿ ಕಣದಲ್ಲೂ ಪರಮಾತ್ಮನಿದ್ದಾನೆ. ಅವನಿಂದಲೇ ಪ್ರತಿ ವಸ್ತುವಿನ ಸೃಷ್ಟಿಯೆಂಬುದನ್ನು ತೋರಿಸಿಕೊಟ್ಟಿದ್ದಾರೆ. ಪರಮಾತ್ಮನಿಲ್ಲದೆ ಪ್ರಪಂಚವಿಲ್ಲ. ಸರ್ವವು ಆತನಿಂದಲೇ ಎಂಬುದನ್ನು ಮನವರಿಕೆ ಮಾಡಿದ್ದಾರೆ. ಇವರ ನುಡಿಗಳನ್ನು ಕೇಳಿದ ಪ್ರತಿಯೊಬ್ಬ ಭಕ್ತನು ಬಾಬಾನಲ್ಲಿ ಶರಣುಹೋದನು. ಕತ್ತಲಿನಿಂದ ಬೆಳಕಿನೆಡೆಗೆ ತಂದು ಪ್ರತಿಯೊಬ್ಬರಿಗೆ ದೇವರ ಸ್ವರೂಪವನ್ನು ತಿಳಿಸಿದ್ದಾರೆ. ಭಕ್ತರ ಮನದಲ್ಲಿ ನೆಲೆಸಿ ದೇವರಾಗಿ ಮನೆಯಲ್ಲಿ ಮನದಲ್ಲಿ ಬಾಬಾರವರನ್ನು ಪೂಜಿಸುತ್ತಿದ್ದಾರೆ.

**ಲಂಗರ್ ಶಾವಲಿ**

ಬಳ್ಳಾರಿ ಜಿಲ್ಲೆಯ ಕುಡಿತಿನಿ ಗ್ರಾಮದಲ್ಲಿರುವ ಸೂಫಿಯ ಹೆಸರು ಲಂಗರ್ ಶಾವಲಿ. ಇರಾಕ್‌ನಿಂದ ಇವರು ಭಾರತಕ್ಕೆ ಬಂದ ನಂತರ ದೇಶವೆಲ್ಲ ಸುತ್ತಿಕೊಂಡು ವಿಜಾಪುರಕ್ಕೆ

ಹೋದರು. ಅಲ್ಲಿ ಕೆಲ ದಿನಗಳ ಕಾಲ ನೆಲೆಸಿದ್ದರು. ಕೆಲವು ಕಡೆ ಸಂಚರಿಸಿಕೊಂಡು ಕೊನೆಯಲ್ಲಿ ನೆಲೆಸಿದ್ದು ಕುಡುತಿನಿಯಲ್ಲಿ. ಈ ಪ್ರದೇಶವು ಪ್ರಶಾಂತವಾಗಿ ಕಾಣಿಸಿಕೊಂಡಿರುವುದರಿಂದ ಕುಡಿತಿನಿಯಲ್ಲಿಯೇ ಇವರು ಗಟ್ಟಿಯಾಗಿ ನೆಲೆ ನಿಂತರು.

ಲಂಗರ್ ಶಾವಲಿ ಬಾಬಾರವರು ಕುಡುತಿನಿಯಲ್ಲಿ ನೆಲೆನಿಂತ ಮೇಲೆ ಇವರು ತಾವು ತಂಗಿರುವ ಪ್ರದೇಶದಲ್ಲಿ ಮೌನವಾಗಿ ಕುಳಿತ್ತಿದ್ದರು. ಯಾರು ಜೊತೆ ಸರಿಯಾಗಿ ಮಾತನಾಡುತ್ತಿರಲಿಲ್ಲ. ಅವರು ಬಂದಾಗ ಅಲ್ಲಿ ಹೆಚ್ಚಾಗಿ ಜನರು ಬಡತನದಲ್ಲಿ ನರಳುತ್ತಿದ್ದರು. ಅನೇಕ ಕಷ್ಟಗಳಲ್ಲಿ ಮುಳುಗಿದ್ದರು. ಊರೆಲ್ಲ ಬಣ ಬಣವಾಗಿ ಬಿಸಿಲಿನ ಬೇಗೆಯಿಂದ ಬೇಯುತ್ತಿತ್ತು. ಆ ಬಿಸಿಲಿನಲ್ಲಿಯೇ ಜನರು ಕಷ್ಟಪಟ್ಟು ಕೂಲಿಯನ್ನು ಮಾಡಿಕೊಂಡು ಜೀವಿಸುತ್ತಿದ್ದರು. ಜನರ ಮುಖಗಳಲ್ಲಿ ನಗುವು ಮರೆಯಾಗಿತ್ತು. ಸುಖಕ್ಕಿಂತ ಹೆಚ್ಚಾಗಿ ದುಃಖವೇ ಅವರ ಮುಖದಲ್ಲಿ ಆವರಿಸಿತ್ತು. ಇದನ್ನು ಕಂಡು ಲಂಗರ್ ಶಾವಲಿ ಬಾಬಾರವರು ಮನದಲ್ಲಿ ಅಂದುಕೊಂಡರು; ಏನಿದು ದುಸ್ಥರ, ಎಂಥ ವಿಪರ್ಯಾಸ, ಇಲ್ಲಿರುವ ಜನರ ಬದುಕು ಬರಡಾಗಿದೆ ಆದರೂ ಇವರಲ್ಲಿ ಬದುಕಿ ಬಾಳುವ ಛಲವಿರುವುದು ದೇವರು ಇವರಿಗೆ ಕೊಟ್ಟಿರುವ ಧೈರ್ಯವೆಂದುಕೊಳ್ಳಬೇಕು. ಈ ಪ್ರದೇಶದಲ್ಲಿನ ಕೃಷಿ, ಅದರ ಫಲ ಮಳೆಯನ್ನೇ ನಂಬಿ ಬದುಕುತ್ತಿರುವ ರೈತಾಪಿ ಕುಟುಂಬ ಮಳೆಯಿಲ್ಲದೆ ಬೆಳೆಯಿಲ್ಲ, ಬೆಳೆಯಿಲ್ಲದೆ ಊಟವಿಲ್ಲ, ಇಂಥದರಲ್ಲೂ ಇವರು ಸಾಗಿಸಿಕೊಂಡು ಹೋಗುತ್ತಿರುವ ಜೀವನದ ಪಯಣ ಪರಮಾತ್ಮನ ಅನುಗ್ರಹ ಇವರೊಂದಿಗೆ ಇದೆ ಎಂದು ಇಲ್ಲಿ ಅರ್ಥೈಸಿಕೊಳ್ಳಬಹುದೆಂದು ಬಾಬಾ ಅವರು ತಮ್ಮ ಮನಸ್ಸಿನಲ್ಲಿ ಯೋಚಿಸಿದರು. ಲಂಗರ್ ಶಾವಲಿ ಬಾಬಾರವರು ಪ್ರತಿಯೊಂದನ್ನು ಪ್ರೀತಿಯಿಂದ ನೋಡುತ್ತಿದ್ದರು.

ಅನುಭಾವಿಯಾದ ಲಂಗರ್ ಶಾವಲಿಯವರು ತನ್ನ ಬಳಿ ಬರುವ ಅಥವಾ ತಾನೇ ಅವರ ಬಳಿ ಹೋಗುವ ಪ್ರತಿ ವ್ಯಕ್ತಿಗಳೊಂದಿಗೆ ಪ್ರೇಮದಿಂದಲೇ ಮಾತನಾಡುತ್ತಿದ್ದರು. ಯಾರೊಂದಿಗೂ ತಾರತಮ್ಯ ತೋರುತ್ತಿರಲಿಲ್ಲ. ಕುಲ, ಜಾತಿ, ಮತಗಳಲ್ಲಿ ಬಡತನ, ಸಿರಿತನ, ಯಾವುದರಲ್ಲೂ ಇವರು ಭೇದಭಾವ ಮಾಡುತ್ತಿರಲಿಲ್ಲ. ಎಲ್ಲರನ್ನು ಒಂದೇ ರೀತಿಯಲ್ಲಿ ಕಾಣುತ್ತಿದ್ದರು. ಬಾಬಾರವರು ಒಬ್ಬರೇ ಕುಳಿತಿರುವುದನ್ನು ಕಂಡು ಒಬ್ಬೊಬ್ಬರು ಬಂದು ಬಾಬಾರವರ ಇರುವಿಕೆಯನ್ನು ಕೇಳುತ್ತಿದ್ದರು. ಹಾಗೆ ಕುಳಿತಲ್ಲಿಯೇ ಅವರ ಪರಿಚಯದ ಜೊತೆ ತಮ್ಮ ವಿಚಾರವನ್ನು ಹೇಳಿಕೊಳ್ಳುತ್ತಿದ್ದರು. ಹಾಗೆ ಬಂದವರ ಜೊತೆ ಮಾತನಾಡುತ್ತ ಬಾಬಾ ಧ್ಯಾನದಲ್ಲಿ ಮಗ್ನರಾಗುತ್ತಾ ಅವರ ಕಷ್ಟವನ್ನು ಪರಿಹಾರ ಮಾಡುತ್ತ ಭಾರವಾಗಿರುವ ಅವರ ಮನಸ್ಸುಗಳಿಗೆ ಮುದ ನೀಡುತ್ತಿದ್ದರು. ಇವರಿದ್ದಲ್ಲಿಗೆ ಬಂದು ಕುಳಿತು ಹೋಗುವವರಿಗೆ ಏನೋ ಒಂದು ಸಂತಸ. ಮನಸ್ಸು ಹಗುರ, ಒಂದು ಹೊಸ ಚೈತನ್ಯ ಬಂದಂತಾಗುತಿತ್ತು. ಇವರ ದೇಹದಲ್ಲೆಲ್ಲ ಏನೋ ಹೊಸ ಹುರುಪು, ಶಕ್ತಿ ತುಂಬಿದಂತಾಗುತಿತ್ತು. ಇದರಿಂದ ಬಾಬಾ ಅವರಲ್ಲಿ ಬಂದು ಕುಳಿತ ಪ್ರತಿಯೊಬ್ಬರು ಏನಾದರೊಂದು ನವಚೈತನ್ಯವನ್ನು

ಕಂಡುಕೊಳ್ಳುತ್ತಿದ್ದರು ಇವರಿಗೇ ಗೊತ್ತಿಲ್ಲದೆ ಇವರಲ್ಲಿ ಏನೋ ಒಂದು ಹೊಸತನವನ್ನು ಅನುಭವಿಸುತ್ತಿದ್ದರು; ತಮ್ಮ ಮನದೊಳಗೆ ತಾವೇ ಆನಂದಿಸುತ್ತಿದ್ದರು. ಈ ಜಾಗದಲ್ಲಿ ಬಾಬಾರವರ ಬಳಿ ಬಂದಾಗ ನಾವೆಲ್ಲ ಸಂತೋಷವನ್ನು ಕಂಡುಕೊಳ್ಳುತ್ತಿದ್ದೇವೆಂದರೆ ಈ ಲಂಗರ್ ಶಾವಲಿ ಬಾಬಾರವರು ದೈವಸ್ವರೂಪವಿರುವ ವ್ಯಕ್ತಿಯೇ ಆಗಿರಬೇಕು. ಸಾಮಾನ್ಯ ಮನುಷ್ಯನಂತು ಆಗಿರಲು ಸಾಧ್ಯವಿಲ್ಲವೆಂದು ಅಲ್ಲಿ ಬರುವ ಪ್ರತಿಯೊಬ್ಬರು ಬಾಬಾರವರಿಗೆ ಕೈ ಮುಗಿದು ಶರಣೆಂದು ವಂದಿಸುತ್ತಿದ್ದರು. ಬಾಬಾ ಅವರ ಮಾತು, ಅವರು ನೋಡುವ ನೋಟ, ನಗುವ ಶೈಲಿ ಜನಸಾಮಾನ್ಯನಿಗಿಂತ ವಿಭಿನ್ನವಾಗಿತ್ತು. ಇದು ದೈವಸ್ವರೂಪನಿಗಿರುವ ಕಳೆಯೆಂದು ಅಲ್ಲಿಗೆ ಬರುವ ಜನಸಾಮಾನ್ಯರೆಲ್ಲ ನಂಬಿ ಅಂದಿನಿಂದ ಲಂಗರ್ ಶಾವಲಿ ಬಾಬಾ ಅವರಲ್ಲಿ ಶರಣುಹೋದರು.

ಈ ಸೂಫಿ ಅನುಭಾವಿಗಳು ಜನಸಾಮಾನ್ಯರಿಗಿಂತ ಭಿನ್ನವಾಗಿ ಕಾಣುವುದೇಕೆ ಎಂದು ನಮ್ಮಲ್ಲಿ ನಾವೇ ಪ್ರಶ್ನಿಸಿಕೊಂಡರೂ ಅದಕ್ಕೆ ಉತ್ತರ ನಮ್ಮಲ್ಲಿಯೇ ಸಿಗುತ್ತದೆ. ಈ ಅನುಭಾವಿಗಳು ಜನಸಾಮಾನ್ಯರೊಂದಿಗೆ ಬೆರೆತು ಬದುಕಿದ್ದರೂ ಜನಸಾಮಾನ್ಯರಿಗಿಂತ ಭಿನ್ನವಾಗಿ ಕಾಣುವುದಕ್ಕೆ ಕಾರಣ ಅವರ ಆಧ್ಯಾತ್ಮ, ಧ್ಯಾನ, ಯೋಗ. ಆಧ್ಯಾತ್ಮದಲ್ಲಿ ತನ್ನನ್ನು ತೊಡಗಿಸಿಕೊಂಡು ಸದಾ ಪರಮಾತ್ಮನನ್ನು ನೆನೆಯುವವರು ಜನಸಾಮಾನ್ಯನಿಗಿಂತ ವಿಶೇಷತೆಯುಳ್ಳವರಾಗಿ ಕಾಣುತ್ತಾರೆ. ಸದಾ ಅವರ ಮನದಲ್ಲಿ ಅನುಭಾವದ ವಿಚಾರಗಳು, ಮಾತುಗಳಿಗೆ ಪರಿಪೂರ್ಣವಾಗಿ ಆವರಿಸಿಕೊಂಡಿರುತ್ತದೆ. ಈ ಎಲ್ಲ ಲಕ್ಷಣಗಳು ಈ ಅನುಭಾವಿಯಾದ ಸೂಫಿ ಲಂಗರ್ ಶಾವಲಿಯಲ್ಲಿ ಜನರು ಕಂಡರು. ಲಂಗರ್ ಶಾವಲಿಯವರು ಅನುಭಾವಿಯಾಗಿರುವುದರಿಂದ ಅವರು ಸಂಪೂರ್ಣವಾಗಿ ವಿಶೇಷವಾದ ವ್ಯಕ್ತಿಯಾಗಿ ನಮಗೆ ಕಾಣಸಿಗುತ್ತಾರೆ. ಲಂಗರ್ ಶಾವಲಿಯವರು ಅನುಭಾವಿಯಾಗಿ ಜನರ ಮಧ್ಯದಲ್ಲಿದ್ದು ಜನರ ಕಷ್ಟಗಳಿಗೆ ಸ್ಪಂದಿಸಿ..ಅವರೊಂದಿಗೆ ಸರಳಜೀವಿಯಾಗಿ ಬಾಳಿ ಬದುಕಿದರು.

## ಲಂಗರ್ ಶಾವಲಿ ತೋರಿದ ಮಹಿಮೆಗಳು

ಲಂಗರ್ ಶಾವಲಿ ಬಾಬಾ ಅವರು ಅನೇಕ ಮಹಿಮೆಗಳನ್ನು ತೋರಿದ್ದಾರೆ. ಇವರು ತೋರಿದ ಮಹಿಮೆಗಳಲ್ಲಿ ಕೆಲವನ್ನು ವಿವರಿಸಬಹುದಾಗಿದೆ. ಒಮ್ಮೆ ಕುಡಿತಿನಿಯಲ್ಲಿಯೇ ಬಾಬಾರವರು ತಂಗಿರುವ ಸ್ಥಳದಲ್ಲಿ ಕೆಲವು ಕಲ್ಲು ಬಂಡೆಗಳಿದ್ದವು. ಅವುಗಳನ್ನು ಯಾರು ಒಬ್ಬ ವ್ಯಕ್ತಿ ಎತ್ತುವಂತಿರಲಿಲ್ಲ; ಅಷ್ಟೊಂದು ಭಾರವಾಗಿದ್ದವು ಆ ಕಲ್ಲು ಬಂಡೆಗಳು. ಅದೇ ಊರಿನ ವ್ಯಕ್ತಿಯೊಬ್ಬ ಬಂದು ತನ್ನ ಮನೆ ಕಟ್ಟಲು ಈ ಕಲ್ಲು ಬಂಡಿಗಳು ಉಪಯೋಗವಾಗುತ್ತವೆಂದು ಅದನ್ನು ಎತ್ತಿಕೊಂಡು ಬಂಡಿಯಲ್ಲಿ ಹಾಕಿಕೊಂಡು ಹೋಗಲು ಶತಪ್ರಯತ್ನ ಮಾಡುತ್ತಿದ್ದರು. ಇದನ್ನು ನೋಡಿದ ಬಾಬಾ ಬಂದವರನ್ನು ಮಾತನಾಡಿಸಿ ತಡೆಯದೆ ಅವರೊಂದಿಗೆ ಬೆರೆತು ಆ ಕಲ್ಲುಗಳನ್ನು ಒಂದೇ ಕೈಯಲ್ಲಿ ಎತ್ತಿಹಿಡಿದು ಅವರು ತೆಗೆದುಕೊಂಡು ಹೋಗುವ ಬಂಡಿಯಲ್ಲಿ

ಹಾಕಿ ತಾನು ನಿಮ್ಮೊಂದಿಗೆ ಬರುವೆ ಎಂದು ಹೇಳಿ ಕಲ್ಲನ್ನು ಹೊತ್ತೊಯ್ಯುವ ಗಾಡಿಯನ್ನು ಹತ್ತಿ ಕುಳಿತರು. ಗಾಡಿಯಲ್ಲಿರುವ ಜನರು ಇವರನ್ನು ನೋಡುತ್ತಿದ್ದಂತೆ ಸ್ವಲ್ಪ ದೂರ ಹೋದ ಮೇಲೆ ಗಾಡಿ ಎಲ್ಲೂ ನಿಲ್ಲಿಸಿಲ್ಲದಿದ್ದರೂ ಗಾಡಿಯಲ್ಲಿಯೇ ಲಂಗರ್ ಶಾವಲಿ ಬಾಬಾ ಅವರು ಮಾಯವಾಗಿದ್ದರು. ಈ ದೃಶ್ಯವನ್ನು ಕಂಡ ಅಲ್ಲಿದ್ದವರು ಅಶ್ಚರ್ಯಗೊಂಡರು. ಗಾಡಿ ಸ್ವಲ್ಪ ಮುಂದೆ ಹೋಗಿ ನಂತರ ದಾರಿ ಸಾಗದಂತಾಯಿತು; ಕಲ್ಲು ತುಂಬಿರುವ ಗಾಡಿ ಕುಸಿದಂತಾಗಿ ನೆಲಕ್ಕೆ ಅಪ್ಪಳಿಸಿತು. ಆಗ ಆ ಜನರಿಗೆ ತಮ್ಮ ತಪ್ಪಿನ ಅರಿವಾಗಿ ಬಾಬಾ ನಾವು ಕಳ್ಳತನದಿಂದ ನಿಮ್ಮ ಬಳಿಯಿರುವ ಕಲ್ಲುಗಳನ್ನು ನೀವು ನೆಲೆಸಿರುವ ಸ್ಥಳದ ಕಲ್ಲುಗಳನ್ನು ನಿಮ್ಮ ಮುಂದೆಯೇ ಅಹಂಕಾರದಿಂದ ಎತ್ತಿಕೊಂಡು ಬಂದಿರುವುದು ತಪ್ಪೆಂದು ನಮಗೀಗರಿವಾಗಿದೆ. ತಪ್ಪನ್ನು ಮನ್ನಿಸೆಂದು ಪುನಃ ಆ ಕಲ್ಲನ್ನು ಬಾಬಾ ನೆಲೆಸಿರುವ ಜಾಗದಲ್ಲಿ ತಂದು ಹಾಕಿದರು. ಈ ಮಹಿಮೆಯನ್ನು ಕಂಡು ಜನರು ಬಾಬಾ ನಿಮ್ಮ ಮಹಿಮೆ ದೊಡ್ಡದೆಂದು ಅವರಿಗೆ ವಂದಿಸಿದರು.

ಕುಡಿತಿನಿಯಲ್ಲಿ ಕ್ಷಾಮ ಉಂಟಾಗಿ ಮಳೆಯಿಲ್ಲದೆ ಬೆಳೆಯಿಲ್ಲದೆ ಬಡಜನರಿಗೆ ಮಾಡಲು ಕೂಲಿ ಇಲ್ಲದೆ ತಿನ್ನಲು ಅನ್ನ ಇಲ್ಲದೆ ನರಳಾಡುತ್ತಿದ್ದರು. ಹಸಿವಿನ ಕೂಗು ಊರನ್ನು ಆವರಿಸಿತ್ತು. ಇದರಿಂದ ಆ ಪ್ರದೇಶದ ಜನರು ಊರನ್ನು ಬಿಟ್ಟು ಬೇರೆ ಊರಿಗೆ ಹೋಗುವ ಪ್ರಯತ್ನದಲ್ಲಿದ್ದರು. ಎಲ್ಲರೂ ಕೂಡಿ ಬಂದು ಲಂಗರ್ ಶಾವಲಿ ಬಾಬಾರವರಲ್ಲಿ ಮೊರೆಹೋದರು. ಬಾಬಾ ಅವರೆಲ್ಲರಿಗೆ ಭರವಸೆಯನ್ನು ಕೊಟ್ಟರು. ಹೆದರಬೇಡಿ ದೇವರಿದ್ದಾನೆ; ಆತನು ಸರ್ವಾಂತರ್ಯಾಮಿ ಎಂದು ಎಲ್ಲರನ್ನು ಆಶೀರ್ವದಿಸಿದರು. ಬಂದಿರುವ ಭಕ್ತರು ಬಾಬಾ ನೆಲೆಸಿರುವ ಪ್ರದೇಶದಲ್ಲಿ ಕುಳಿತರು ಎಲ್ಲೂ ಹೋಗಲಿಲ್ಲ. ಕೆಲವರು ತೂಕಡಿಸಿ ನಿದ್ದೆ ಮಾಡುತ್ತಿದ್ದರು, ಕೆಲವರು ಬಾಬಾ ಅವರನ್ನು ನೆನೆಯುತ್ತಿದ್ದರು. ಬಾಬಾ ನಮಗೆ ನಮ್ಮೂರಿಗೆ ನೀವೇ ಆಸರೆ ಎಂದು ಲಂಗರ್ ಶಾವಲಿ ಬಾಬಾರವರಿಗೆ ವಂದಿಸುತ್ತಿದ್ದರು. ಅಂದೇ ರಾತ್ರಿ ಗುಡುಗು ಸಮೇತವಾದ ಭರ್ಜರಿ ಮಳೆ ಬಂದಿತು. ಮಳೆಯೇ ಬಾರದೆಂದುಕೊಂಡಿದ್ದ ಊರಿಗೆ ಮಳೆ ತರಿಸಿದರು ಬಾಬಾ ಅವರು. ಇದನ್ನು ಕಂಡ ಊರ ಜನರು ಮಂದಹಾಸ ಬೀರಿದರು. ಸಂತೋಷದಿಂದ ಕುಣಿದು ಕುಪ್ಪಳಿಸಿದರು. ಮಳೆಯಿಂದ ಊರಲ್ಲಿನ ಕ್ಷಾಮದಿಂದ ಆಗಿರುವ ತೊಂದರೆ ನಿವಾರಣೆಯಾಯಿತು. ಕುಡಿಯಲು ನೀರು ದೊರೆತು ಜನರು ಆನಂದದಿಂದ ತೇಲಾಡಿದರು. ತಮ್ಮ ವ್ಯವಸಾಯವಾದ ಹೊಲದ ಬಿತ್ತನೆ ಪ್ರಾರಂಭವಾಗಿ ಜನರಿಗೆ ಕೂಲಿ ಮಾಡಿ ಜೀವಿಸುವ ಭಾಗ್ಯ ದೊರೆಯಿತು. ಅಲ್ಲಿಯ ತನಕ ಆ ಊರಿನ ಜನರು ಕೂಲಿ ನಾಲಿ ಇಲ್ಲದೆ ಕ್ಷಾಮದಲ್ಲಿ ನರಳುತ್ತಿದ್ದರು. ಲಂಗರ್ ಶಾವಲಿ ಬಾಬಾರವರು ಮಳೆ ತರಿಸಿ ಊರಿಗಿರುವ ಕ್ಷಾಮವನ್ನು ಹೊಡೆದೋಡಿಸಿದರು.

ಲಂಗರ್ ಶಾವಲಿ ಬಾಬಾರವರು ಒಮ್ಮೆ ಧ್ಯಾನ ಮಾಡುತ್ತ ಕುಳಿತಿರುವಾಗ ಊರಿನ ಜನರು ಬಂದು ಮುಂದೆ ನಿಂತಿದ್ದರು. ಬಾಬಾರವರು ಕಣ್ಣು ತೆರೆದು ನೋಡುವಷ್ಟರಲ್ಲಿ ಜನ ಗುಂಪಾಗಿ ನಿಂತು ಇವರನ್ನೇ ನೋಡುತ್ತಿದ್ದರು. ಬಾಬಾರವರು ಯಾಕೆ ಊರಿನ ಜನರೆಲ್ಲ

ಬಂದಿಲ್ಲಿ ಸೇರುವ ಸಂಗತಿಯಾದರೂ ಏನೆಂದು ಕೇಳಿದರು. ಊರಿನ ಜನ ಒಬ್ಬೊಬ್ಬರಾಗಿ ಮಾತನಾಡುತ್ತ ಬಾಬಾ ಊರಿಗೆ ಮಾರಿಬೇನೆ ಕಾಣಿಸಿಕೊಂಡು ಊರಲ್ಲಿ ಆಗಾಗ ಮನುಷ್ಯರು, ಪ್ರಾಣಿಗಳು, ಪಕ್ಷಿಗಳನ್ನು ಕೂಡ ಬಲಿ ತೆಗೆದುಕೊಳ್ಳುತ್ತಿದೆ. ಹೇಗಾದರೂ ಮಾಡಿ ನೀವೇ ಅದನ್ನು ತಡೆಹಿಡಿಯಬೇಕೆಂದು ಬಾಬಾರವರಲ್ಲಿ ಪ್ರಾರ್ಥಿಸಿದರು. ಲಂಗರ್ ಶಾವಲಿ ಬಾಬಾರವರು ತಾವು ಧ್ಯಾನ ಮಾಡುತ್ತ ಮತ್ತೆ ಅದರಲ್ಲೇ ತಲ್ಲೀನರಾಗಿ ಎದ್ದು ತನ್ನಲಿರುವ ಒಂದು ಕಟ್ಟಿಗೆಯನ್ನು ತೆಗೆದುಕೊಂಡು ಹೋಗಿ ಊರ ಸುತ್ತ ಗೆರೆ ಹಾಕಿ ಒಂದು ಮೂಲೆಯಲ್ಲಿ ಚಿಕ್ಕದಾದ ದಾರಿಯನ್ನು ಮಾಡಿ ಬಿಟ್ಟರು. ಒಂದು ರಾತ್ರಿ ಕಳೆದು ಹಗಲು ಬರುವುದರೊಳಗಾಗಿ ಊರಿಗೆ ಅಂಟಿರುವ ಮಾರಿ ಬೇನೆ ಕಡಿಮೆಯಾಗಿ ಸಂಪೂರ್ಣವಾಗಿ ಊರಿಂದ ಮಾಯವಾಗಿ ಹೋಗಿತ್ತು. ಇಂಥ ದೊಡ್ಡದಾದ ಪಿಡುಗನ್ನು ನಿವಾರಣೆ ಮಾಡಿದರು. ಈ ಭಯಂಕರವಾದ ಮಾರಿ ಬೇನೆಯನ್ನು ಕಡಿಮೆ ಮಾಡಿದ ಬಾಬಾ ಅವರು ದೊಡ್ಡ ಮಹಿಮರೆಂದು ಹೇಳಿ ಊರಿನ ಜನರು ಅವರ ಪಾದಗಳನ್ನು ಸ್ಪರ್ಶಿಸಿ ನಮಿಸಿದರು. ಲಂಗರ್ ಶಾವಲಿ ಬಾಬಾರವರು ಯಾವುದೇ ವಿಷಯವಿರಲಿ, ಭಕ್ತರು ತನ್ನ ಬಳಿ ಬಂದು ಕೈಜೋಡಿಸಿ ನಮಿಸಿದರೆ ಸಾಕು. ಅವರು ಭಕ್ತನ ನಂಬಿಕೆಯನ್ನು ನೆರವೇರಿಸುತ್ತಿದ್ದರು. ತನ್ನನ್ನು ನಂಬಿ ಬಳಿ ಬಂದವರನ್ನು ಕೈ ಹಿಡಿದು ಕಾಪಾಡುತ್ತಿದ್ದರು.

ಲಂಗರ್ ಶಾವಲಿ ಬಾಬಾ ಅವರ ಬಳಿ ಒಬ್ಬ ಕಾಲಿಲ್ಲದ ವ್ಯಕ್ತಿ ಬಂದು ಬಾಬಾ ನನ್ನ ದೇಹದಲ್ಲಿರುವ ಒಂದು ಅಂಗದ ವೈಫಲ್ಯದಿಂದ ನನಗೆ ದುಡಿಯಲಾಗದೆ ಬಡತನದಲ್ಲಿ ಬೇಯುತ್ತಿದ್ದೇನೆ. ನನಗೆ ಓಡಾಡುವಂತೆ ಮಾಡು ನಾನು ಎಲ್ಲರಂತೆ ಕಷ್ಟಪಟ್ಟು ಕೆಲಸ ಮಾಡಿ! ಕುಟುಂಬದವರೊಂದಿಗೆ ಬಾಳಿ ಬದುಕುವೆ ಎಂದು ಪ್ರಾರ್ಥಿಸಿದರು. ಲಂಗರ್ ಶಾವಲಿ ಬಾಬಾರವರು ಅವನನ್ನು ಗಮನಿಸಿ ನಗುತ್ತ 'ಬೇಟಾ ನೀನು ಬೇಡಿದ ಪ್ರಾರ್ಥನೆಯಲ್ಲಿಯೇ ಕರುಣೆಯೆಂಬುದು ಪರಮಾತ್ಮನಿಂದ ದೊರಕಿದೆ'. ನೀನು ಅದನ್ನು ಗಮನಿಸಲಿಲ್ಲ; ಚಿಂತೆಯೆಂಬುದು ಮತ್ತು ನೋವೆಂಬುದು ಪ್ರತಿಯೊಬ್ಬರಿಗುಂಟು ಆದರೆ ದುಡಿದು ಕುಟುಂಬದೊಂದಿಗೆ ಬಾಳಿ ಬದುಕವೆನೆಂಬ ಛಲ ನಿನ್ನಲ್ಲಿರುವುದರಿಂದ ಪರಮಾತ್ಮನಿಗೆ ನಿನ್ನ ಕೂಗು ಕೇಳಿಸಿದೆ. ನೀನು ಚಿಂತೆ ಮಾಡಬೇಡವೆಂದು ಪರಮಾತ್ಮನನ್ನು ಧ್ಯಾನಿಸುತ್ತ ಅವನ ಕಾಲಿನ ಮೇಲೆ ಸ್ಪರ್ಶಿಸಲು ಕೆಲ ಕ್ಷಣದಲ್ಲಿಯೇ ಕಾಲಿಲ್ಲದ ವ್ಯಕ್ತಿ ಎದ್ದು ನಿಂತು ನಡೆಯಲು ಪ್ರಾರಂಭಿಸಿದ. ಇದನ್ನು ಕಂಡು. ಅಲ್ಲಿದ ಪ್ರತಿಯೊಬ್ಬ ಭಕ್ತರೂ ಬಾಬಾ ಎಂದು ಜೈಕಾರ ಹಾಕಿ ವಂದಿಸಿದರು. ಕಾಲು ಪಡೆದ ವ್ಯಕ್ತಿ ಬಾಬಾ ನನಗೆ ಮರುಜನ್ಮ ಕೊಟ್ಟ ದೇವರು ನೀವೆಂದು ವಂದಿಸಿದ.

ಲಂಗರ್ ಶಾವಲಿ ಬಾಬಾ ಅವರು ಅನೇಕರಿಗೆ ಒಳಿತನ್ನುಂಟುಮಾಡಿದ್ದಾರೆ. ಬಾಬಾರವರಲ್ಲಿಗೆ ಬಂದ ಭಕ್ತಜನರಿಗೆ ಪರಿಹಾರವನ್ನು ಮಾಡಿಕೊಟ್ಟಿದ್ದಾರೆ. ಇದರಿಂದ ಅನೇಕ ಜನರು ತಮ್ಮ ತಮ್ಮ ಬದುಕನ್ನು ಕಟ್ಟಿಕೊಂಡಿದ್ದಾರೆ. ಬಾಬಾರವರು ತಮ್ಮ ಬಳಿ ಬರುವ ಅನೇಕ ಭಕ್ತರಿಗೆ ಪರಮಾತ್ಮನನ್ನು ಕುರಿತು ಬೋಧನೆಯನ್ನು ಮಾಡುತ್ತಿದ್ದರು. ಪರಮಾತ್ಮನು ಸರ್ವಾಂತರ್ಯಾಮಿ.

ಅವನನ್ನು ನಾವು ಕಾಣುವ ಬಯಕೆಯನ್ನು ಮಾಡಿದರೆ ನಮ್ಮಲ್ಲಿರುವ ವಿಕೃತ ಮನಸ್ಸಿನ ಬಯಕೆಗಳನ್ನೆಲ್ಲ ಬದಿಗೊತ್ತಿ ನಮ್ಮ ಮನಸ್ಸು ಪರಿಶುದ್ಧಗೊಳಿಸಿಕೊಳ್ಳಬೇಕು. ನಮ್ಮಲ್ಲಿರುವ ಅಂತರಾತ್ಮದ ದೃಷ್ಟಿಯನ್ನು ನೋಡುತ್ತಾ ಅದರಂತೆ ನಡೆಯುತ್ತ ಪರಮಾತ್ಮನ ಅನುಗ್ರಹಕ್ಕೆ ಒಳಪಡುತ್ತೇವೆಂದು ತಿಳಿಸುತ್ತಾ ಮನುಜನಾಗಿ ಜನ್ಮ ಪಡೆದ ವ್ಯಕ್ತಿ ಸಹಜವಾಗಿ ಆಸೆ ಮತ್ತು ಬಯಕೆಗಳ ಬಲೆಗೆ ಬೀಳುತ್ತಾನೆ. ಅದನ್ನು ಬಿಡಿಸಿಕೊಂಡು ಅದರಿಂದಾಚೆ ಇರುವ ಒಂದು ದಾರಿ ಅಹಂಕಾರ, ಬಯಕೆಗಳಿಲ್ಲದೆ ನಮ್ಮನ್ನು ಪರಮಾತ್ಮನಲ್ಲಿಗೆ ಕರೆದೊಯ್ಯುಲು ಕಾದು ನಿಂತಿದೆ. ಅಲ್ಲಿ ಹೋಗಿ ಸೇರಬೇಕು. ಆಗ ಮನುಜ ಜನ್ಮಕೆ ಒಂದು ಸಾರ್ಥಕತೆ ಸಿಗುತ್ತದೆ.

ಅನೇಕ ಭಕ್ತರಿಗೆ ಜಾತಿ, ಕುಲ, ಧರ್ಮಗಳ ತಾರತಮ್ಯವನ್ನು ತೊಲಗಿಸಿರೆಂದು ಅರಿವನ್ನು ಮೂಡಿಸಿದ್ದಾರೆ. ಮನುಜ ಮನುಜನಲ್ಲಿರುವ ದ್ವೇಷಗಳನ್ನು ತೊಲಗಿಸಬೇಕೆಂದು ಬೋಧಿಸಿ ಭಾರವಾಗಿರುವ ಭಕ್ತರ ಮನಸ್ಸನ್ನು ಹಗುರುಗೊಳಿಸಿದ್ದಾರೆ ಬಾಬಾ. ಬೋಧನೆಯನ್ನು ಆಲಿಸುತ್ತ ಅನೇಕ ಭಕ್ತರು ಬಾಬಾರವರಿಗೆ ವಂದಿಸುತ್ತ ಅವರ ದಾರಿಯಲ್ಲಿಯೇ ಕೆಲವರು ನಡೆದಿದ್ದಾರೆ. ಅವರಿಗೆ ಶರಣಾಗಿ ತಮ್ಮ ಕಷ್ಟಗಳನ್ನು ಪರಿಹರಿಸಿಕೊಂಡು ಸುಖಜೀವನವನ್ನು ಕಟ್ಟಿಕೊಂಡಿದ್ದಾರೆ. ಬಾಬಾರವರ ಅನುಗ್ರಹದಿಂದ ಪಡೆದ ಜೀವನವನ್ನು ಅನೇಕರಿಗೆ ತಿಳಿಸಿ ಅವರನ್ನು ಬಾಬಾರವರ ಅನುಗ್ರಹಕ್ಕೆ ಒಳಪಡಿಸಿದ್ದಾರೆ.

**ಸೂಫಿ ಅಹಮದ್ ಶಾ ಖಾದ್ರಿ (ಮೀರ್ ಆಲಂ ನವಾಜ್)**

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನಲ್ಲಿರುವ ಅಹಮದ್ ಶಾಖಾದ್ರಿ (ಮೀರ್ ಆಲಂ ನವಾಜ್) ಬಾಬಾರವರು ಹೊಸಪೇಟೆಗೆ ಬಂದದ್ದು ಪಾಕಿಸ್ಥಾನದಿಂದ. ಭಾರತಕ್ಕೆ ಬಂದು ಬೀದರ್, ಗುಲಬರ್ಗಾ. ಬಿಜಾಪುರ ಹೀಗೆ ದೇಶದ ಹಲವು ಭಾಗಗಳಲ್ಲಿ ಸಂಚಾರ ಮಾಡಿ ನಂತರ ಹೊಸಪೇಟೆಗೆ ಬಂದು ನೆಲೆಸಿದರು. ಈ ಸೂಫಿ ಅಹಮದ್ ಶಾಖಾದ್ರಿ ಇವರಿಗೆ ಮೀರ್ ಆಲಂ ನವಾಜ್ ಎಂಬ ಮತ್ತೊಂದು ಹೆಸರು ಜನಸಂದಣಿಯಲ್ಲಿ ಬಳಕೆಯಾಗುತ್ತಿರುವ ಹೆಸರು. ಮೀರ್ ಆಲಂ ನವಾಜ್ ಎಂಬ ಹೆಸರು ಹೊಸಪೇಟೆಯಲ್ಲಿ ಮೀರ್ ಆಲಂ ದರ್ಗಾ ಎಂದೇ ಪ್ರಸಿದ್ಧಿಯಾಗಿದೆ.

ಸೂಫಿ ಮೀರ್ ಆಲಂ ನವಾಜ್ ಅವರು ತಮ್ಮ ನಲವತ್ತೈದನೆ ವಯಸ್ಸಿನಲ್ಲಿ ಇಲ್ಲಿ ಬಂದು ನೆಲೆಸಿದರು. ಈ ಪ್ರದೇಶ ಇವರ ಆಧ್ಯಾತ್ಮ ಜೀವನಕ್ಕೆ ಯೋಗ್ಯವಾಗಿತ್ತು. ಧ್ಯಾನದಲ್ಲಿ ನಿರತನಾಗಿ ಪರಮಾತ್ಮನ ಪ್ರಾರ್ಥನೆಯಲ್ಲಿ ತಲ್ಲೀನನಾಗಿರಲು ಯೋಗ್ಯವೆಂದೆನಿಸಿ ಹೊಸಪೇಟೆ ಯಲ್ಲಿಯೇ ಮನಸಿಚ್ಛೆಯಿಂದ ನೆಲೆ ನಿಂತರು. ಅವರು ಅಲೆಮಾರಿಗಳಾಗಿ ದೇಶದ ತುಂಬೆಲ್ಲ ತಿರುಗಾಡಿ ಕೊನೆಗೆ ಇಲ್ಲಿ ಹೊಸಪೇಟೆಯಲ್ಲಿ ನೆಲೆ ನಿಲ್ಲಲು ಅವರಿಗೆ ಪರಮಾತ್ಮನ ಅನುಗ್ರವಿದ್ದಂತೆ ಕಾಣುತ್ತದೆ. ಯಾಕೆಂದರೆ ಅವರು ತಿರುಗಿರುವ, ಭೇಟಿ ನೀಡಿರುವ ಹಲವು ಪ್ರದೇಶಗಳಲ್ಲಿ ಅನೇಕ ತಾಣಗಳು ಪ್ರಶಾಂತನೀಯವಾಗಿದ್ದವು. ಆದರೆ ಅಲ್ಲೆಲ್ಲೂ ನಿಲ್ಲದೆ ಇಲ್ಲಿಗೆ ಬಂದು ನೆಲೆ ನಿಲ್ಲಲು ಅವರಿಗೆ ಪರಮಾತ್ಮನ ಪ್ರೇರಣೆ ಮತ್ತು ಅವನ ಅನುಗ್ರಹದ ಫಲ ಎಂದೇ ಹೇಳಬಹುದು.

ಸೂಫಿ ಮೀರ್ ಆಲಂ ನವಾಜ್ ಬಾಬಾ ಅವರು ಒಬ್ಬರೇ ಬಂದು ಇಲ್ಲಿ ನೆಲೆಸಿದ್ದರು. ಬರುವಾಗ ಇವರ ಜೊತೆಯಲ್ಲಿ ಯಾರು ಇರಲಿಲ್ಲ. ಬಂದು ಕೆಲವು ದಿನಗಳಲ್ಲಿಯೇ ಅಧಿಕ ಸಂಖ್ಯೆಯ ಭಕ್ತಸಮೂಹವನ್ನು ಹೊಂದಿದರು. ಇವರು ಪ್ರಶಾಂತವಾಗಿ ಧ್ಯಾನಾವಸ್ಥೆಯಲ್ಲಿ ಕುಳಿತಾಗ ಒಬ್ಬ ವ್ಯಕ್ತಿಯು ಬಂದು ಅವರನ್ನೇ ನೋಡುತ್ತ ಕುಳಿತ್ತಿದ್ದ. ಧ್ಯಾನಾವಸ್ಥೆಯಲ್ಲಿದ್ದ ಬಾಬಾ ಕಣ್ತೆರೆದು ನೋಡಿ ಕೈಸನ್ನೆಯಿಂದ ಕರೆದು ಪಕ್ಕದಲ್ಲಿ ಕೂಡಿಸಿಕೊಂಡರು. ಬಂದು ಕುಳಿತ ವ್ಯಕ್ತಿಯು ತುಂಬ ಜ್ವರದಿಂದ ನರಳುತ್ತಿದ್ದ. ಔಷಧಿ ತೆಗೆದುಕೊಂಡಿದ್ದರೂ ಜ್ವರ ಕಡಿಮೆಯಾಗಿರಲಿಲ್ಲ. ಮಗು ಯಾರಪ್ಪ ನೀನು? ಇಲ್ಲೇಕೆ ಬಂದು ನಿಂತಿರುವೆ ಎಂದು ಬಾಬಾ ಕೇಳಿದರು. ಆ ವ್ಯಕ್ತಿಯು ಇದೇ ಮಾರ್ಗವಾಗಿ ನಾನು ಹೋಗುತ್ತಿದ್ದೆ ನಿಮ್ಮನ್ನು ನೋಡಿ ಕಣ್ಮುಚ್ಚಿ ವಿಚಿತ್ರವಾದ ಭಂಗಿಯಲ್ಲಿ ಕುಳಿತಿರುವುದನ್ನು ನೋಡಿ ಹಾಗೇ ನಿಂತುಬಿಟ್ಟೆ ಎಂದು ಹೇಳಿದ. ಬಾಬಾ ಅವನಿಗೆ ತನ್ನ ಬಳಿ ಇರುವ ನೀರನ್ನು ಕುಡಿಯಲು ಕೊಟ್ಟರು. ಆ ವ್ಯಕ್ತಿ ನೀರನ್ನು ಕುಡಿದು ನಂತರ ದಣಿವಾರಿಸಿಕೊಳ್ಳಲು ಸ್ವಲ್ಪಹೊತ್ತು ಮಲಗಿಕೊಂಡು ಎದ್ದೇಳು ಎಂದು ಸೂಚಿಸಿದಂತೆ ಆ ವ್ಯಕ್ತಿಯು ಹಾಗೆ ಮಾಡಿದನು. ಸ್ವಲ್ಪ ಹೊತ್ತಲ್ಲೆ ಆ ವ್ಯಕ್ತಿಗಿರುವ ಜ್ವರ ಕಡಿಮೆಯಾಗಿ ಲವಲವಿಕೆಯಿಂದ ಎದ್ದು ಕುಳಿತು ಮಾತನಾಡತೊಡಗಿದ. ಅವನ ಬಗ್ಗೆ ಅವನಿಗೆ ಆಶ್ಚರ್ಯವೆನಿಸಿ ಈ ಸೂಫಿ ಬಾಬಾನನ್ನು ನೋಡಿ ಇವರು ಸಾಮಾನ್ಯವಾದ ವ್ಯಕ್ತಿಯಲ್ಲ. ನಿನಗೆ ಜ್ವರವಿದೆಯಂದರಿತು ನಿವಾರಿಸಿಕೊಳ್ಳಲು ನೀರು ಕೊಟ್ಟು ನನ್ನನ್ನು ವಾಸಿಮಾಡಬೇಕೆಂದರೆ ಇವನು ಮಹಾನ್ ಪುರುಷನಾಗಿರಬೇಕೆಂದು ಅವರ ಪಾದಗಳಿಗೆ ನಮಸ್ಕರಿಸಿದರು. ಬಾಬಾ ಆ ವ್ಯಕ್ತಿಯನ್ನು ನೋಡುವ ನೋಟದಲ್ಲಿ ವಿಶೇಷತೆಯಿದ್ದು ಅವನ ಕಣ್ಣಿನ ಹೊಳಪನ್ನು ಕಂಡು ಇವರೊಬ್ಬ ದೈವಿ ಪುರುಷನಿರಬೇಕೆಂದುಕೊಂಡು ಬಾಬಾರವರಿಗೆ ಶರಣೆಂದು ತಲೆಬಾಗಿ ಮತ್ತೆ ಬರುತ್ತೇನೆಂದು ಹೋದನು. ಹೋದವನು ವಿಷಯವನ್ನು ತನ್ನ ಸುತ್ತಮುತ್ತಲಿನ ಜನಕ್ಕೆ ತಿಳಿಸಿದನು. ವಿಷಯ ತಿಳಿದ ಜನರು ಒಬ್ಬೊಬ್ಬರಂತೆ ಬಂದು ಬಾಬಾರವನ್ನು ನೋಡಿ ಮಾತನಾಡಿಸಿಕೊಂಡು ಹೋಗುತ್ತಿದ್ದರು. ಕೆಲವರಂತು ಅವರ ಮುಂದೆ ಕುಳಿತು ಅವರು ಬಂದಿರುವ ಹಾದಿಯನ್ನು ಆ ಮಾರ್ಗವನ್ನು ಕುರಿತು ತಿಳಿದುಕೊಳ್ಳುತ್ತಿದ್ದರು. ಇದನ್ನೆಲ್ಲ ಬಾಬಾ ಸಂತೋಷದಿಂದಲೇ ಅವರ ಜೊತೆ ಮಾತನಾಡುತ್ತ ಹೇಳಿಕೊಳ್ಳುತ್ತಿದ್ದರು.

ಸೂಫಿ ಬಾಬಾ ತನ್ನ ಬಳಿ ಬರುವ ಪ್ರತಿಯೊಬ್ಬರನ್ನು ಪ್ರೀತಿಯಿಂದ ಮಾತನಾಡಿಸುತ್ತಿದ್ದರು. ಯಾವುದೇ ತಾರತಮ್ಯವನ್ನು ತೋರಿಸುತ್ತಿರಲಿಲ್ಲ. ಬರುವವರಲ್ಲಿ ಎಲ್ಲ ಜಾತಿಯವರಿರುತ್ತಿದ್ದರು. ಯಾವುದೇ ನಿರ್ಬಂಧವಿರಲಿಲ್ಲ. ಇವರು ಜಾತಿ - ಧರ್ಮವನ್ನು ಮೀರಿ ನಿಂತವರು. ಸೃಷ್ಟಿಕರ್ತನು ಅವನೇ ಇರುವಾಗ ನಾವೆಲ್ಲ ಒಂದೇ. ಬೇರೆ ಬೇರೆ ಜಾತಿ, ಮತ, ಧರ್ಮಗಳೆಂಬ ಭಾವನೆ ನಾವುಗಳು ನಮ್ಮ ವಿಕೃತ ಮನಸ್ಸಿನಲ್ಲಿ ಬಳಸಿಕೊಂಡಿರುವುದು. ನಮ್ಮ ಮನಸ್ಸು ಶುದ್ಧವಾಗಿಲ್ಲದ ಕಾರಣ ಇಲ್ಲಿ ನಾವುಗಳೆಲ್ಲ ನಾವು, ನಾನು, ನಮ್ಮದು, ಅಹಂಕಾರ, ದ್ವೇಷ ಅಸೂಯೆ,

ಕೋಪ, ಸಿರಿತನ, ಬಡತನ ಎಲ್ಲವನ್ನು ದೇಹದ ತುಂಬೆಲ್ಲ ಹೊತ್ತು ತಿರುಗುತ್ತ ದೇವರನ್ನೇ ಮರೆಯುವಂಥ ಸ್ಥಿತಿಯಲ್ಲಿದ್ದೇವೆ. ಒಮ್ಮೆ ತನ್ನ ಅಂತರಾತ್ಮವನ್ನು ತೆರೆದು ನೋಡಿದಾಗ ಸೃಷ್ಟಿಕರ್ತನ ಮಹಿಮೆಯನ್ನು ಕಣ್ತುಂಬಿಸಿಕೊಳ್ಳಬಹುದು. ಪ್ರತಿ ಭಕ್ತನು ಏಕಾಗ್ರತೆಯಿಂದ ಕುಳಿತು ಕೇಳುವಂತೆ ಮೀರ್ ಆಲಂ ನವಾಜ್ ಬಾಬಾ ಮಾತನಾಡುತ್ತಿದ್ದರು. ಬಾಬಾ ಅವರ ಮಾತುಗಳನ್ನು ಕೇಳುತ್ತಿದ್ದ ಭಕ್ತರು ತಮ್ಮ ಮನಸ್ಸಿನಲ್ಲಿರುವ ಇತರ ಕೆಟ್ಟ ಆಲೋಚನೆಗಳನ್ನು ತೊರೆಯಲು ಪ್ರಾರಂಭಿಸಿದರು. ಒಬ್ಬ ಸೂಫಿ ಅನುಭಾವಿಯ ಮಾತುಗಳಲ್ಲಿರುವ ನೈಜತೆ ಯಾರನ್ನಾದರೂ ಜ್ಞಾನದೆಡೆಗೆ ಕರೆದೊಯ್ಯಲು ಅರಿವು ಮೂಡಿಸುತ್ತವೆನ್ನುವುದು ಗಮನಾರ್ಹ.

**ಮೀರ್ ಆಲಂ ನವಾಜ್ ಇವರು ತೋರಿದ ಮಹಿಮೆಗಳು**

ಮೀರ್ ಆಲಂ ನವಾಜ್ ಬಾಬಾರವರು ಅನೇಕ ಮಹಿಮೆಗಳನ್ನು ಮಾಡಿದ್ದಾರೆ. ಒಮ್ಮೆ ಹೊಸಪೇಟೆ ತಾಲೂಕಿನ ಪಕ್ಕದ ಹಳ್ಳಿಯಲ್ಲಿರುವ ಒಂದು ಕುಟುಂಬದ ಯಜಮಾನನಿಗೆ ವಿಚಿತ್ರ ಖಾಯಿಲೆಯಿತ್ತು. ಎಷ್ಟೋ ವೈದ್ಯರ ಬಳಿ ಹೋಗಿ ತಪಾಸಣೆ ಮಾಡಿಸಿದರೂ ಕಡಿಮೆಯಾಗಿರಲಿಲ್ಲ. ಮೀರ್ ಆಲಂ ನವಾಜ್ ಬಾಬಾರವರ ಬಳಿ ಬಂದು ತಮ್ಮ ಕಷ್ಟವನ್ನು ಹೇಳಿಕೊಂಡಾಗ ಬಾಬಾರವರು ಇವರಿಗಿರುವ ಖಾಯಿಲೆಯನ್ನು ವಾಸಿ ಮಾಡಿದರು. ಬಾಬಾ ಅವರು ಇವರನ್ನು ನೋಡಿ ತಲೆಸವರಿದರಷ್ಟೆ. ಇವರ ಖಾಯಿಲೆ ವಾಸಿಯಾಯಿತು; ಕ್ಷಣಮಾತ್ರದಲ್ಲಿ ಇವರ ಖಾಯಿಲೆಯನ್ನು ವಾಸಿ ಮಾಡಿರುವುದನ್ನು ಕಂಡು ಜನರೆಲ್ಲ ಮೀರ್ ಆಲಂ ನವಾಜ್ ಬಾಬಾರವರಿಗೆ ನಮಸ್ಕರಿಸಿ ಶರಣಾದರು.

ಒಮ್ಮೆ ರೈತನೊಬ್ಬನು ತನ್ನ ಎತ್ತುಗಳು ರೋಗದಿಂದ ನರಳುತ್ತಿದ್ದವು. ಅವುಗಳಿಗೆ ಔಷಧಿ ಹಾಕಿ ಉಪಚಾರ ಮಾಡಿದರೂ ಪ್ರಯೋಜನವಾಗದೆ ಒಂದು ದಿನ ಕೊನೆ ಉಸಿರೆಳೆದವು. ಆಘಾತದಲ್ಲಿರುವ ಅವನ ಮನೆಮುಂದೆ ಹೋಗುತ್ತಿದ್ದ ಸೂಫಿ ಆ ದೃಶ್ಯವನ್ನು ನೋಡಿ, ಯಾಕಪ್ಪ ಇಷ್ಟೊಂದು ಅಳುತ್ತಲಿರುವೆ? ಸಮಧಾನ ಮಾಡಿಕೊ! ಆಗಬಾರದ್ದೇನಾಯಿತು? ಎಂದಾಗ ಆ ಎತ್ತುಗಳ ಮಾಲೀಕನು ಇವನ್ಯಾರು ಸತ್ತಿರುವ ಎತ್ತುಗಳನ್ನು ನೋಡಿ ನಾನು ಅಳುತ್ತಿದ್ದರೆ ಹೀಗೆ ಕೇಳುತ್ತಿದ್ದಾನೆ. ನಿನಗೇನು ಕಾಣಿಸುತ್ತಿಲ್ಲವೆ ಇಲ್ಲಿ ಸತ್ತು ಬಿದ್ದಿರುವ ಎತ್ತುಗಳ ಒಡೆಯ ನಾನು ಎಂದಾಗ ಸೂಫಿ ಬಾಬಾ ಅಯ್ಯೋ ಅವು ನಿದ್ದೆಯಿಲ್ಲದೆ ತುಂಬಾ ದಿನಗಳು ತೊಂದರೆ ಅನುಭವಿಸಿವೆ. ಈಗ ವಿಶ್ರಾಂತಿಯನ್ನು ಪಡೆಯುತ್ತಿವೆ. ತಡೆ, ನಿನ್ನ ಅಳು ನಿಲ್ಲಿಸು ಇನ್ನು ಸ್ವಲ್ಪ ಹೊತ್ತು ತಡೆ ಅವು ಎದ್ದು ನಿಲ್ಲುತ್ತವೆ ಎಂದನು. ಇದನ್ನು ಕೇಳಿದ ಎತ್ತುಗಳ ಮಾಲೀಕ ಇವನೇನು ಹುಚ್ಚನೇನು ದಾರಿತಪ್ಪಿ ಬಂದಿರಬೇಕೆಂದು ದೂರ ಹೋಗೆಂದು ಗದರಿಸಿದ. ಬಾಬಾ ಎತ್ತುಗಳ ಬಳಿ ಹೋಗಿ ನಿಮ್ಮ ಯಜಮಾನ ರೋದಿಸುತ್ತಿದ್ದಾನೆ. ನೀವು ಹೀಗೆ ಮಲಗಿದರೆ ಮಾಲೀಕನಿಗೆ ತೊಂದರೆಯಾಗುತ್ತದೆ. ಕೃಷಿ ಕೆಲಸ ನಿಂತುಹೋಗುತ್ತದೆ. ಎದ್ದೇಳಿ ಎಂದು ಮೈ ಸವರಿದರೆ ಎರಡು ಎತ್ತುಗಳು ಎದ್ದು ನಿಂತು ಮಾಲೀಕನ ಕಡೆ ನೋಡಿ ಮುಂದೆ ಹಾಕಿರುವ

ಮೇವು ತಿನ್ನುತ್ತ ಮೈಮರೆತವು. ಈ ದೃಶ್ಯವನ್ನು ನೋಡಿ ಮಾಲೀಕನೊಬ್ಬನೇ ಅಲ್ಲ ಅಲ್ಲಿರುವ ಪ್ರತಿಯೊಬ್ಬರು ಇವನೊಬ್ಬ ಮಹಾನುಭಾವಿ ದೇವಮಾನವ ಭೂಮಿಗೆ ಬಂದ ದೇವರು ಇವರೆಂದು ಜಯಕಾರ ಹಾಕಿ ನಮಿಸಿ ಬಾಬಾರವರ ಪಾದಗಳಿಗೆ ವಂದಿಸಿ ಶರಣು ತಂದೆ! ಆ ದೇವರೆ ನಿಮ್ಮ ಮೂಲಕ ಬಂದು ನಮ್ಮನ್ನೆಲ್ಲ ಕಾಪಾಡಲು ಕಳುಹಿಸಿರುವ ದೈವಮಾನವರು ನೀವೆಂದು ವಂದಿಸಿದರು.

ಸದಾ ಬೆಟ್ಟಗುಡ್ಡಗಳಲ್ಲೇ ಕೆಲಸ ಮಾಡುತ್ತಿದ್ದ ವ್ಯಕ್ತಿಯೊಬ್ಬ ತನಗರಿವಿಲ್ಲದೆ ಬೆಟ್ಟದಿಂದ ಜಾರಿ ಬಿದ್ದು ಕಾಲು ಮುರಿದುಹೋಯಿತು. ನಡೆಯಲು ಬಾರದೆ ತುಂಬಾ ದಿನಗಳ ಕಾಲ ಹಾಸಿಗೆಯನ್ನಿಡಿದ. ಮನೆಯ ಯಜಮಾನ ಹೇಗಾದನಲ್ಲ! ಸಂಸಾರ ಹೇಗೆಂದು ಅವನ ಕುಟುಂಬವೆಲ್ಲ ಚಿಂತೆಯಲ್ಲಿ ಮುಳುಗಿತ್ತು. ಬಾಬಾರವರ ಮಹಿಮೆಯನ್ನು ತಿಳಿದು ಒಮ್ಮೆ ಈ ಕುಟುಂಬದವರು ಅಲ್ಲಿಗೆ ಮನೆಯ ಯಜಮಾನನನ್ನು ಕರೆದೊಯ್ದರು. ಬಾಬಾರವರ ಮುಂದೆ ಮಲಗಿದ ಸ್ಥಿತಿಯಲ್ಲಿಯೇ ಅವರಿಗೆ ವಂದಿಸಿದನು. ಮುರಿದ ಕಾಲು ಊದಿಕೊಂಡು ತುಂಬ ನೋವು ತಡೆಯಲಾಗದೆ ಅಳುತ್ತಲಿದ್ದ. ಮೀರ್ ಆಲಂ ನವಾಜ್ ಬಾಬಾರವರು ಇವನನ್ನು ನೋಡಿ ಕೆಲ ಹೊತ್ತು ಮೌನವಾಗಿ ನಂತರ ಕೆಲ ಸಮಯ ಕಣ್ಣುಮುಚ್ಚಿ ಕುಳಿತು ಬಿಟ್ಟ ನಂತರ ಮಗು ಯಾಕೆ ಹೀಗೆ ಮಲಗಿರುವೆ ನಿನ್ನನ್ನು ಇಲ್ಲಿ ತಂದು ಮಲಗಿಸಲು ಹೇಳಿದವರಾರು ಎಂದಾಗ ಅವನ ಮನೆಯವರು ಮತ್ತು ಅಲ್ಲಿದ್ದ ಬಾಬಾ ಭಕ್ತರೆಲ್ಲರು ಕಕ್ಕಾಬಿಕ್ಕಿಯಾಗಿ ಆಶ್ಚರ್ಯದಿಂದ ಬಾಬಾರವರ ಮುಖವನ್ನೇ ನೋಡುತ್ತಿದ್ದರಂತೆ. ಆ ವ್ಯಕ್ತಿಯ ಕುಟುಂಬದವರು ಬಾಬಾ ಇವರಿಗೆ ಕಾಲು ಮುರಿದಿದೆ! ನಡೆಯಲಾಗದೆ ಹಾಸಿಗೆ ಹಿಡಿದಿದ್ದಾರೆ; ನಮಗೆ ಬೇರೆ ದಿಕ್ಕು ತೋಚದಂತಾಗಿದೆ! ನೀವೇ ಇವನನ್ನು ಕಾಪಾಡಬೇಕು, ದುಡಿಯುವ ವ್ಯಕ್ತಿ ಮನೆಯ ಯಜಮಾನ ಇವನೇ ನಮ್ಮ ಕುಟ್ಟುಂಬಕ್ಕೆ ಆಸೆ ಇವರೇ. ಹೀಗಾದರೆ ನಮ್ಮ ಕುಟುಂಬದ ಗತಿಯೇನೆಂದು ವ್ಯಕ್ತಿಯ ಹೆಂಡತಿ ಹೇಳಿದಳು. ನಿನ್ನನ್ನು ಇಲ್ಲಿ ಮಲಗಲು ಬಿಟ್ಟಿದ್ದೇ ದೊಡ್ಡ ತಪ್ಪು. ಈಗ ನೀನಾಗಿ ನೀನೇ ಎದ್ದು ಹೋದರೆ ಸರಿ; ಇಲ್ಲವಾದರೆ ನಿನ್ನನ್ನು ನಾನೇ ಎತ್ತಿ ಆಚೆ ಎಸೆಯುತ್ತೇನೆಂದು ಘರ್ಜಿಸಿದರು. ಅಲ್ಲಿರುವ ಎಲ್ಲ ಜನರು ಭಯಭೀತರಾಗಿ ಎಲ್ಲರೂ ಬಾಬಾರವರ ಮುಖವನ್ನೇ ನೋಡುತ್ತಿರುವಾಗ ಹಾಸಿಗೆಯಲ್ಲಿ ಅವರ ಮುಂದೆ ಕಾಲುಮುರಿದು ಬಿದ್ದಿದ್ದ ವ್ಯಕ್ತಿ ಎದ್ದು ನಿಂತು ನಡೆಯಲು ಆರಂಭಿಸಿದನು. ಓಡಾಡಿ ಕುಣಿದು ಕುಪ್ಪಳಿಸಿದನು. ಇದನ್ನು ನೋಡಿದ ಜನರೆಲ್ಲ ಕೇಕೆ ಹಾಕಿ ಬಾಬಾರವರಿಗೆ ಜೈ ಎಂದರು. ಎಂಥ ಮಹಿಮೆ; ಇವರು ಬರೀ ಬಾಬಾರವರಲ್ಲ ದೇವಲೋಕದಿಂದ ಮಾನವ ವೇಷ ಧರಿಸಿ ಬಂದ ದೇವಮಾನವನೆಂದು ಅಲ್ಲಿದ್ದ ಜನರೆಲ್ಲ ಬಂದು ಮೀರ್ ಆಲಂ ನವಾಜ್ ಬಾಬಾರವರಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿದರು.

ಈ ವಿಷಯವನ್ನರಿತ ಹೊಸಪೇಟೆ ಮಾತ್ರವಲ್ಲದೆ ಅಲ್ಲಿನ ಸುತ್ತಮುತ್ತಲಿನ ಪ್ರದೇಶದ ಜನರೆಲ್ಲ ಗುಂಪುಗುಂಪಾಗಿ ಬಂದು ಬಾಬಾರವರ ದರ್ಶನ ಪಡೆದು ಅವರ ಅನುಗ್ರಹ,

ಆಶೀರ್ವಾದದಿಂದ ತಮಗೂ ಶುಭವಾಗುವುದೆಂದು ಬಂದು ಬಾಬಾರವರ ದರ್ಶನ ಪಡೆಯುತ್ತಿದ್ದರು. ಬಾಬಾರವರಿಗೆ ಭಕ್ತ ಸಮೂಹದ ಸಂಖ್ಯೆ ದಿನ ಕಳೆದಂತೆ ಅಪಾರವಾಗಿ ಬೆಳೆಯಲು ಪ್ರಾರಂಭವಾಯಿತು.

ಮೀರ್ ಆಲಂ ನವಾಜ್ ಅವರು ಅನೇಕ ಮಹಿಮೆಗಳನ್ನು ಮಾಡುತ್ತ ಜನರ ಕಷ್ಟಗಳನ್ನು ನಿವಾರಣೆ ಮಾಡಿದ್ದಾರೆ. ಅವರ ಜೊತೆಗಿದ್ದು ಅವರ ಕಾರ್ಯಗಳಿಗೆ ಅವರ ದುಃಖ ದುಮ್ಮಾನಗಳಿಗೆ ಸ್ಪಂದಿಸಿದ್ದಾರೆ. ಸೂಫಿ ಸಂತ ಮೀರ್ ಆಲಂ ನವಾಜ್ ಅವರು ಪ್ರತಿಯೊಬ್ಬರು ತನ್ನನ್ನು ನಂಬಿ ಬಂದವರಿಗೆ ಸಹಾಯಕರಾಗಿ ಸ್ಪಂದಿಸಿ ಅವರಿಗೆ ನೆರಳಾಗಿ ಅವರ ಸಮಸ್ಯೆಯನ್ನೆಲ್ಲ ನಿವಾರಣೆ ಮಾಡಿದ್ದಾರೆ. ಇವರಲ್ಲಿ ಬಂದು ಸಹಾಯ ಕೇಳಿದ ಪ್ರತಿಯೊಬ್ಬರೂ ಒಳಿತನ್ನು ಕಂಡುಕೊಂಡಿದ್ದಾರೆ. ಮನದಲ್ಲಿ ಸಂತೋಷವನ್ನು ತುಂಬಿಕೊಂಡಿದ್ದಾರೆ.

ಪ್ರತಿಯೊಬ್ಬ ಅನುಭಾವಿಯೂ ತಾನು ಮಾಡಿದ ಸಾಧನೆಯ ಶಕ್ತಿಯನ್ನು ಸಮಾಜದಲ್ಲಿನ ಜನರ ಸಮಸ್ಯೆ ಕಷ್ಟಗಳಿಗೆ ಉಪಯೋಗಿಸಿ ಸಹಾಯಕವಾದ ಕೆಲಸಗಳನ್ನು ಮಾಡುತ್ತಾರೆ. ಅದರಂತೆ ಮೀರ್ ಆಲಂ ನವಾಜ್ ಅನುಭಾವಿ ಸೂಫಿಯು ಅದೇ ಕಾರ್ಯವನ್ನು ಇಲ್ಲಿ ಮಾಡಿದ್ದಾರೆ. ತಾನು ಪರಮಾತ್ಮನ ಅನುಗ್ರಹದಿಂದ ಪಡೆದುದನ್ನು ತನ್ನ ಸುತ್ತ ಜೀವಿಸುವ ಮಾನವ ಜೀವಿಗಳಿಗೆ, ಪ್ರಾಣಿಗಳಿಗೆ, ಪಕ್ಷಿಗಳಿಗೆ ಉಪಯೋಗಿಸಿದ್ದಾರೆ.

ಮೀರ್ ಆಲಂ ನವಾಜ್ ಸೂಫಿಯು ನೆಲೆಸಿರುವ ಸ್ಥಳವು ಒಂದು ಪುಣ್ಯಕ್ಷೇತ್ರ. ಇಲ್ಲಿ ಬಂದವರಿಗೆಲ್ಲ ಮನಸ್ಸಿನಲ್ಲಿರುವ ಆತಂಕಗಳು ದೂರಾಗಿದೆ. ಶಾಂತಿ ಸಮಾಧಾನವಿಲ್ಲದ ಮನಸ್ಸು ಶಾಂತಿ ಸಹನೆಯನ್ನು ಪಡೆದುಕೊಂಡು ಮಾನವೀಯತೆಯಿಂದ ಬಾಳಿ ಬದುಕುವ ಜೀವನವನ್ನು ತೋರಿಸಿಕೊಟ್ಟಿದೆ. ಸೂಫಿಯ ಅನುಗ್ರಹವು ಶುಭವನ್ನು ತಂದುಕೊಡುತ್ತಿತ್ತು. ಈ ಉದ್ದೇಶದಿಂದ ಭಕ್ತ ಸಮೂಹವು ಇವರ ಅನುಗ್ರಹ ಪಡೆಯಲು ದೂರದ ಊರಿನಿಂದ ಕೂಡ ಬರುತ್ತಿದ್ದರು. ತನ್ನ ಬಳಿ ಬಂದ ಭಕ್ತಜನರಿಗೆ ಬಾಬಾರವರು ಮೊದಲು ನಿಮ್ಮ ಮನಸ್ಸನ್ನು ಶುದ್ಧಿ ಮಾಡಿಕೊಳ್ಳಿ; ಆಗ ದೇಹವು ಹಗುರವೆನಿಸಿ ನನ್ನ ಮಾತುಗಳನ್ನು ಕೇಳುತ್ತ ಕುಳಿತುಕೊಳ್ಳುವ ಉತ್ಸಾಹ ನಿಮ್ಮಲ್ಲಿ ಬರುವುದೆಂದು ಹೇಳುತ್ತಿದ್ದರು.

ಪರಮಾತ್ಮನ ಅನುಗ್ರಹ ನಮಗೆ ಸಿಗುವುದಾದರೆ ನಾವು ನಮ್ಮಲ್ಲಿರುವ ಅರಿಷಡ್ವರ್ಗಗಳನ್ನೆಲ್ಲ ಬಿಟ್ಟು ಏಕಾಗ್ರತೆಯಿಂದ ಕುಳಿತು ಪ್ರಾರ್ಥಿಸಬೇಕು. ಎಲ್ಲರೂ ಒಂದೇ ಎಂದು ಭಾವಿಸಿ ಎಲ್ಲ ವಿಷಯದಲ್ಲಿ ಸಮವಾಗಿದ್ದು ತಾರತಮ್ಯವನ್ನು ಬಿಡಬೇಕು. ಆಗ ಇಲ್ಲಿದ್ದ ಪ್ರತಿಯೊಬ್ಬ ಮಾನವ ಜೀವಿಯು ಪರಮಾತ್ಮನ ಪುತ್ರನಾಗುತ್ತಾನೆ. ಅವರ ಅನುಗ್ರಹಕ್ಕೆ ಪಾತ್ರನಾಗುತ್ತಾನೆಂದು ಪಾರಮಾರ್ಥಿಕವಾದ ಮಾತುಗಳಿಂದ ಮನುಷ್ಯನನ್ನು ವಿಕೃತ ಮನಸ್ಸಿನಿಂದ ಬಿಡಿಸಿ ಪರಿಶುದ್ಧತೆಯುಳ್ಳ ಮನಸ್ಸಿನೆಡೆಗೆ ಕರೆತಂದು ಬಾಳುವ ದಾರಿಯನ್ನು ತೋರಿಸಿ ಬಾಳಿಸಿದ್ದಾರೆ

**ಕೊನೆ ಟಿಪ್ಪಣಿಗಳು**

೧. ಡಾ. ಕೆ.ಎಂ. ಮೇತ್ರಿ ಮತ್ತು ಡಾ. ಮೃತ್ಯುಂಜಯ ರುಮಾಲೆ, **ಕುರುಗೋಡು ನೀಲಮ್ಮನವರ ಸಾಂಸ್ಕೃತಿಕ ಅಧ್ಯಯನ,** ಪುಟ ೨೩,

೨. ಅದೇ, ಪುಟ ೨೩.

೩. ಅದೇ, ಪುಟ ೪.

೪. ಅದೇ, ಪುಟ ೪೩, ೪೪.

೫. ಅದೇ, ಪುಟ ೬.

೬. ಡಾ. ಕೆ.ಎಂ. ಮೇತ್ರಿ ಮತ್ತು ಡಾ. ಮೃತ್ಯುಂಜಯ ರುಮಾಲೆ, **ಕುರುಗೋಡು ನೀಲಮ್ಮನವರ ಸಾಂಸ್ಕೃತಿಕ ಅಧ್ಯಯನ,** ಪುಟ ೨೫.

೭. ಡಾ. ಜೆ. ಕರಿಯಪ್ಪ ಮಾಳಿಗೆ, **ಬಳ್ಳಾರಿ ಜಿಲ್ಲೆಯ ಅವಧೂತರು,** ಪುಟ ೧೩೯.

೮. ಅದೇ, ಪುಟ ೧೪೦.

೯. ಅದೇ, ಪುಟ ೧೪೧.

೧೦. ಶ್ರೀ. ಪ್ರಭಾನಂದ ಪಂಡಿತರು, **ಸಿಂಧಿಗೇರಿ ಶ್ರೀ ಶಿವಶರಣ ಮಲ್ಲೇಶ್ವರನ ಪುರಾಣ,** ಪುಟ ೯.

೧೧. ಅದೇ, ಪುಟ ಮುನ್ನುಡಿ.

೧೨. ವಿದ್ವಾನ್ ಭುಜಂಗ ಮಠದ ಗುರುಸಿದ್ಧಯ್ಯನವರು, **ಕಾನಾಮಡುವಿನ ಶ್ರೀ ಶರಣಾರ್ಯರು,** ಪುಟ ೧೩.

೧೩. ಅದೇ, ಪುಟ ೩೫.

೧೪. ಅದೇ, ಪುಟ ೩೬.

೧೫. ಅದೇ, ಪುಟ ೪೭.

೧೬. ಅದೇ, ಪುಟ ೪೭.

೧೭. ಅದೇ, ಪುಟ ೪೭.

೧೮. ಡಾ. ಎಸ್.ಎಸ್.ಹೆಚ್. ಉತ್ತಂಗಿ, **ಗದ್ದಿಕೆರೆ ದೊಡ್ಡಬಸಪ್ಪ,** ಪುಟ ಶುಭಾಶೀರ್ವಾದ.

೧೯. ಅದೇ, ಪುಟ ೧೬.

೨೦. ಅದೇ, ಪುಟ ೨೬.

೨೧. ಪಂಡಿತ ವೈ. ನಾಗೇಶ ಶಾಸ್ತ್ರಿಗಳು, **ಮರಿಯೋಗೀಶ್ವರ ಪುರಾಣ,** ಪುಟ ೨.

೨೨. ಅದೇ, ಪುಟ ೪.

೨೩. ಅದೇ, ಪುಟ ೫.

೨೪. ಅದೇ, ಪುಟ ೧೪.

೨೫. ಅದೇ, ಪುಟ ೧೨.

೨೬. ಅದೇ, ಪುಟ ೧೪.

೨೭. ಅದೇ, ಪುಟ ೧೯.

೨೮. ಡಾ. ಜೆ. ಕರಿಯಪ್ಪ ಮಾಳಿಗೆ, **ಬಳ್ಳಾರಿ ಜಿಲ್ಲೆಯ ಅವಧೂತರು,** ಪುಟ ೯೨.

೨೯. ಅದೇ, ಪುಟ ೯೩.

೩೦. ಅದೇ, ಪುಟ ೯೩.

೩೧. ಡಾ. ಜೋಳದರಾಶಿ ದೊಡ್ಡನಗೌಡರು, **ಚೆಳ್ಳಗುರ್ಕಿ ಶ್ರೀ ಎರ್ರಿಸ್ವಾಮಿಗಳ ಶಿವಮಯ ಜೀವನ ಚರಿತ್ರೆ ಮತ್ತು ತಿಕ್ಕಯ್ಯವಧೂತರು ವಿರಚಿತ ಭಕ್ತಿಗೀತೆಗಳು,** ಪುಟ ೩೧.

೩೨. ಅದೇ, ಪುಟ ೨೬.

೩೩. ಅದೇ, ಪುಟ ೨೯.

೩೪. ಸಿದ್ಧಯ್ಯ ಪುರಾಣಿಕ, **ಶರಣ ಚರಿತಾಮೃತ,** ಪುಟ ೭೩೯.

೩೫. ಅದೇ, ಪುಟ ೭೩೯.

೩೬. ಅದೇ, ಪುಟ ೭೪೩.

೩೭. ಅದೇ, ಪುಟ ೪೬, ೪೭.

೩೮. ಅದೇ, ಪುಟ ೭೪೧.

೩೯. ಮ.ನಿ.ಪು. ಚನ್ನವೀರ ಮಹಾಸ್ವಾಮಿಗಳು(ಸಂ), **ಗುರುಕರುಣ ತ್ರಿವಿಧಿ,** ಪುಟ ೧೬.

೪೦. ರಂಗಾರೆಡ್ಡಿ ಕೋಡಿರಾಂಪುರ(ಸಂ), **ತತ್ವಪದಗಳು,** ಪುಟ ೧೪೨.

೪೧. ಅದೇ, ಪುಟ ೧೩೦.

೪೨. ಅದೇ, ಪುಟ ೧೩೧, ೧೩೨.

೪೩. ಜಿ.ವಿ. ಆನಂದಮೂರ್ತಿ, **ತತ್ವಪದಕಾರರು,** ಪುಟ ೬೧.

೪೪. ಜಿ.ವಿ. ಆನಂದಮೂರ್ತಿ, **ತತ್ವಪದಕಾರರು,** ಪುಟ ೧೦.



## ಅಧ್ಯಾಯ : ಐದು

# ತುಂಗಭದ್ರಾ ನದಿ ಪ್ರಾಂತ್ಯದ ಅನುಭಾವಿಗಳ ಕುರಿತ ಸಾಹಿತ್ಯ

ಪ್ರಸ್ತುತ ಅಧ್ಯಯನದಲ್ಲಿ ಬರುವ ಅನುಭಾವಿಗಳಲ್ಲಿ ತತ್ವಪದಕಾರರನ್ನು ಹೊರತುಪಡಿಸಿ ಉಳಿದ ಅನುಭಾವಿಗಳು ಲಿಖಿತವಾಗಿ ಏನನ್ನೂ ಬರೆದ ಸಾಹಿತ್ಯವಿಲ್ಲ. ಇವರು ಅನುಭಾವಿಗಳಾಗಿ ಬಾಳಿ ಹೋಗಿದ್ದಾರೆ. ಅವರನ್ನು ಕುರಿತು ಆನಂತರದಲ್ಲಿ ಹುಟ್ಟಿದ ಸಾಹಿತ್ಯ ಇದೆ.

ಕಾನಾಮಡುಗು ಶರಣಪ್ಪನವರನ್ನು ಕುರಿತು ಬಂದಿರುವ ಸಾಹಿತ್ಯವನ್ನು ಅವಲೋಕನ ಮಾಡಿದಾಗ ಅವರ ಕುರಿತಾದ ಒಂದು ಕೃತಿಯಲ್ಲಿ ಕಾನಾಮಡುವಿನ ಶ್ರೀ ಶರಣಾರ್ಯರು ವಿದ್ವಾನ್ ಭುಜಂಗಮಠದ ಗುರುಸಿದ್ಧಯ್ಯನವರ ಕೃತಿಯಲ್ಲಿ ಶರಣಪ್ಪನವರನ್ನು ಕುರಿತಾದ ಅವರ ಬಾಲ್ಯದಿಂದ ಜೀವನದ ಪಯಣವನ್ನು ತಿಳಿಸಿದ್ದಾರೆ. ಶರಣತ್ವವನ್ನು ವಿವರಿಸುತ್ತ ಅವರ ಜೀವನ ಅಂತ್ಯಗೊಂಡು ಅವರನ್ನು ನಂಬಿದ ಜನರ ಮನದಲ್ಲಿ ನೆನಪಾಗಿ ಉಳಿಯುವ ಬಗೆಯನ್ನು ಈ ಕೃತಿಯಲ್ಲಿ ತಿಳಿಸಿದ್ದಾರೆ. ಭಕ್ತ ಜನಸಮೂಹ ಅವರಿಗೆ ನಿರ್ಮಿಸಿದ ಮಠದಲ್ಲಿ ಹೇಗೆ ತಮ್ಮ ಭಕ್ತಿಯನ್ನು ತೋರ್ಪಡಿಸುತ್ತಾರೆ ಮತ್ತು ಪದಗಳನ್ನು ಹಾಡುತ್ತ ಪೂಜಾಕಾರ್ಯವನ್ನು ಮಾಡುತ್ತಾರೆಂಬುದನ್ನು ಈ ಕೃತಿಯಲ್ಲಿ ಕಾಣಬಹುದಾಗಿದೆ. ಕಾನಾಮಡುಗು ಪ್ರಸಿದ್ಧಿಯನ್ನು ಪಡೆದಿರುವುದು ಶರಣಪ್ಪರವರಿಂದಲೇ. ಅವರು ಜೀವಿಸಿದ್ದ ಕಾಲದಲ್ಲಿ ನಡೆಸುತ್ತಿದ್ದ ಕಾಯಕ ಪ್ರಸಾದ-ದಾಸೋಹಗಳನ್ನು ಇಂದಿಗೂ ನಡೆಸಿಕೊಂಡು ಬರುತ್ತಿರುವುದು ಶರಣಪ್ಪನವರು ತೋರಿಸಿಕೊಟ್ಟ ಹಾದಿ ಎಂಬುದನ್ನು ಸ್ಮರಿಸಿದ್ದಾರೆ. ಪ್ರಸ್ತುತ ಮಠದಲ್ಲಿ ನಡೆಯುವ ಪೂಜೆಗಳಲ್ಲಿ ಭಕ್ತರು ಭಾಗವಹಿಸಿ ಹಾಡಿನ ಮೂಲಕ ಶರಣಪ್ಪನವರಿಗೆ ಮಂಗಳಾರತಿಯನ್ನು ಮಾಡುತ್ತಾರೆ.

### ಜಯ ಮಂಗಲ ಶ್ರೀ ಶರಣರಿಗೆ

"ಜಯ ಮಂಗಲ ಶ್ರೀ ಕಾನಾಮಡುವು ಶ್ರೀ ಶರಣರಿಗೆ
ಜಯನಿತ್ಯ ಮಂಗಲವು ಗುರುಕರುಣಪೂರಿತರಿಗೆ
ಜಯಸತ್ಯ ಮಂಗಲವು ಜಂಗಮ ಶ್ರೀವಾಕಿಂಕರಗೆ
ಜಯಶಿವ ಮಂಗಲವು ಲಿಂಗನಿಷ್ಠಾ ಪರಿಪೂರ್ಣಗೆ

ಜಯಜಯತು ಜಯಮುರುಘಾನಿ ರಂಜನ ಪ್ರಿಯಗೆ
ಜಯಜಯತು ಗುರುಬೇವಿನರಸಸ್ವಾಮಿ ಪ್ರಿಯಸುತಗೆ
ಜಯಜಯತು ಗುರುಶಿಬೇಂದ್ರರ ಪಾರರತ್ನಭೂಷಣ ಶರಣಗೇ॥
ಜಯಜಯತು ನಿಡಮಾಮಿಡೀಶಪ್ರಿಯ ಶರಣಗೇ
ಜಯಮಂಗಲ ನಿತ್ಯ ಶುಭಮಂಗಲ ತ್ರೈಲಿಂಗದಲಿನಿರ್ಭಾವಿಪ ಮಹಿಮಗೆ।
ಜಯಮಂಗಲ ಸತ್ಯ ಶುಭಮಂಗಲ ಕಲ್ಲಬಸವನ ಶಿರವಕೂಡಿಸಿ ಮೆರೆದಗೆ।
ಜಯಮಂಗಲ ನಿತ್ಯ ಶುಭಮಂಗಲ ನೀರತುಪ್ಪಮಾಡ್ದ ಶ್ರೀ ಕಾನಾಮಡು ವೀಶಗೇ
ಜಯಮಂಗಲ ಶ್ರೀ ಕಾನಾಮಡುವು ಶ್ರೀಶರಣರಿಗೆ॥"[7]

ಶರಣಪ್ಪನವರು ಜೀವಿತ ಕಾಲದಲ್ಲಿ ಮಾಡಿದ ಕಾಯಕಗಳನ್ನು ಮತ್ತು ಅವರ ಮಹಿಮೆಗಳನ್ನು ಭಕ್ತ ಜನಸಮೂಹ ತಮ್ಮ ಹಾಡಿನಲ್ಲಿ ಸ್ಮರಿಸಿ ಅವರನ್ನು ನೆನೆಯುತ್ತಾರೆ. ಆ ಮೂಲಕ ಅವರ ಮೇಲಿರುವ ತಮ್ಮ ಭಕ್ತಿಯನ್ನು ಅಭಿವ್ಯಕ್ತಪಡಿಸಿರುವುದು ಇಲ್ಲಿ ತಿಳಿದು ಬರುತ್ತದೆ.

ಶ್ರೀಮತಿ ಕೆ. ಅನುಸೂಯಮ್ಮ ಶರಣಪ್ಪ, ಆಲೂರು ಇವರ ಕೃತಿಯಾದ "ಶ್ರೀ ಶರಣಾರ್ಯರ ಸುಪ್ರಭಾತ ಮತ್ತು ಭಕ್ತಿ ಗೀತೆಗಳು" ಎಂಬ ಕೃತಿಯಲ್ಲಿ ಶರಣಪ್ಪನವರ ಮೇಲಿನ ಭಕ್ತಿ ಮತ್ತು ಗೌರವವನ್ನು ಹಾಡಿನ ಮೂಲಕ ವ್ಯಕ್ತಪಡಿಸಿದ್ದಾರೆ.

**ಶ್ರೀ ಶರಣಾರ್ಯರ ಸುಪ್ರಭಾತ**

"ಶರಣು ಶರಣಾರ್ಥಿ ಶರಣು ಶರಣಾರ್ಥಿ
ಸುಪ್ರಭಾತವು ನಿನಗೆ ಶರಣು ಶರಣಾರ್ಯ ।
ಯೋಗನಿದ್ರೆಯ ಸರಿಸಿ ಜಾಗ್ರಕತೆ ನೀ ಬಾರೋ ।
ಸುಪ್ರಭಾತವು ನಿನಗೆ ಶರಣು ಶರಣಾರ್ಯ ॥
ಸುಪ್ರಭಾತವು ನಿನಗೆ ಶರಣು ಶರಣಾರ್ಥಿ ॥
ಬಸವಣ್ಣ ನೀಲಮ್ಮ ಅಲ್ಲಮಾ ಪ್ರಭುಗಳೂ ।
ಚನ್ನಬಸವೇಶ ಸಿದ್ಧರಾಮೇಶರೂ ಅಕ್ಕಮಹಾದೇವಿಯಾ ।
ಯೋಗ ನಿದ್ರೆಯ ಕಳೆದು ಸುಪ್ರಪ್ರಿಯಾನಿಲವ ।
ಜಾಗ್ರತಕೆ ತಂದರೈವರಾ ತೆರದೀ ।
ಯೋಗ ನಿದ್ರೆಯ ಕಳೆದು ಜಾಗ್ರತಕೆ ನೀ ಬಾರೊ ।
ಸುಪ್ರಭಾತವು ನಿನಗೆ ಶರಣು ಶರಣಾರ್ಯ ॥
ಸುಪ್ರಭಾತವು ನಿನಗೆ ಶರಣು ಶರಣಾರ್ಥಿ ॥
ಕೊಂಕಲ್ಲ ಶರಣರೂ ಪಾರ್ವತಾ ಲಲಿತಮ್ಮ ।
ಗುರುಸಿದ್ಧ ಪಂಡಿತರೂ ಐಮಡಿಯ ಶರಣಾರ್ಯ ।
ಐ ವರೂಡಿಗೊಡಿ ಭಕ್ತಿಯಿಂ ಬೇಡುವರು ಶರಣೆನ್ನುತಿಹರು ।

ಯೋಗ ನಿದ್ರೆಯ ಕಳೆದು ಜಾಗ್ರಕತೆ ನೀಬಾರೊ ।
ಸುಪ್ರಭಾತವು ನಿನಗೆ ಶರಣು ಶರಣಾರ್ಯ ॥
ಸುಪ್ರಭಾತವು ನಿನಗೆ ಶರಣು ಶರಣಾರ್ಥಿ ॥
ಕಿತ್ತೂರ ರಾಣಿಯರು ರುದ್ರಮ್ಮ ಚೆನ್ನಮ್ಮಾ
ಪತಿಯ ವಿರಹವೀ ಕಂದನಾ ಸಲಹುತಿರೆ ।
ಗುರುಸಿದ್ಧ ಗುರುಗಳಾ ಹರಕೆಯಿಂ ।
ವೀರನಾ ಸತ್ಯ ಶರಣನಾ ಮಾಡಿ ।
ವೀರ ಕಂಕಣ ಕಟ್ಟದಾ ವೀರ ಚನ್ನಮ್ಮನಾ ತೆರದಿ ।
ಭಕ್ತಿಯಿಂ ಬೇಡುವರು ಶರಣೆನ್ನುತಿಹರು ।
ಯೋಗ ನಿದ್ರೆಯ ಕಳೆದು ಜಾಗ್ರಕತೆ ನೀ ಬಾರೊ ।
ಸುಪ್ರಭಾತವು ನಿನಗೆ ಶರಣು ಶರಣಾರ್ಯ ॥
ಸುಪ್ರಭಾತವು ನಿನಗೆ ಶರಣು ಶರಣಾರ್ಥಿ॥"[೨]

ಶರಣರಿಗೆ ಶುಭೋದಯವನ್ನು ತಿಳಿಸುತ್ತ ನಿದ್ರೆಯಿಂದ ಎದ್ದು ಭಕ್ತರಲ್ಲಿಗೆ ಬಂದು ಶುಭವನ್ನುಂಟುಮಾಡು, ಭಕ್ತರ ಕಷ್ಟವನ್ನು ಸರಿಸಿ ಕೈ ಹಿಡಿದು ಮುನ್ನಡೆಸು, ಭಕ್ತರು ಮಾಡುವ ಕಾಯಕದಲ್ಲಿ ಜಯವನ್ನು ನೀಡೆಂದು ವಂದಿಸುತ್ತಾ ಭಕ್ತರು ಶರಣಪ್ಪನವರಲ್ಲಿ ಹಾಡಿನ ಮೂಲಕ ಕೋರುತ್ತಾರೆ - ವಂದಿಸುತ್ತಾರೆ.

ಈ ಕೃತಿಯಲ್ಲಿರುವ ಪದಗಳಲ್ಲಿ ಸುಪ್ರಭಾತದ ಹಾಡಿನಲ್ಲಿಯೇ ಶರಣಪ್ಪನವರ ಜೀವನ ಚರಿತ್ರೆಯನ್ನು ಹೇಳಿರುವುದು ಇಲ್ಲಿ ಗಮನಿಸುವ ಒಂದು ಸಂಗತಿಯಾಗಿದೆ.

## ಭಕ್ತಿಗೀತೆಗಳು

### ಶರಣಾರ್ಯರ ಸ್ತೋತ್ರಗೀತೆ

"ಗಡಿನಾಡ ನಾಡಿಂದ ಬಂದೇ ಸಿರಿಯಾದ ಸುಗ್ಗಿಯನೆ ತಂದೆ ।
ಆಗರ್ಭ ಶ್ರೀಮಂತನೆಂದೇ ಸವಿಯಾದ ದಾಸೋಹ ತಂದೆ ॥
ಶರಣಾರ ಆಗಮನ ತಂದೆ ಕೈಲಾಸ ಪರ್ವತದ ತಂದೆ ।
ಪಾವನಾ ಕ್ಷೇತ್ರದಲ್ಲಿ ನಿಂದೆ ಶಿವನ ಸಿರಿಯಲಿ ನೀನು ನಿಂದೆ ॥
ಭಕ್ತರಾ ಮನದಿ ಒಡನಾಡಿ ಬಂದೆ ನಾಡಿ ನಾಡಿಗಳಲ್ಲಿ ನೀನೆ ನಿಂದೆ ।
ಅವರಾ ಇಷ್ಟಾರ್ಥಗಳ ಕೊಡುತಾ ಬಂದೇ ವರದಾನಿ ನೀನೆಂಬ ಕೀರ್ತಿಯಲಿ ನಿಂದೆ ॥
ಓಂಕಾರ ಮಂತ್ರವನು ನುಡಿದೇ ಪರಮ ಪಂಚಾಕ್ಷರಿಯ ಕಂಡೆ ।
ಶರಣಾರ ನುಡಿಯನ್ನು ಮುಡಿದೆ ಸಿರಿಯಾದ ಶಿವನನ್ನು ಕಂಡೆ ॥
ಪ್ರಮಥ ಗಣಗಳ ನೀನು ಕರೆದೆ ತುಂಬ ಹೂವನು ನೀನು ಪಡೆದೆ ।
ಮುರುಘೇಂದ್ರರಡಿಗಳಿಗೆ ಎರಗೀ ಅವರ ಪೂಜೆಗೆ ನೀನು ನೀಡಿ ॥

ಅವರಿಂದ ಹರಕೆಯನು ಪಡೆದೆ ಬೆತ್ತ ಜೋಳಿಗೆಯನ್ನು ಪಡೆದೆ ।
ಕಾನಾಮಡುವಿಗೆ ನೀನು ಬಂದೆ ಸವಿಯಾದ ದಾಸೋಹ ತಂದೆ ॥
ಐಮಡಿಯ ಶರಣಾರ್ಯದಿಂದು ನಾಲ್ಮಡಿಯ ಶರಣಾರ್ಯಗೆಂದು ।
ನಡೆ ಮಡಿಯ ಹಾಕಿದರು ಇಂದು ದಾಸೋಹದೌತಣಕೆ ಎಂದು ಸಹೋದರನ ಕರೆತಾರೊ ಇಂದು ॥
ಶೃಂಗಾರ ತೇರನ್ನು ಏರೀ ಪರಿಪರಿಯ ಪೂಜೆಗಳ ಸೇರಿ ।
ಗುರುವಿನಾ ಹರಕೆಯಲಿ ಇಂದು ಮಂಗಳವ ಪಾಡುವೆನ ನಿಂದೂ ॥
ಕಂಟಲಿಯ ಬಸವಣ್ಣ ಬಂದು ನೀಟಾಗಿ ನಿಂದಿಹನು ಮುಂದೆ ।
ದಾಸೋಹಂಬಾವದಿ ಹಿಂದೆ ಆಗರ್ಭ ಶ್ರೀಮಂತನೆಂದೇ ॥"[೩]

ಶರಣಪ್ಪನವರು ಕಾನಾಮಡುಗಿಗೆ ಬಂದು ನೆಲೆಸಿ ಕಾಯಕ ದಾಸೋಹವನ್ನೆಲ್ಲ ನಡೆಸಿರುವೆ. ತೇರನ್ನು ಏರಿ ಹಲವು ರೀತಿಯ ಪೂಜೆಗಳಿಂದ ಪೂಜಿಸುತ್ತ ದಾಸೋಹದಲ್ಲಿ ತೋರಿರುವ ಶ್ರೀಮಂತಿಕೆಯನ್ನು ಭಕ್ತರು ಈ ಹಾಡಿನಲ್ಲಿ ಕೊಂಡಾಡಿದ್ದಾರೆ.

ಶ್ರೀ ಪ್ರಭಾನಂದ ಪಂಡಿತರು ಹಿರಿಯಮಠ ಕೌಡಕುಂದ ಇವರ ಕೃತಿ "ಸಿಂಧಿಗೇರಿ ಶ್ರೀ ಶಿವಶರಣ ಮಲ್ಲೇಶ್ವರನ ಪುರಾಣ". ಈ ಪುರಾಣದಲ್ಲಿ ಪ್ರಭಾನಂದ ಪಂಡಿತರು ಸಿಂಧಿಗೇರಿ ಮಲ್ಲಪ್ಪನವರ ಬಾಲ್ಯ ಮತ್ತು ಜೀವನವನ್ನು ತಿಳಿಸುತ್ತ ಅವರು ಪಡೆದ ಸಾಧನೆ ಮತ್ತು ಶರಣತ್ವವನ್ನು ತಿಳಿಸುತ್ತಾ ತಾವು ಪಡೆದ ಶಕ್ತಿಯಿಂದ ಭಕ್ತ ಜನಸಮುದಾಯವನ್ನು ಹೇಗೆ ಅವರ ಕಷ್ಟಗಳಿಗೆ ಸ್ಪಂದಿಸಿದ್ದಾರೆಂಬುದನ್ನು ತಿಳಿಸಿದ್ದಾರೆ. ಹಾಗೆ ಶರಣ ಮಲ್ಲಪ್ಪನವರು ಭಕ್ತರ ಮನಸ್ಸಿನಲ್ಲಿ ಮನೆ ಮಾಡಿ ಭಕ್ತರ ಮನೆಮನಗಳಲ್ಲಿ ಪೂಜಿಸಿಕೊಳ್ಳುತ್ತಿರುವುದು ಅವರು ಮಾಡಿದ ಮಹಿಮೆಗಳಿಂದ ಇವರಿಂದ ಕಷ್ಟ ಪರಿಹರಿಸಿಕೊಂಡ ಭಕ್ತ ಸಮೂಹ ಇಂದಿಗೂ ಇವರ ಮಹಿಮೆಯನ್ನು ಭಕ್ತಿ ಗೌರವಗಳಿಂದ ಕೊಂಡಾಡುತ್ತಾರೆ. ಶರಣ ಮಲ್ಲಪ್ಪನವರನ್ನು ಪೂಜಿಸುತ್ತ ಸಾಂಸ್ಕೃತಿಕ ಕಾರ್ಯಕ್ರಮಗಳ್ನು ಕೈಗೊಳ್ಳುತ್ತಿರುವ ಬಗೆಯನ್ನು ಈ ಕೃತಿಯಲ್ಲಿ ವಿವರಿಸಿದ್ದಾರೆ. ಶಿವಶರಣ ಮಲ್ಲಪ್ಪನವರು ಹುಟ್ಟಿನಿಂದ ಅವರು ಬೆಳೆದು ಬಂದ ಹಾದಿ, ಅವರು ಮಾಡಿದ ಕಾಯಕ, ಜೀವನ ಕ್ರಮ ಮತ್ತು ಅವರು ಲಿಂಗೈಕ್ಯರಾಗಿರುವ ವಿವರವನ್ನು ಈ ಕೃತಿಯಲ್ಲಿ ನೀಡಲಾಗಿದೆ.

ಶರಣಮಲ್ಲಪ್ಪನವರು ಮಾಡಿದ ದಾನಗಳನ್ನು ಕುರಿತು ಪದಗಳಲ್ಲಿ ಹೇಳಲಾಗಿದೆ.

"ದಾನವನು ಕೊಡುತಿಹನು ಪರರಿಂ
ದೇನನು ಕೊಳ್ಳದೆಲೆ ಬಾಳ್ವನು
ಹೀನ ಸಂಗವ ತೊರೆದು ಶಾಸ್ತ್ರ ಪುರಾಣವ ಕೇಳುವನು ।
ಮೌನದಿಂದೇ ಕಾಂತದಲ್ಲಿರು

ತೇನನೋ ಚಿಂತೆಪನು ಶಿವಗುಣ
ಗಾನಗೈವನು ಮೈಮರೆದು ಸತಿ ಭಕ್ತಿ ಭಾವದಲಿ ॥"

ಮಲ್ಲಪ್ಪ ಕುಲಕಸುಬಾದ ಕುಂಬಾರಿಕೆಯನ್ನು ಮಾಡುತ್ತ ಕೃಷಿಕಾಯಕವನ್ನು ಕೂಡ ಮಾಡುತ್ತಿದ್ದನು. ಇದರಿಂದ ಬಂದ ಲಾಭದಲ್ಲಿ ಮುನ್ನೂರು ಎಕರೆಯಷ್ಟು ಆಸ್ತಿಯನ್ನು ಸಂಪಾದಿಸಿರುತ್ತಾನೆ. ಇದರ ಸುಖವನ್ನು ತಾನೊಂದೆ ಅನುಭವಿಸದೇ ತನ್ನನ್ನು ನಂಬಿ ಬಂದ ಭಕ್ತ ಜನಸಮೂಹಕ್ಕೆ ದಾನ ಮಾಡುತ್ತಿದ್ದ. ಅವರ ಕಷ್ಟಗಳಿಗೆ ಸ್ಪಂದಿಸುತ್ತಿದ್ದ. ಇದನ್ನು ಅನುಭವಿಸಿದ ಭಕ್ತ ಜನಸಮೂಹ ಇವರ ದಾನವನ್ನು ಕುರಿತು ಪದಗಳನ್ನು ಕಟ್ಟಿ ಪದದ ರೂಪದಲ್ಲಿ ಮಲ್ಲಪ್ಪನವರನ್ನು ವಂದಿಸುತ್ತಾರೆಂಬುದನ್ನು ಈ ಕೃತಿಯಲ್ಲಿ ತಿಳಿಸಲಾಗಿದೆ. ಹಾಗೆ ಮಲ್ಲಪ್ಪನವರಿಗೆ ಈ ಕೃತಿಯ ಕೃತಿಕಾರರಾದ ಶ್ರೀ ಪ್ರಭಾನಂದ ಪಂಡಿತರು ಹಿರಿಯಮಠ ಕೌಡಕುಂದ ಇವರು ಕೃತಿಯ ಕೊನೆಯಲ್ಲಿ ತಮಗೆ ಶರಣ ಮಲ್ಲಪ್ಪನವರ ಮೇಲಿದ್ದ ಭಕ್ತಿ ಭಾವನೆಯನ್ನು ತೋರ್ಪಡಿಸಿದ್ದಾರೆ.

"ಮಂಗಲಂ ಗುರು ಪಂಚಕಕೆ ಸ
ನ್ಮಂಗಲಂ ಶಿವಶರಣ ನಿಚಯಕೆ
ಮಂಗಲಂ ಗುಲಿಂಗ ಜಂಗಮ ಮೂಲಶಿವಪದಕೆ
ಮಂಗಲಂ ಕುಂಬಾರ ಗುಂಡಗೆ
ಮಂಗಲಂ ಮೆಲ್ಲೇಶ ಶರಣಗೆ
ಮಂಗಲಂ ಸಿರಿ ಸಿಂಧಿಗೇರಿಯ ಸುಜನ ಭಕ್ತರಿಗೆ
ಮಂಗಲಂ ಗುರು ನಾಧಿಲಿಂಗೆಗೆ
ಮಂಗಲಂ ಮಲ್ಲಪ್ಪ ಶರಣಗೆ
ಮಂಗಲಂ ಶೀವಯೋಗಸಾಧಕ ಸಿದ್ಧ ಪುರುಷರಿಗೆ ॥
ಮಂಗಲಂ ಸಜ್ಜನ ಸಮೂಹಕೆ
ಮಂಗಲಂ ಸಂತಾಸುವಾದಕೆ
ಮಂಗಲಂ ಸತ್ಯಕ್ಕೆ ಶಾಂತಿಗೆ ಭೂತದಯಗೆ ಶಿವಮ್
ಮಂಗಲಂ ಕರ್ನಾಟದೇಶಕೆ
ಮಂಗಲಂ ಭಾರತಕೆ ವಿಶ್ವಕೆ
ಮಂಗಲಂ ಧರ್ಮಾವಲಂಬಿಗಳಾದ ಸಕಲರಿಗೆ
ಮಂಗಲಂ ಮನುಕುಲಕೆ ಧರ್ಮಕೆ
ಮಂಗಲಂ ಜೀವಾವಳಿಗೆ ಸ
ನ್ಮಂಗಲಂ ಶಿವಶರಣ ಚರಿತ ಪ್ರೇಮಿಜನಗಳಿಗೆ
ಮಂಗಲಂ ಲಿಂಗಾಂಗ ಸಂಗಿಗೆ
ಮಂಗಲಂ ಗುರುಲಿಂಗ ಜೀವಿಗೆ

ಮಂಗಲಂ ಶ್ರೀ ಜಂಗಮ ಸ್ಥಲ ಮೀರಿಮೆರದವಗೆ ॥
ಮಂಗಲಂ ವರ ಮಹಿಮ ಶಾಲಿಗೆ
ಮಂಗಲಂ ಮಲ್ಲಪ್ಪತಾತಗೆ
ಮಂಗಲಂ ಸಿರಿ ಸಿಂಧಿಗೇರಿಯ ಶರಣಚರಿಗೆ ತಮ್ ॥"[೫]

ಶರಣ ಮಲ್ಲಪ್ಪನವರಿಗೆ ಮಾತ್ರ ಮಂಗಲವನ್ನು ಕೋರದೆ ಅವರಿದ್ದ ಊರಿನ ಜನರಿಗೆ ಮತ್ತು ಭಕ್ತ ಜನಸಮುದಾಯಕ್ಕೂ ಮಂಗಲವನ್ನು ಕೋರಿದ್ದಾರೆ. ಇದು ಕೃತಿಕಾರರು ಮಲ್ಲಪ್ಪನವರ ಮೇಲಿದ್ದ ಭಕ್ತಿ ಮತ್ತು ನಂಬಿಕೆಯ ಭಾವನೆಯನ್ನು ತೋರಿಸುತ್ತದೆ.

ಪಂಡಿತ ವೈ. ನಾಗೇಶ ಶಾಸ್ತ್ರಿಗಳ ಕೃತಿ "ಬಳ್ಳಾರಿಯ ಶ್ರೀ ಮರಿಯೋಗೀಶ್ವರ ಪುರಾಣ." ಈ ಕೃತಿಯಲ್ಲಿ ಬಳ್ಳಾರಿಯ ಶರಣ ಮರಿಸ್ವಾಮಿಯವರು ಬಾಳಿ ಬದುಕಿದ ಕಾಲ ಹತ್ತೊಂಬತ್ತನೆಯ ಶತಮಾನವೆಂಬುದನ್ನು ತಿಳಿಸುತ್ತ ಬಾಲ್ಯ ಮತ್ತು ನಡೆದು ಬಂದ ಜೀವನದ ಬದುಕಿನ ಚಿತ್ರಣವನ್ನು ವಿವರಿಸುತ್ತ ಅವರ ಶರಣತ್ವದ ಬಗೆಯನ್ನು ತಿಳಿಸುತ್ತಾರೆ. ಅವರ ದಾಂಪತ್ಯದ ಜೀವನದೊಂದಿಗೆ ಶರಣ ಮರಿಸ್ವಾಮಿಯವರು ಲಿಂಗೈಕ್ಯರಾಗಿರುವುದನ್ನು ಈ ಕೃತಿಯಲ್ಲಿ ವಿವರಿಸಲಾಗಿದೆ.

ಮರಿಯೋಗೀಶ್ವರನೆನಿಸಿದ ಮರಿಸ್ವಾಮಿಗಳು ಚಿಕ್ಕವಯಸ್ಸಿನಲ್ಲಿ ತಂದೆ ತಾಯಿಗಳನ್ನು ಕಳೆದುಕೊಂಡು ಬಾಲ್ಯದಲ್ಲಿಯೇ ಕಷ್ಟವನ್ನುಂಡು ಬೆಳೆದರು. ಅಲೆಮಾರಿಯಾಗಿ ತಿರುಗಿ ಜನರ ನೋವುಗಳಿಗೆ ಸ್ಪಂದಿಸಿ ಭಕ್ತ ಜನರ ಕಷ್ಟ ನಿವಾರಣೆ ಮಾಡುತ್ತಿದ್ದರು. ತನ್ನ ಜೀವನದಲ್ಲಿ ಸಾಧಿಸಿದ ಸಾಧನೆಯ ಶಕ್ತಿಯನ್ನು ಭಕ್ತ ಜನರ ಅವರ ಕಷ್ಟ ಪರಿಹಾರಕ್ಕಾಗಿ ಉಪಯೋಗಿಸಿ ಕೊಂಡರು. ಅಧಿಕ ಭಕ್ತರೊಂದಿಗಿದ್ದು ಅವರ ಕಷ್ಟ ನಿವಾರಣೆ ಮಾಡುತ್ತ ಅಪಾರ ಭಕ್ತ ಸಮೂಹವನ್ನು ಹೊಂದಿದ್ದರೆಂಬುದನ್ನು ಈ ಕೃತಿಯಲ್ಲಿ ವಿವರಿಸಲಾಗಿದೆ. ಮರಿಸ್ವಾಮಿಯವರು ಪಡೆದ ಯೋಗ, ಆಧ್ಯಾತ್ಮ, ಧ್ಯಾನದ ಸಾಧನೆಯಲ್ಲಿಯೇ ಮಗ್ನರಾಗಿರುತ್ತಿದ್ದ ಮರಿಸ್ವಾಮಿಗಳು ಕೂಡುತ್ತಿದ್ದ ಭಂಗಿ ಕೂಡ ಯೋಗ ಮುದ್ರೆಯಲ್ಲಿಯೇ ಇರುತ್ತಿತ್ತೆಂಬುದನ್ನು ಲೇಖಕರು ಅಭಿಪ್ರಾಯ ಪಡುತ್ತಾರೆ.

ಕೃತಿಯಲ್ಲಿ ಮರಿಸ್ವಾಮಿಯವರ ಪಟ್ಟದ ಶಿಷ್ಯನಾದ ಕರಡೀಶನ ಪರಿಚಯವೂ ಇದೆ. ಗುರುಶಿಷ್ಯನ ಸಂಬಂಧದ ಪರಿಯನ್ನು ವಿವರಿಸುತ್ತ, ಇವರಿಗೆ ಮಂಗಳವನ್ನು ಹಾಡಿದ್ದಾರೆ.

"ಮಂಗಳವು ಮಹಿಮಾಂತರಂಗನೆ
ಮಂಗಳವು ಶಿವಶರಣಸಂಗನೆ
ಮಂಗಳವು ಗುರುಚರಣ ಪಂಕಜಭೃಂಗನೇ ನಿನಗೆ
ಮಂಗಳವು ವರದಾನವೀರನೆ
ಮಂಗಳವು ಜಂಗಮರ ಪ್ರಾಣನೆ
ಮಂಗಳವು ಕರಡೀಶ ಸಂಗನಬಸವಕುಲಭೂಷ"[೬]

ಮಠಿಸ್ವಾಮಿಗಳು ತಮ್ಮನ್ನು ನಂಬಿದ ಭಕ್ತ ಜನಸಮುದಾಯವನ್ನು ರಕ್ಷಿಸಿದರು. ಅವರ ಕಷ್ಟಕ್ಕೆ ಸ್ಪಂದಿಸಿದ್ದದರಿಂದಲೇ ಅವರ ಭಕ್ತ ಜನಸಮೂಹ ಹೆಚ್ಚಾಯಿತು. ಎಲ್ಲಾ ಧರ್ಮದ ಜನರು ಭಕ್ತರಾಗಿ ಬಂದಿದ್ದಾರೆ ಎನ್ನುವುದು ಮುಖ್ಯವಾದ ಸಂಗತಿ.

ಡಾ. ಕೆ.ಎಂ. ಮೇತ್ರಿ ಮತ್ತು ಡಾ. ಮೃತ್ಯುಂಜಯ ರುಮಾಲೆ ಅವರ ಕೃತಿ "ಕುರುಗೋಡು ನೀಲಮ್ಮನವರ ಸಾಂಸ್ಕೃತಿಕ ಅಧ್ಯಯನ". ಈ ಕೃತಿಯಲ್ಲಿ ಕುರುಗೋಡು ನೀಲಮ್ಮನ ಬಾಲ್ಯ, ಜೀವನ ಮತ್ತು ಶರಣತ್ವವನ್ನು ತಿಳಿಸಿದ್ದಾರೆ. ನೀಲಮ್ಮ ಸಿಂಧಿಗೇರಿಯಿಂದ ಕುರುಗೋಡಿಗೆ ಬಂದು ನೆಲೆಸಿ, ಮುಂದೆ ಕದಡಿಯಲ್ಲಿನ ಈಕೆಯ ಬದುಕಿನ ಚಿತ್ರಣವನ್ನು ವಿವರಿಸಲಾಗಿದೆ. ನೀಲಮ್ಮನವರ ಜೀವನದ ಚರಿತ್ರೆಯೊಂದಿಗೆ ನೀಲಮ್ಮನ ಕಾಲಜ್ಞಾನ ಮತ್ತು ಸಿಂಧಿಗೇರಿ ನೀಲಮ್ಮನ ಕಳ್ಳುಬಳ್ಳಿಯ ಸರನಾಡಗೌಡರ ವಂಶಾವಳಿ ಪರಿಪೂರ್ಣ ವಿವರವನ್ನು ಈ ಕೃತಿಯಲ್ಲಿ ಕಾಣಬಹುದಾಗಿದೆ.

ನೀಲಮ್ಮ ಯೋಗ ಮತ್ತು ಶಿವಯೋಗ ಸಾಧಿತವಿರುವ ಒಬ್ಬ ಶರಣೆ. ಬಳ್ಳಾರಿ ಮತ್ತು ಗದಗ ಪರಿಸರದಲ್ಲಿ ತನ್ನದೇ ಆದ ಭಕ್ತ ಸಂಕುಲವನ್ನು ಹೊಂದಿರುವುದನ್ನು ಲೇಖಕರು ವಿವರಿಸಿದ್ದಾರೆ. ನೀಲಮ್ಮ ತಾನು ಹೋಗಬೇಕಾದ ಪ್ರದೇಶಕ್ಕೆ ಎತ್ತಿನ ಮೇಲೆ ಕುಳಿತು ಪ್ರಯಾಣ ಮಾಡುತ್ತಿದ್ದಳು. ನೀಲಮ್ಮನ ಪ್ರಯಾಣ ಸದಾ ಎತ್ತಿನ ಮೇಲೆಯೇ. ಹಾಗೆ ಹೋಗುವಾಗ ಎತ್ತು ಒಂದೇ ಕಾಣಿಸುತ್ತಿತ್ತು. ನೀಲಮ್ಮ ಅದೃಶ್ಯಳಾಗಿರುತ್ತಿದ್ದಳು. ಯಾರ ಕಣ್ಣಿಗೆ ಕಾಣುತ್ತಿರಲಿಲ್ಲ. ಆ ಎತ್ತಿನ ಬಾಯಿಯಲ್ಲಿ ನೊರೆ ಬರುತ್ತಿತ್ತು. ಇದು ಎತ್ತಿನ ಮೇಲೆ ನೀಲಮ್ಮ ಸವಾರಿ ಮಾಡುತ್ತಿರುವುದರ ಸಂಕೇತವೆಂದು ಭಕ್ತರು ತಿಳಿಯುತ್ತಿದ್ದರು. ಕುರುಗೋಡು ನೀಲಮ್ಮ ಕುರುಗೋಡಿನಲ್ಲಿ ಮಾತ್ರವಲ್ಲದೆ ಸಿಂಧಿಗೇರಿ ಮತ್ತು ಕದಡಿಯಲ್ಲಿ ಭಕ್ತ ಜನಸಮೂಹವನ್ನು ಹೊಂದಿದ್ದು, ಕದಡಿಯಲ್ಲಿ ನೀಲಮ್ಮನ ಪ್ರಚಾರಕ ಅಂಶಗಳು ಹೆಚ್ಚಾಗಿರುವುದು ಈ ಕೃತಿಯಿಂದ ತಿಳಿದು ಬರುತ್ತದೆ. ನೀಲಮ್ಮನ ಜೀವನ ವೃತ್ತಾಂತವನ್ನು ವಿವರವಾಗಿ ತಿಳಿಸಿರುವುದರ ಜೊತೆಗೆ ನೀಲಮ್ಮಳ ಮಠವಿರುವ ಕುರುಗೋಡು, ಮುದ್ದಾಪುರ, ಕದಡಿ ಇತ್ಯಾದಿ ಊರುಗಳಲ್ಲಿ ಜಾತ್ರೆ-ಉತ್ಸವಗಳನ್ನು ಪ್ರತಿವರ್ಷ ತಪ್ಪದೆ ನಡೆಯುವುದರ ಸಂಪೂರ್ಣ ವಿವರಗಳನ್ನು ಈ ಕೃತಿಯಲ್ಲಿ ನೀಡಲಾಗಿದೆ.

ನೀಲಮ್ಮನವರನ್ನು ಕುರಿತು ಕಟ್ಟಲಾಗಿರುವ ಪದಗಳು ಮತ್ತು ಸ್ತೋತ್ರಗಳು ಲಭ್ಯವಿವೆ.

### ನೀಲಮ್ಮನ ಸ್ತೋತ್ರ

"ಆದಿ ತೀರ್ಥವೇದಕಮಲ::ನೀಲಮ್ಮ::ನೀಲಮ್ಮ
ಪಾದ ಕಮಲಾವ ಕಂಡವರಿಲ್ಲ ನೀಲಮ್ಮ
ಹುಟ್ಟಿಬಂದೆ ಕುರುಗೋಡೊಳಗೆ ನೀಲಮ್ಮ
ಪಟ್ಟೆ ಮಂಚ ಪದವಿ ಪಡೆದೆ ನೀಲಮ್ಮ

ವಾಕ್ಯದಲ್ಲಿ ನೆನೆದೆ ನೀಲಮ್ಮ ಭೂ
ಲೋಕಕ್ಕೆ ಪಾವಡೆಗೆಲಿದೆ ನೀಲಮ್ಮ ::
ಜಂಗಮರ ಪ್ರಾಣ ಲಿಂಗವೆ ನೀಲಮ್ಮ ನಮ್ಮ
ಸಂಗನ ಶರಣರ ಶರಣೆ ನೀಲಮ್ಮ
ಹುಟ್ಟುಗೌಡರ ಮಗಳು ಕಾಣೆ ನೀಲಮ್ಮ ::
ನೀನು ಕುರುಗೋಡುಕಟ್ಟೆ ಬಸವಗೊಲಿದೆ ಕಾಣೆ ನೀಲಮ್ಮ ::
ಆದಿ ಗೌಡರ ಮಗಳು ಕಾಣೆ ನೀಲಮ್ಮ :
ಬಸವಗೊಲಿದೆ : ಕಾಣೆ ನೀಲಮ್ಮ
ಏಳುವರುಷದ ಮಗಳು ಕಾಣೆ ನೀಲಮ್ಮ ನೀನು ಬಚ್ಚ
ಲೊಳಗೆ ಮಾಯವಾದೆ ನೀಲಮ್ಮ :
ಭವಭಕ್ತಿಯಿಂದವ್ವಯ್ಯ ನೀಲಮ್ಮ ನೀನು
ಧೃಡವುಳ್ಳ ಶರಣೆ ಕಾಣೆ ನೀಲಮ್ಮ
ಹಡೆದ ತಾಯಿಗೆ ಹಗೆದಲ್ಲೆ ನೀಲಮ್ಮ ನೀನು
ಹೆತ್ತ ತಾಯ ಮರೆತು ಬಿಟ್ಟೆ ನೀಲಮ್ಮ ಒಡ
ಹುಟ್ಟಿದಣ್ಣಗಳಿಗೆ ನೀಲಮ್ಮ ನೀನು
ಕಿಚ್ಚನಿಕ್ಕಿ ಹೋದಂತೆ ಕಾಣೆ ನೀಲಮ್ಮ
ತಟ್ಟಿ ಮರಿಯಲಿ ಕುಳಿತುಕೊಂಡೆ ನೀನು
ದಿಟ್ಟ ಪಾವಡ ಮೆರೆದೆ ನೀಲಮ್ಮ
ಸಂಗನಬಸವನ ಶರಣೆ ನೀಲಮ್ಮ ನೀನು
ಲೋಕಕ್ಕೆ ಪಾವಡ ಮೆರೆದೆ ನೀಲಮ್ಮ"[೭]

ನೀಲಮ್ಮ ಎಷ್ಟು ದಿವಸ ಕುರುಗೋಡಿನಲ್ಲಿ ವಾಸ ಮಾಡಿದರೂ ಪಾದವನ್ನು ಯಾರು ಕೂಡ ನೋಡಿದವರಿಲ್ಲ. ಗೌಡರ ಮನೆಮಗಳಾಗಿ ಕುರುಗೋಡು ಬಸವನಿಗೊಲಿದೆ. ಏಳು ವರ್ಷದ ಮಗುವಿರುವಾಗಲೇ ಬಚ್ಚಲಿನಿಂದ ಮಾಯವಾಗಿ ದೃಢವುಳ್ಳ ಶರಣೆಯಾದೆ. ಯಾರಿಗೂ ಕಾಣದೆ ತಟ್ಟಿ ಪರಿಧಿಯಲ್ಲಿ ಕುಳಿತು ದಿಟ್ಟ ಪವಾಡಗಳನ್ನು ಮಾಡಿರುವ ಬಗೆಯನ್ನು ಈ ಸ್ತೋತ್ರದಲ್ಲಿ ವಿವರಿಸಲಾಗಿದೆ.

### ಮಂಗಳಾರತಿ ಪದ

"ಕರ್ಪೂರದಾರತಿ ಕರದೊಳಗಿಡಕೊಂಡು
ದೇವಿಗೆ ಬೆಳಗಾನು ಬಾ
ನಮ್ಮ ತಾಯಿಗೆ ಬೆಳಗನು ಬಾ

ನೆನೆಯಕ್ಕ ನೆಲಗಡಲೆ ಗೊನಿಯ ಬಾಳೆಯ ಹಣ್ಣು
ಉಡಿಯನು ತುಂಬನು ಬಾ
ನಮ್ಮ ತಾಯಿಗೆ ಬೆಳಗನು ಬಾ

ಹಣೆಗೆ ಕುಂಕುಮ ಧರಿಸಿ ಸುಲಿಯೋ ತೆಂಗಿನ ಕಾಯಿ
ನಮ್ಮ ದೇವಿಗೆ ಒಡಸಾನ ಬಾ
ನಮ್ಮ ತಾಯಿಗೆ ಬೆಳಗನು ಬಾ

ವಸುಧೆಯೊಳಗೆ ನಮ್ಮ ಚೌಕಿಯ ನೀಲಮ್ಮ
ದೇವಿಗೆ ಬೆಳಗನು ಬಾ
ನಮ್ಮ ತಾಯಿಗೆ ಬೆಳಗನು ಬಾ"

ಕರ್ಪೂರದ ಆರತಿಯನ್ನು ಕೈಯಲ್ಲಿ ಹಿಡಿದು ತಾಯಿ ದೇವಿಗೆ ಬೆಳಗಿ, ನೆನೆಸಿದ ಅಕ್ಕಿ ಮತ್ತು ನೆಲಗಡಲೆ ಬಾಳೆಹಣ್ಣಿಂದ ತಾಯಿಗೆ ಉಡಿಯನ್ನು ತುಂಬಿ, ಹಣೆಗೆ ಕುಂಕುಮ ಹಚ್ಚಿ ತೆಂಗಿನಕಾಯಿಯನ್ನು ಒಡೆದು ಆರತಿಯನ್ನು ತಾಯಿಗೆ ಬೆಳಗುವುದರಿಂದ ಶುಭವಾಗುವ ಆಶಯದ ಮನೋಭಾವನ್ನು ಹೊತ್ತು ಭಕ್ತ ಜನಸಮೂಹ ಈ ಹಾಡಿನ ಮೂಲಕ ಮಂಗಳಾರತಿ ಮಾಡುತ್ತಾರೆ ಎಂಬುದನ್ನು ಕೃತಿ ಉಲ್ಲೇಖಿಸುತ್ತದೆ.

## ನೀಲಮ್ಮನ ಕಾಲಜ್ಞಾನ

"ಒರಲಕ್ಕಿ ಪದ
ಸುವ್ವಿ ಬಾ ಸಂಗಯ್ಯ ಸುವ್ವಿ ಬಾ ಲಿಂಗಯ್ಯ
ಸುವ್ವಿ ಬಾ ಚೆನ್ನಬಸವಯ್ಯ ಸುವ್ವಿ
ಅಕ್ಕನಾಗಮ್ಮನು ಚಿಕ್ಕವನಿಗೆ ಪಿಡಿದು
ಅಕ್ಕಿವಮ್ಮಾನ ತೊಳಿಸುತ್ತ ಸುವ್ವಿ
ಅಕ್ಕಿ ವಮ್ಮಾನ ತೊಳಿಸುತ್ತ ಪಾಡಿದಳು
ಮುಕ್ಕಣ್ಣ ಶಿವನು ಬರುವಾಗ ಸುವ್ವಿ
ಮಾತಂಗವಳಿದಾವು ಮನ್ಮಥ ಕೆಟ್ಟಾವು
ಆತನ ಮಾತು ಹುಸಿಯಲ್ಲ ಸುವ್ವಿ
ಆತನ ಮಾತು ಹುಸಿಯಲ್ಲ ಹಂಪಿಯ
ಗೋಪುರವೆಲ್ಲಾ ಲಯವೆದ್ದೊ ಸುವ್ವಿ
ಸೊಪ್ಪಿನ ಕಟ್ಟಿಯಲ್ಲಿ ಸುಲಿವಾನು ಪ್ರಜೆಗಳ
ತಪ್ಪದೇ ಮನೆಮನೆಗಳನು ಸುವ್ವಿ
ತಪ್ಪದೇ ಮನೆಮನೆಗಳನು ಸುಟ್ಟಾರು
ಒಪ್ಪದಿಂದ ಊರ ಪ್ರಜೆಗಳನು ಸುವ್ವಿ
ಹತ್ತು ಬೆರಳಿಗೆ ಬತ್ತಿಯನು ಸುತ್ತಿ ಸುವ್ವಿ
ಹತ್ತಿಸಿ ಎಣ್ಣೆ ಬತ್ತಿಗಳನು ಸುವ್ವಿ
ಹತ್ತಿಸಿ ಎಣ್ಣೆ ಬತ್ತಿಗಳಿಂದ ದೊರೆಗಳಾ
ನೆತ್ತಿಯಲಿ ಅಂಬ ಹೊಸೆವರು ಸುವ್ವಿ

ಬಾಜ ಬಜಾರವು ರಾಜ ಬೀದಿಯೊಳಗೆ
ಗಾಜಿನ ಬಳೆಗಳ ಹೊಡೆವರು ಸುವ್ವಿ
ಗಾಜಿನ ಬಳೆಗಳ ಹೊಡೆವರು ಮುಂದಿನ್ನು
ಮೂಜಗವೆಲ್ಲಾ ಬೆರಗಾಗಿ ಸುವ್ವಿ
ಗುಡಿಗೋಪುರಗಳ ಹೊಡೆವರು ತುರುಕರು
ಹೊಡೆವರು ಪ್ರತಿಮೆಗಳ ಸುವ್ವಿ
ಹೊಡೆವರ ದೇವ ಪ್ರತಿಮೆಗಳ ದೇಗುಲಕ್ಕೆ
ಅವ್ವಾವನೆತ್ತಿ ಹೊಡೆವರು ಸುವ್ವಿ."೮

ಒರಲಕ್ಕಿ ಪದದ ಕೆಲವು ಸಾಲುಗಳನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ. ಸುವ್ವಿ ಸುವ್ವಿ ಎನ್ನುವ ಪದವನ್ನು ಜನಸಮುದಾಯ ಕೆಲವು ಕಾರ್ಯಗಳಲ್ಲಿ ನಿರತರಾದಾಗ ಹಾಡುತ್ತಾರೆ. ಅಕ್ಕಿ ಕುಟ್ಟುವಾಗ, ರಾಗಿ ಬೀಸುವಾಗ ಹೀಗೆ ಅನೇಕ ಕೆಲಸ ಕಾರ್ಯಗಳಲ್ಲಿ ಹಾಡುವುದನ್ನು ಕಾಣಬಹುದು. ಈ ಒರಲಕ್ಕಿ ಪದದಲ್ಲಿ ಕಾಣಸಿಗುವುದು ಎರಡು ವರ್ಗಗಳ ನಡುವಿನ ಘರ್ಷಣೆ, ಸಹಿಸಲಾಗದ ಕೋಪ, ಅಸೂಯೆ, ಸೇಡು ಇತ್ಯಾದಿ ಗುಣಗಳನ್ನು ಕಾಣಬಹುದು.

ಡಾ. ಎನ್.ಎಸ್.ಹೆಚ್. ಉತ್ತಂಗಿಯವರ ಕೃತಿ "ಶ್ರೀ ಗುರುದೊಡ್ಡ ಬಸವೇಶ್ವರ ಸುಪ್ರಭಾತ ಹಾಗೂ ಭಕ್ತಿಗೀತೆಗಳು". ಈ ಕೃತಿಯಲ್ಲಿ ಗದ್ದಿಕೆರೆ ದೊಡ್ಡಬಸಪ್ಪನ ಕುರಿತು ಕಟ್ಟಿರುವ ಸುಪ್ರಭಾತ ಮತ್ತು ಭಕ್ತಿಗೀತೆಗಳು ಈ ಕೃತಿಯಲ್ಲಿ ನೀಡಿದ್ದಾರೆ.

**ಸುಪ್ರಭಾತ**

"ಓಂ ಸದಮಲ ಗುರುವೇ ಶ್ರೀ ಶರಣ ದೊಡ್ಡ ಬಸವೇಶ್ವರಾಯ ನಮಃ
ನಿನ್ನ ಪಾದ ಪಂಕಜಗಳಿಗೆ ಎನ್ನ - ಅನಂತಾನಂತ ಕೋಟಿ ಪ್ರಣಾಮಗಳು
ದಿವ್ಯ ದರುಶನದ ಬೇಡಿ ಬಯಸಿದ ಮುಗ್ಧ ಭಕ್ತನಿವನು ಗೈವ
ಸುಪ್ರಭಾತವು ನಿನಗೆ ಶ್ರೀ ಗುರುವೆ ಶರಣ ದೊಡ್ಡ ಬಸವೇಶ್ವರ
ಬ್ರಹ್ಮಾಂಡವೆ ಅಂಧಕಾರದ ಸನ್ನಣದಿಂ ಕವಿದು ನಿಂತಿರಲೂ
ಮೂಡಣದಿಂ ಬಿಸುಗದಿರ ಹೊಂಬಣ್ಣ ಸೂಸುತಾ ಬರುತ್ತಿರಲು
ಕೆಂಗುದುರೆ ಮಾಸಾಳ್ ನಿನ್ನಡಿದಾವರೆಗೆ ಧಾವಿಸಿದ ಕರುಣಿಸೈ ಸದ್ಗುರುವೆ
ಸುಪ್ರಭಾತವು ನಿನಗೆ ಶ್ರೀ ಗುರುವೆ ಶರಣ ದೊಡ್ಡ ಬಸವೇಶ್ವರ
ಬೆಟ್ಟ ಗುಡ್ಡಗಳನು ದಾಟಿ ಏಳು ಬಣ್ಣವನೊತ್ತು ಭುವಿಯೊಳು ರಂಜಿಸಿ
ಕಾಲ್ಗೆಜ್ಜೆಯಿಂ ನರ್ತಿಸುತ ಆರುತಿ ತಟ್ಟೆಯನ್ನೆತ್ತಿ ಬರುತಿಹಳು ಉಷೆ
ಕೆಂದಾವರೆ ಸೀರೆಯನ್ನುಟ್ಟು ಅದಕೊಪ್ಪ ಕುಪ್ಪಸ ತೊಟ್ಟು ನಿಂತಿಹಳು ದರುಶನಕೆ
ಸುಪ್ರಭಾತವು ನಿನಗೆ ಶ್ರೀ ಗುರುವೆ ಶರಣ ದೊಡ್ಡ ಬಸವೇಶ್ವರ
ಮುಂಗೋಳಿಯು ಕೂಗಿ ನಿನ್ನಯ ಸೇವೆಗೆಂದು ಭಕ್ತರನು ಎಚ್ಚರಿಸುತಿಹದು

ಕ್ರೌಂಚ ಪಕ್ಷಿಯು ಸಂಕಲ್ಪದಿ ನಿಂತು ನಿನ್ನ ಧ್ಯಾನ ಗೈಯುತ್ತಿಹವು
ಸಕಲಕೆಲ್ಲಕೆ ನೀನು ಅಕಳಂಕ ಗುರು ಶ್ರೀ ಶರಣ ಗದ್ದಿಕೆರಿ ಮರುವಾಸನೆ
ಸುಪ್ರಭಾತವು ನಿನಗೆ ಶ್ರೀ ಗುರುವೆ ಶರಣ ದೊಡ್ಡ ಬಸವೇಶ್ವರ
ಗಾನ ಕೋಗಿಲೆಯು ಮಧುರ ಕಂಠದಿ ಹಾಡುವುದು ನಿನ್ನ ಧ್ಯಾನದಿಂ
ಕೇಂದ್ರತಡಿ ಪಕ್ಷಿ ಸಂಕುಲವು ನಿನ್ನ ಸುತ್ತಲು ಸುತ್ತಿ ಪ್ರದಕ್ಷಿಸುತಿಹವು
ನಿರುಪಮ ನಿರಾಮಯ ನಿರಂಜನನೆ ಪಶುಪತಿಯ ಪರಿಪೂರ್ಣ ಗುರುವೆ
ಸುಪ್ರಭಾತವು ನಿನಗೆ ಶ್ರೀ ಗುರುವೆ ಶರಣ ದೊಡ್ಡ ಬಸವೇಶ್ವರ
ಮಾರ್ತಂಡ ರಶ್ಮಿ ಸೋಂಕದ ಮುನ್ನ ನಿನ್ನಾಲಯದ ಕಸವ ಗುಡಿಸಿ
ಪ್ರಾಂಗಣದ ಸಾರಿಸಿ ರಂಗವಲ್ಲಿಯನು ವಸಾರೆಗೆ ಹಾಕಿಯರು
ಅರುಣೋದಯದಲಿ ಮಿಂದು ಸೇವೆಗೈಯುತಿಹ ಭಕ್ತರಿಗೆ ಕೃಪೆ ನೀಡೋ ಸದ್ಗುರುವೇ
ಸುಪ್ರಭಾತವು ನಿನಗೆ ಶ್ರೀ ಗುರುವೆ ಶರಣ ದೊಡ್ಡ ಬಸವೇಶ್ವರ
ಮಹಿಮಾನ ತಾರಿಗೆಂದೇ ಮೊಗ್ಗರಳಿದ ಮಂದಾರ ಪುಷ್ಪಗಳು ಹಂಬಲಿಸುತಿವೆ
ದುಂಬಿ ಸೋಂಕದ ಮುನ್ನ ಮಡಿಯಿಂದ ನಿನ್ನ ಚರಣ ಪೂಜೆಗೆ ತಂದೆ
ದಿವ್ಯ ಜ್ಯೋತಿಯ ಬೀರಿ ಮುನ್ನಡೆಸೊ ಶ್ರೀ ಗುರುವೆ ಸತ್ಯ ಪರಂಜ್ಯೋತಿ
ಸುಪ್ರಭಾತವು ನಿನಗೆ ಶ್ರೀ ಗುರುವೆ ಶರಣ ದೊಡ್ಡ ಬಸವೇಶ್ವರ
ತುಂಗ ಭದ್ರೆಯೊಳು ತಂದ ಗಂಗಾ ಮಾತೆಯನು ತೀರ್ಥಗೊಳಿಸಲು
ಚಲುವ ಚನ್ನಿಗ ಚನ್ನಬಸವೇಶನು ನಿನ್ನ ಸೇವೆಯೊಳು ತಂಗಿಹನು
ಸದ್ಭಕ್ತ ನೇತ್ರ ಸಂಪ್ರೀತ ವೀರಶೈವದ ಸೂತ್ರನೆ ಕೃಪೆ ನೀಡೊ ಪಾವನನೆ
ಸುಪ್ರಭಾತವು ನಿನಗೆ ಶ್ರೀ ಗುರುವೆ ಶರಣ ದೊಡ್ಡ ಬಸವೇಶ್ವರ"

ಭಕ್ತನು ಶರಣ ಗದ್ದಿಕೆರೆ ದೊಡ್ಡ ಬಸಪ್ಪನವರಿಗೆ ರಾತ್ರಿ ಕಳೆದು ಬೆಳಗಾದ ದಿನದಲ್ಲಿ ತನ್ನ ಕಷ್ಟಗಳನ್ನು ಕಳೆದು ದರುಶನ ನೀಡಿ ದಿನವೆಲ್ಲ ಕಾಪಾಡಿ ತಂದೆ ಎಂಬ ತನ್ನ ಮನದ ಭಕ್ತಿಯನ್ನು ಪದದ ಮೂಲಕ ತಿಳಿಸಲಾಗಿದೆ. ಸೂರ್ಯನ ಕಿರಣಗಳು ನಿನ್ನ ಗುಡಿಯೊಳು ಬರುವ ಮುಂಚೆಯೇ ಎದ್ದು ನಾನಿಲ್ಲಿ ನಿನ್ನ ಗುಡಿಯನ್ನು ಗುಡಿಸಿ, ತೊಳೆದು ಶೃಂಗರಿಸಿರುವ ಸಂತೋಷದಿ ಬಂದು ಈ ಭಕ್ತನನ್ನು ಆಶೀರ್ವದಿಸೆಂದು ಈ ಸುಪ್ರಭಾತದ ಮೂಲಕ ಕೇಳಿಕೊಳ್ಳಲಾಗಿದೆ.

## ಕಮಲ ಚರಣಕ್ಕೆ ಶರಣಾದೆನಯ್ಯ

"ಶರಣು ಶರಣು ನಿನ್ನ ಕಮಲ ಚರಣಕ್ಕೆ ಶರಣಾದೆನಯ್ಯ ।
ಶರಣರ ಸ್ಮರಣೆಯಲಿ ಸದಾ ದೇಹ ಸವೆಸುವೆನಯ್ಯ ॥
ಮಲಗಿ ಏಳುವ ಮುನ್ನ ಎಡಬಿಡದೆ ಸ್ಮರಿಸುವೆನಯ್ಯ ।
ಪ್ರಸಾದ ಸೇವನೆ ಪೂರ್ವ ಶಿವ ಮಂತ್ರ ಜಪಿಸುವೆನಯ್ಯ॥
ನಿತ್ಯ ಕಾಯದೊಳು ತನುಮನವು ನಿನಗರ್ಪಣೆಯಯ್ಯ।

ಕಡು ಪಾಪಿಯೊಳು ಬಿಡದೆ ಕರುಣೆಯಿಂದ ನೀ ಸಲವಯ್ಯ ॥
ಎನ್ನ ಆತ್ಮದೊಳು ಕಲ್ಮಶವು ತುಂಬಿದೇ ನೀ ನೋಡಯ್ಯ ।
ಕಾಯಕಲ್ಪವ ನೀ ಎಮಗೆ ಮರೆಯದೇ ತೋರಯ್ಯ ॥
ತೋರದಿರ್ದೊಡೆ ನಾ .... ನಿನ್ನ ಚರಣ ಬಿಡೆನಯ್ಯ ।
ಸದ್ಭಕ್ತರ ಸಂಕಷ್ಟಗಳನ್ನು ತೊಲಗಿಸುವೆಯಯ್ಯ॥
ಕರದೊಳು ಚರಪಿಡಿದು ಪೂಜಿಸಿ ಪುಸ್ತಕಕೇರಿಸುವೆನಯ್ಯ ।
ಕರುಣೆಯಾ ಕಣ್ತೆರೆದು ನಿನ್ನ ಕಂದನಾ ನೋಡಯ್ಯ ॥
ಅಯ್ಯಾ ಈ ಕಡು ಪಾಪಿಯ ತಾಪವನರಿಯಯ್ಯ ।
ಭವರೋಗ ಪರಿಹರಿಸಿ ನಿರೋಗಿಯನ್ನಾಗಿಸಯ್ಯ ॥
ಪುಣ್ಯ ಮೂರ್ತಿಯ ಸತ್ಯ ಪರಂಜ್ಯೋತಿ ನೀನಯ್ಯ।
ನಿನ್ನ ನಂಬಿದ ಮುಗ್ಧ ತೃಣ ಭಕ್ತ ನಾನಯ್ಯ ॥
ಭಕ್ತಿ ರಸದಿಂ ಉತ್ತಂಗಿ ಹಾಲೇಶ ರಚಿಸಿದನಯ್ಯ।
ಹರ ಗುರು ಚರ ದೊಡ್ಡ ಬಸವೇಶ್ವರನಿಗೆ ನಮಿಪೆನಯ್ಯ ॥"[೧೦]

ಭಕ್ತ ಶರಣ ದೊಡ್ಡಬಸಪ್ಪನ ಪಾದಗಳಿಗೆ ಬಿದ್ದು ತಾನು ಮಾಡಿದ ತಪ್ಪುಗಳನ್ನು ಕ್ಷಮಿಸಿ ನಿನ್ನ ಅನುಗ್ರಹದಿಂದ ಶುಭವನ್ನು ನೀಡೆಂದು ಪದದ ಮೂಲಕ ಮೊರೆಹೋಗಿರುವುದು ತಿಳಿದುಬರುತ್ತದೆ.

## ಯೋಗಿಯು ನೀನಾದೆ

"ಯೋಗಿಯು ನೀನಾದೆ । ತ್ಯಾಗಿಯು ನೀನಾದೆ ॥
ನಾನಾ ವೇಷದಲಿ । ಅವತಾರ ಪುರುಷನಾದೆ ॥
ತನು ಮನ ಧನವನ್ನು । ಶಿವನಡಿಗೆ ಅರ್ಪಿಸಿ ॥
ಕರ ಕಾಯದೊಳು । ಭವಣಿಯ ತೋರಿಸಿದೆ ॥
ವರಪುತ್ರ ನೀನಾಗಿ । ಭುವಿಯೊಳಗೆ ನೆಲೆಸಿದ್ದು ॥
ಪ್ರತ್ಯಕ್ಷ ಶಿವಯೋಗಿ । ನೀನಾದೆ ದೊಡ್ಡಬಸವ ॥
ಅನಂತ ಕರುಣೆ ತೋರಿ । ನೋಡಯ್ಯ ನೀ ನಮ್ಮ ॥
ಭವಣಿಯ ಕಡೆ ಗಣಿಸಿ । ಪಾವನವ ಮಾಡಯ್ಯ ॥
ಕನಸೊಳು ಮನಸೊಳು । ನಿನ ನಾಮ ಸ್ಮರಿಸುತಲಿ ॥
ಕಳೆಯುತಿರುವೆ ಅನುದಿನ । ದರುಶನವ ನೀಡಯ್ಯ ॥
ಪರಮ ತೇಜೋಪರನೆ । ಪರಿಪೂರ್ಣಭಕ್ತ ವತ್ಸಲನೆ ॥
ಸದ್ಭಕ್ತ ವೃಂದರಿಗೆ । ಅರುವಿನಾಗರ ನೀನಾದೆ ಶರಣ ॥
ಭಕ್ತಿರಸದಿಂ ರಚಿಸಿ । ಉತ್ತಂಗಿ ಹಾಲೇಶನು ॥
ಕೃಪೆಗೆಂದು ಕರವೊಡ್ಡಿ । ಬೇಡಿದನು ನಿನ್ನಡಿಗೆ ಶರಣ ॥"[೧೧]

ಭಕ್ತನು ಶರಣ ದೊಡ್ಡಬಸವನನ್ನು ವರ್ಣಿಸುತ್ತಿರುವುದನ್ನು ಕಾಣಬಹುದಾಗಿದೆ. ನಿನ್ನನ್ನೇ ನೀನು ಶಿವನಡಿಗೆ ಅರ್ಪಿಸಿ ನಿನ್ನ ಕೈಗಳಿಂದ ಕಾಯಕವನ್ನು ಮಾಡಿ ಶಿವನಿಗೆ ಒಲುಮೆಯಾಗಿ ಅವನ ವರಪುತ್ರನಾಗಿ ಈ ಭೂಮಿಯ ಮೇಲೆ ಕಣ್ಣಿಗೆ ಕಾಣುವ ದೈವಸ್ವರೂಪಿಯಾಗಿದ್ದೆ. ನೀನೆಂದು ವರ್ಣಿಸುತ್ತ ನಿನ್ನ ನಂಬಿದ ಭಕ್ತರನ್ನು ಕಾಪಾಡೆಂದು ಬೇಡುವ ಪರಿ ಈ ಪದದಲ್ಲಿದೆ.

## ಜ್ಯೋತಿ ಬೆಳಗಿತು

"ಜಗದೊಳಗೆ ಚಂದದೀ ದೊಡ್ಡ ಬಸವನಾ ಜ್ಯೋತಿ ಬೆಳಗಿ ।
ಮಿಂಚುತಿದೆ ಮನಕೆ ದಿನವೆಲ್ಲ ಅಂಧಕಾರವನಳಿಸಿ ॥
ಹುಟ್ಟು ಸಾವುಗಳ ಮರೆಸಿ ಶಿವ ಸನ್ನಿಧಿಯೊಳು ಬೆರೆಸಿ ।
ಬೆಳಗುತಿದೆ ಬೆಳಗುತಿದೆ ಪರಂಜ್ಯೋತಿ ತಾನಾಗಿ ಬೆಳಗುತಿದೆ ॥
ಶರಣರೊಳಗೆ ಶರಣ ತಾನಾಗಿ ಶಿವ ಶರಣ ಮಂಟಪದಿ ।
ಮಂತ್ರವನು ಸ್ಫಟಸುತಲಿ ಝೇಂಕಾರ ಸುರಿಸುತಲಿ ॥
ನಲಿಯುತ ನವಿಲಿನಂದದಿ ಹೊಳೆವ ಮೈಬಣ್ಣ ಗೂಡಿಸಿ ।
ಬೆಳಗುತಿದೆ ಬೆಳಗುತಿದೆ ಅಗಣಿತ ಗುಣದಿಂದ ಬೆಳಗುತಿದೆ ॥
ನಂಬಿ ಕರೆದರೆ ಓ — ಎಂದು ಮನದಲ್ಲೆ ನೆಲೆಸುವ ।
ವಾಸದಲಿ ಘಾಸಿಸದೇ ಮುಂದೆ ನಡೆದರೆ ಮಿಂಚಿಸುವ ॥
ನಾಸ್ತಿಕರು ಚರಣವ ಹಿಡಿದು ಪೂಜಿಸಲು ಮುಕ್ತಿ ಮಾರ್ಗಕ್ಕೆ ।
ಬೆಳಗುತಿದೆ ಬೆಳಗುತಿದೆ ನಿರಾಕಾರ ವಸ್ತು ತಾನಾಗಿ ಬೆಳಗುತಿದೆ ॥"[೧೩]

ದೊಡ್ಡ ಬಸವನು ಈ ಜಗದಲ್ಲಿ ಜ್ಯೋತಿಯಾಗಿ ಬೆಳಗುತ್ತಿದ್ದಾನೆ. ಈ ಬೆಳಗುವ ಜ್ಯೋತಿಯು ಭಕ್ತರ ಬಾಳಿಗೆ ಬೆಳಕಾಗುತ್ತಿದೆ. ಶರಣರಲ್ಲಿ ಶರಣನಾದ ದೊಡ್ಡಬಸವ ನಂಬಿ ಕರೆದರೆ ಅವರ ಮನದಲ್ಲಿಯೇ ಬಂದು ಆಶೀರ್ವದಿಸುವವನೆಂಬ ನಂಬಿಕೆಯನ್ನು ಈ ಪದದಲ್ಲಿ ಅಭಿವ್ಯಕ್ತಪಡಿಸಿರುವುದು ಕಾಣಸಿಗುತ್ತದೆ.

## ತೇರ ಎಳಿತ

"ತೇರ ಎಳಿತ ಗುರುವಿನ ತೇರ ಎಳಿತ।
ನಿಜ ಭಕ್ತಿಯಿಂದ ಕೂಡಿತ್ತು ಜನಕೋಟಿ ನೆಲೆಸಿತ್ತಾ॥

ಗಟ್ಟಿಯಾಗಿ ಗಡ್ಡಿಯ ಮಾಡಿತ್ತಾ, ಚಿತ್ತಾರ ಬಿಡಿಸಿತ್ತಾ।
ಎಷ್ಟು ಹೇಳಿದರೇನು ಮುಗಿದೀತಾ ಕಂಡವಗೇ ಗೊತ್ತಾ॥

ಹುಟ್ಟಿದ ಸುತನು ನೋಡಿದ್ದಿಲ್ಲ ಇದರ ಅಂದ ಕಂಡವ ಬಲ್ಲ।
ಗಟ್ಟಿಯಾಗಿ ಕೀಲ ಜಡಿದಿತ್ತಾ, ಬಿಗಿಯಾಗಿ ಹೋತ॥

ಗುರುವಿನ ನಾಮದೊಳಗೆ ಸಾಗಿತ್ತಾ,
ಪರಮಾತ್ಮನಾ ಕೃಪೆಯೇಳು ಕೂಡಿತ್ತ।
ಸಾಗಿದ ತೇರ ಭಕ್ತರು ನೋಡಲು, ಇದುವೇ ಲೋಕ ಶಿವ ಕೈಲಾಸ॥
ನಂದೀ ಪುರದೊಳಗೆ ನೆಲೆಸಿದ ತೇರಿತ್ತಾ,
ಭಕ್ತರ ಮನವನು ತಣಿಸಿತ್ತಾ॥
ಉದ್ದದ ಆಧಾರ ವಿಡಿದು ವಿಡಿದು, ಜಲ್ಲಿಗೆ ತಳಸವಿಟ್ಟತ್ತ।
ಗದ್ದಿಕೆರೆ ಶರಣ ದೊಡ್ಡ ಬಸವನಾ, ಧ್ಯಾನದೊಳಗೆ ನಡೆದಿತ್ತಾ॥"೧೪

ಊರಲ್ಲಿ ದೊಡ್ಡಬಸವನ ತೇರನ್ನು ವರುಷಕ್ಕೊಮ್ಮೆ ಎಳೆಯುತ್ತಾರೆ. ಭಕ್ತರೆಲ್ಲರೂ ಸಂತಸದಿಂದ ಪಾಲ್ಗೊಂಡು ಈ ರಥೋತ್ಸವವನ್ನು ನಡೆಸುತ್ತಾರೆ. ತೇರ ಎಳೆದಾದ ಮೇಲೆ ಮತ್ತೊಮ್ಮೆ ದೊಡ್ಡಬಸವನಿಗೆ ಕೈ ಮುಗಿದು ದರುಶನ ಪಡೆದು ಪದದ ಮೂಲಕ ತೇರಿನ ವರ್ಣನೆಯನ್ನು ತಿಳಿಸುತ್ತಾ ಪೂಜೆಯನ್ನು ಸಲ್ಲಿಸಿ ದೊಡ್ಡಬಸವನ ಆಶೀರ್ವಾದ ಪಡೆಯುವ ಬಗೆಯು ಈ ಪದದಲ್ಲಿದೆ.

## ಶರಣು ಬಂದಿರುವೆ

"ಗದ್ದಿಕೆರಿ ಶ್ರೀ ಗುರು ದೊಡ್ಡ ಬಸವೇಶ ।
ಶರಣು ಬಂದಿರುವೆ ಕಾಯೋ ಪರಮೇಶ ॥
ದೀನರ ಮೊರೆಯನ್ನು ಲಾಲಿಸೋ ಈಶ ।
ಗುರು ಬಸವೇಶ ಗದ್ದಿಕೆರಿ ಪುರವಾಸ ॥
ಜನ ಬರುವರೆಂದು ಬಂದೆ ನಾ ನಿನ್ನಡಿಗೆ ।
ಮನಕೆ ಅರಿವಾಯಿತು ನಿನ್ನ ಘನ ಮಹಿಮೆ ॥
ಶರಣರ ರೂಪದಿ ನೀನವತರಿಸಿದೆ ।
ಚರಣ ಕಮಲಕ್ಕೆ ಶಿರಬಾಗಿ ನಮಿಸುವೆ ॥
ಗದ್ದಿಕೆರಿ ಪುರದೊಳಗೆ ಐಕ್ಯಾದ ಶರಣನೆ ।
ನೆನೆದಾಗ ಬರುವೆನೆಂದಭಯವಿತ್ತೀಶನೆ ॥
ನಿನ ನಾಮ ಸ್ಮರಣೆಯನ್ನೆ ಅನುಗಾಲ ಭಜಿಸುವೆ ।
ಘನ ದರುಶನ ತೋರಿ ಪಾವನಗೊಳಿಸೊ ॥
ಧರಣಿ ಮಂಡಲದೊಳಗೆ ಮೆರೆಯುವ ನಂದೀಶ ।
ಭಕ್ತರ ಕರೆಯನ್ನು ಮನ್ನಿಸೋ ಜಗದೀಶ ॥
ಉತ್ತಂಗಿ ಹಾಲೇಶ ರಚಿಸಿದನು ಸ್ಮರಣೆಯಲಿ ।
ಕರುಣಿಸಿ ಕಾಪಾಡೊ ಅನುಗಾಲವೆಮಗೆ ॥"೧೫

ದೊಡ್ಡ ಬಸವನ ಮಹಿಮೆಯನ್ನರಿತ ಭಕ್ತ ಶರಣ ಭಕ್ತಿಯನ್ನು ತಿಳಿಸುತ್ತ ತಾನು ಮಾಡಿದ ತಪ್ಪಿಗೆ ಶಿರಬಾಗಿ ನಮಿಸುವೆ. ಕೈ ಹಿಡಿದು ಕಾಪಾಡಿ ಮುನ್ನಡೆಸು ತಂದೆ. ಮಹಾಮಹಿಮನಾದ

ನೀನು ನಿನ್ನ ನೆನೆದವರ ಮನದಲ್ಲಿ ಬಂದು ಕಾಪಾಡುವೆ. ಈ ಭೂಮಿಯ ಮೇಲೆ ಭಕ್ತ ಸಮುದಾಯದಿಂದ ಪೂಜಿಸಿಕೊಳ್ಳುತ್ತಿರುವ ನೀನು ಈ ಭಕ್ತರನ್ನು ಕಾಪಾಡು; ಕರುಣಿಸೆಂದು ಕೇಳಿಕೊಳ್ಳುತ್ತಿರುವುದನ್ನು ಕಾಣಬಹುದಾಗಿದೆ.

## ಪುಣ್ಯಕ್ಷೇತ್ರ

"ಎಂಥ ಪುಣ್ಯ ಎಂಥ ಧನ್ಯ
ಮಹಾ ಪುಣ್ಯ ಕ್ಷೇತ್ರವು ।
ಮಹಾ ಶರಣ ದೊಡ್ಡ ಬಸವ
ನೆಲೆಸಿದಾ ವಾಸವು ॥
ಕರುಣಾ ಮೂರ್ತಿಯ ದರುಶನವೇ
ಭವ ಪಾವನವು ।
ನಿತ್ಯ ಮನದೊಳು ಧ್ಯಾನ ಮಾಡಲು
ಗುರುವಿನ ದರುಶನವು ॥
ಸತ್ಯ ಶರಣರ ಚರಣಕೆ ನಮಿಸಲು
ಪಾಪ ಕರ್ಮ ವಿನಾಶವು ।
ದೊಡ್ಡ ಬಸವೇಶನ ನಂಬಿದೊಡೆ
ಸಕಲವು ಲಭಿಸುವವು ॥
ಗದ್ದಿಕೆರಿ ಪುರದೊಳು ಜೀವಂತ ಸಮಾಧಿಯು
ಆದಂತ ಶರಣನು ।
ನೆನೆದರ ಮನದೊಳು ನೆಲೆಸುವೆನೆಂದು
ಸತ್ಯ ನುಡಿಗಳ ನುಡಿದಿಹನು ॥
ದಿವ್ಯ ಗದ್ದಿಗಿಗೆ ನಮಿಸಿದಿರೆಂದೊಡೆ
ನರ ಜನ್ಮಕೆ ಸಾರ್ಥಕವು ।
ಇಂತಹ ಶರಣನ ನಂಬಿದ ಭಕ್ತರಿಗೆಂದೆಂದಿಗೂ
ಸುಖಕರ ಜೀವನವು ॥"[೧೬]

ಗದ್ದಿಕೆರೆ ದೊಡ್ಡಬಸಪ್ಪನವರು ನೆಲೆಸಿದ ಗದ್ದಿಕೆರೆ ಕ್ಷೇತ್ರವನ್ನು ಪುಣ್ಯಕ್ಷೇತ್ರವೆಂದು ಹೇಳಿರುವುದು ಇಲ್ಲಿ ಕಾಣಬಹುದಾಗಿದೆ. ಗದ್ದಿಕೆರೆ ದೊಡ್ಡಬಸವನ ನೆನೆಯುವುದೊಂದೇ ಅಲ್ಲ, ಅವರ ದರ್ಶನವನ್ನು ನಿತ್ಯ ಮಾಡಬಹುದಾಗಿದೆ. ಈ ಗದ್ದಿಕೆರೆಯ ಜನರ ಕಷ್ಟ ನಿವಾರಣೆ ಮಾಡಿದ ಮಹಾಪುರುಷರ ಕ್ಷೇತ್ರದಲ್ಲಿರುವುದು ಊರಿನ ಜನರ ಭಾಗ್ಯವೆನ್ನುವುದು ಈ ಪದದಲ್ಲಿ ಕೊಂಡಾಡಲಾಗಿದೆ.

ಶಿಲವೇರಿ ಶಿವಪ್ಪನವರು ಸ್ವತಃ ತಾವೇ ರಚಿಸಿದ ತತ್ವಪದಗಳಲ್ಲಿ ಕೆಲವನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ.

## ಅರುವು-ಮರುವು-ಕುರುಹು ಕೂಡಿ

"ಕನಸು ಕಂಡೆನೆ ಮನಸುಯಿಟ್ಟೆನೆ
ದಿನಶಿಯೊಳಗೆ ದಿನ ಸಾಗಿ ನಾ ಧೈರ್ಯತೊಟ್ಟೆನೇ
ವಂದೇ ಕನಸದು ಯೆಂದಿಗೋಗದು
ಮಂದಿಯಂತೆ ಮರುವಿನೊಳಗೆ ಯೆಂದಿಗಾಗದೂ
ಬಿದ್ದ ಕನಸದೊ ಬೀಳತಲಿಹುದೊ
ಶುದ್ಧವಾದ ಸುದ್ದಿಯೊಳಗೆ ಯೆಂದಿಗಾಗದೊ.
ಅರುವಿನೊಳು ಯಿಹುದೂ ಮರವು ಬಾರದು
ಅರುವು ಮರವು ಕುರುಹು ಕೂಡಿ ನಿರುತ ಕಾಣ್ವದು
ಹಗಲೇ ಬೀಳ್ವದೂ ಸೊಗಸು ಕಾಣ್ವದೊ
ಜಗದ ಜನರ ಜಾಣತನವು ಕಾಣಬರದೂ
ಘಟದೊಳಿರುವುದೂ ಘಟವರಿಗಿಹದು
ಘಟ ಬೀಳಲು ಪ್ರಾಣ ಪಿಡಿದು ನಟನೆ ಮೊಳ್ದದು
ಪ್ರಾಣ ಕನಸದೊ ಪರಕೇ ಸೇರ್ವುದೂ
ಪೂರ್ಣ ಭಾವದೊಳಗೇ ತಾ ಸಂಪೂರ್ಣ ಕಾಣ್ವದೂ
ಕಂಡ ಕನಸಿದೂ ಕರ್ಮಕಳಿವದೂ
ಮಂಡಲದೊಳು ಪುಣ್ಯವೆಂಬ ಮಾತು ತಿಳಿಪದೂ
ಪಾಪವೆಂಬುದೂ ಪ್ರತ್ಯಕ್ಷ ಕಾಣ್ವದೂ
ಪಾಪಪುಣ್ಯ ಭೀತಿ ಬ್ರಾಂತಿ ನಿಜವು ನಿಲುವುದೂ
ಪಾಪವೆಂಬುದೂ ಪುಣಕಾಣ್ವದೂ
ಪಾಪಕಳಿವ ಅಲ್ಲಿಸಾಹೇಬು ಗುರುಸುಫಲವಿದೂ"[೧೭]

ಕಂಡ ಕನಸನ್ನು ಜನಸಾಮಾನ್ಯರು ನನಸಾಗುವುದೆಂದು ನಂಬಿ ಮನಸನ್ನು ಹಾಳು ಮಾಡಿಕೊಳ್ಳುವ ಸಂಗತಿಗಳಿರಬಹುದು. ಕನಸು ಬೀಳುತ್ತಲೇ ಇರುತ್ತದೆ. ಅದರಿಂದ ಯಾವ ಪುಣ್ಯವಿಲ್ಲ. ಯಾವ ಪಾಪವು ಕಳೆಯುವುದಿಲ್ಲ. ಕಂಡ ಕನಸನ್ನು ಕನಸಿನಲ್ಲಿಯೇ ಕರಗಿಸಿ ಎನ್ನುವ ಸಂದೇಶ ಇಲ್ಲಿದೆ.

## ಬ್ರಹ್ಮ ಪ್ರಕಾಶ

"ಸಾಧುಗಳಿರಾ ಸಾರಿ ಹೇಳುವೆ ಕೇಳಿರಿ
ಪ್ರಥಮ ನಿಮ್ಮಯ ಕುಲಹತ ಮಾಡಿರೀ
ಸತತ ಸ್ವಾಮಿಯ ಕುಲಸ್ಥಿರ ನೋಡಿರೀ
ಕ್ಷಿತಯೊಳು ಹಿರಿಯರೆಲ್ಲಾ ಮಧಿಸಬೇಕಾಯಿತಲ್ಲಾರೀ.
ನಿಮ್ಮ ಪ್ರಕಾಶ ನಿರ್ಮಲ ಮಾಡಿರೀ ಬ್ರಹ್ಮಪ್ರಕಾಶ ಪ್ರಭುವಿನೊಳು ಬೆರೆದಾಡಿರೀ

ಅರಿತವರೆನ್ನುತ ನಿರುತ ನಿಮ್ಮನು ಕಾಯ್ವ
ಸ್ವಾಮಿಯೆಂಬೊ ನಾಮ ಸಾಕ್ಷಿ ತಿಳಿರೀ
ನಾಮ ನಿಮ್ಮವುಯಿಲ್ಲಿನಿಷ್ಠೆಯೆನ್ನಿರೀ
ಗುಣಧಾಮನೆನ್ನುತ ತನ್ನ ಪ್ರೇಮದಿಂ ಪಾಲಿಪ.
ಬಲ್ಲಂತ ಹಿರಿಯರು ಭೇದಿಸಿರೀ
ಅಲ್ಲಿಸಾಹೇಬ ಗುರುವು ಅಧಿಕೆನ್ನಿರೀ
ಯಿಲ್ಲದೋದರೆ ಮರ್ಮೆಯಲ್ಲೇಲ್ಲೀ ಕಾಣಿರೀ."೧೮

ಮಾನವನ ಮನದಲ್ಲಿರುವ ತಾನು ತನ್ನದೆನ್ನುವುದನ್ನು ಕಡಿಮೆ ಮಾಡಿ ಬ್ರಹ್ಮನ ಪ್ರಕಾಶವನ್ನು ಭದ್ರ ಮಾಡಿ ಕಾಪಾಡಿಕೊಳ್ಳುವುದಿಲ್ಲಿ ಮುಖ್ಯವಾದುದಾಗಿದೆ. ನಾನು ಎನ್ನುವ ನಾಮದ ಬದಲಾಗಿ ಸ್ವಾಮಿ ಎನ್ನುವ ನಾಮ ಸ್ಮರಿಸಿದರೆ ಮನುಜನ ಮನಸ್ಸಿನ ಅಹಂ ಮಾಯವಾಗಿ ನಿರ್ಮಲ ಮನಸ್ಸು ಸದಾ ಶಾಂತಿಯಿಂದ ಸಂತೋಷದಿಂದಿರುವುದು ಎಂದು ಹೇಳಲಾಗಿದೆ.

## ನಿಮ್ಮ ಬದಿ ಬಿದ್ದೆನಯ್ಯ

"ಅಂಗ ಸಂಗವೆ ಯನಗೆ ಯಿಂಗಿಸೈ ಗುರುವೇ
ಭಂಗಾವೆಯಿದರ ಪ್ರಸಂಗಾವಸಹ್ಯವೇ
ತೊಳೆಯಲಾರೆ ಅದನಿಲೀ ಕೊಳಲಾನೊಂಬತ್ತಾ
ಕೊಳಕು ಗೂಡುಗಳಲ್ಲಿ ವುಳೆಗಾಳಿಸುತ್ತಾ
ಮ್ಯಾಲೆ ರೋಗದ ಸಾಲೆ ಲೀಲೆಯಿರುಳು ಹಗಲೆ
ತಾಳೆ ಸ್ಥಾಣುವಿನಂತೆ ಸ್ಥೂಲಾಯಿಸಗಳೇ
ಬರೆ ಬಿಟ್ಟೇ ಮೊಟ್ಟೇಯ ಹೊರಲಾರೆನಯ್ಯ
ಧರೆಯಲ್ಲಿ ಯಿಂತಾ ನ್ಯಾಯ ಪರಿಕಾಣೆನಯ್ಯ
ಕೂಲಿ ಕೊಡವರಿಲ್ಲಾ ಕಾಲ್ಯಾಯಿತಲ್ಲಾ
ಕೂಲಿಲ್ಲಾದೊಡತ್ತಾಯ್ತು ಕಂಡೆ ಯಿದನ್ನೆಲ್ಲಾ
ಬಾಲಾಮಾತೆಯ ಸ್ತನ್ಯ ಬಿಟ್ಟಂತೆ ಯನ್ನ
ಕಾಲಾದೀಶಲೂ ಭಾವಾ ಕರುಣಿಸೈ ಮುನ್ನ
ವೆಲ್ಲೆಂದ್ಹೇಳಿ ವಾಕ್ಯಯಿಲ್ಲಗುರುವಿತ್ತ
ಯಲ್ಲಿಂದಿಲ್ಲಗೆ ಒಂದೇ ಅದನಿಲ್ಲಿ ಮರೆತೇ
ಯಿದ್ದನೆಲ್ಲಿರುವಂತಾ ಸುದ್ದೀಯ ಪರಿಯಾ
ಬದ್ದವಲ್ಲ ಅರುವೀಗೇ ಬರಗೂಡದು ಈ ಕಾಯ
ಅಧಿಕಾರಣ್ಯದಿ ಸೂರ್ಯ ತುದಿಗದ್ರಿ ಮಾರೆಯಾ
ವಿಧಿ ತೋರಿತ್ಯೆ ನಿಮ್ಮ ಬದಿಬಿದ್ದೆನಯ್ಯ

ಗುರುದೇವ ಅಲ್ಲೀಪಮೂರ್ತಿ

ಗುರುಪಯ್ಯ ವಾರ್ತಿ ಬೆರೆಸೈ ಪರಮನಲ್ಲಿ ಮರೆಸೈ ಸತ್ಕೀರ್ತಿ"೧೯

ಮನುಷ್ಯನಿಗೆ ಅಂಗದ ಆಸೆಯು ಹೆಚ್ಚಾಗಿರುವುದರಿಂದ ಆ ಆಸೆಯನ್ನು ಮೊದಲು ತೊಲಗಿಸಿ ಗುರುದೇವಾ. ಇದರಿಂದ ಮನಸ್ಸು ಚಂಚಲವಾಗಿ ಮಾಡುವ ಕಾರ್ಯದಲ್ಲಿ ಅಡೆತಡೆಗಳಾಗಿ ಮನದಲ್ಲಿ ಶಾಂತಿ - ಸಂತೋಷ ಕಳೆದಂತಾಗಿದೆ. ರೋಗದ ಮನೆಯಾದ ದೇಹವು ಆಸೆಗಳ ಅರಮನೆಯನ್ನು ಹುಡುಕಿದೆ. ಅದರಿಂದ ದೂರ ಮಾಡೆಂದು ಪ್ರಾರ್ಥಿಸಲಾಗಿದೆ.

## ಗುರುಪುತ್ರ

"ತೆರಳುವಾ ಜೀವ ದೇಹದ ತೊರೆದಾ । ತೆರಳೂವಾ ಜೀವ
ತೆರಳೂವಾ ಜೀವ ಬಲು ಬರಳೂವಾದಿಯ ಶಿಗದೇ
ದುರುಳ ಯಮನ ಭಟರು ಕರಖಡ್ಗಾಯುಧ ಕಂಡೂ
ಪೈತ್ಯಕದ ವಿಷಜ್ವರಾ ಸೈತ್ಯ ಸಮುದಾಯಗಳೂ
ಥೈಥೈಯಾಡುತ ಬರಲು ತಡೆಯಲಾರದೆ ಜೀವಾ.
ರೋಗಶಾಂತಿಗೆ ವೈದ್ಯಯೋಗಿ ತಾ ಬಂದೊಯ್ವಾ
ಭೋಗಿ ವಿಷ ಸಮವಾದಂತಾಗಗತಾ ತಡಿಯಾದೆ
ಬಿಂದೊಂದು ಜಲ ಕೊರಳೊಂದೊಂದಿಳಿವದಕ್ಕೇ
ಶಿಂಧೂತೋರುವ ಸಮಯಾ ಶಾರೇಶಾರೊಯ್ದುಕೆ.
ಶ್ವೇತವರ್ನದ ಪಾತ್ರೆ ನೂತಾನದುದಿಕೂ
ಘಾತಗೊಳಿಸುವ ವಿಧೀ ದೂತಾದ್ವಿತಿದೈಯ್ದೆನುತಾ
ಗುರುಪುತ್ರನಾಗಿಲ್ಲಾ ಗುರುವಿನಂ ನುಡಿಯಲ್ಕೇ
ನರಪುತ್ರ ನಾನೆಂದೂ ನರಕಾತ್ಮನಾಗಲ್ಕೆ.
ಅಲ್ಲೀಪ ಗುರುವೀನಾ ಯಿಲ್ಲೀಬೆರಿಯದೆ ಮುನ್ನಾ
ಯೆಲ್ಲೀಹನಿಲ್ಲೆಂದು ಕುಲ್ಲಾತನುವ ನಂಬೀ."೨೦

ಜೀವ ಒಂದು ದಿನ ಹೋಗುತ್ತದೆ. ಒಂದು ದಿನ ತೊರೆಯುವ ಈ ಜೀವಕ್ಕೆ ಎಷ್ಟು ಪ್ರೀತಿಸಿದರೂ ಫಲವಿಲ್ಲ. ಜೀವ ಹೋಗುವುದೆಂಬ ಭಯ ಬೇಡ, ಇರುವುದೆಂಬ ಖುಷಿಯ ಮಾತಿಲ್ಲಿ ಸುಳಿಯದು. ಗುರುವೇ ನೀನೆ ದಾರಿ ತೋರಿ ಕೈ ಹಿಡಿದು ಕಾಪಾಡು! ನಿರ್ಭಯದ ಮಾರ್ಗ ತೋರಿ ಮನಸ್ಸಿಗೆ ಶಾಶ್ವತ ಸುಖದ ಹಾದಿಯಲ್ಲಿ ನಡೆಸು ಎಂದು ಕೋರಿಕೆ ಸಲ್ಲಿಸಲಾಗಿದೆ.

ತತ್ವಪದಕಾರ ತಿಕ್ಕಯ್ಯರವರು ತಾವೇ ರಚಿಸಿದ ತತ್ವಪದಗಳಲ್ಲಿ ಕೆಲವನ್ನು ಇಲ್ಲಿ ಗಮನಿಸಬಹುದಾಗಿದೆ.

## ನೀನೇ ಕಾಪಾಡು

“ನೀನೆ ಕಾಪಾಡೋ ಗುರುರಾಯ – ನಿಮ್ಮ
ಧ್ಯಾನವು ಮರೆಸುವುದು ಅಜ್ಞಾನದ ಪ್ರಾಯ
ನೀನು ಕೂಡಿರುವಂಥ ಕಾಯ – ಇದ
ನೀನಾಡಿಸಿದಂತೆ ನಾನಾಡುವುದು ನ್ಯಾಯ
ಭಾನುಶತಕೋಟಿ ಸಚ್ಛಾಯ – ಬ್ರಹ್ಮ
ಸ್ಥಾನವು ಹೊಂದದು ಮಾನಸಮಾಯ
ನಾನಾ ಯೋನಿಗಳಲ್ಲಿ ಬಂದೆ – ಮತಿ
ಹೀನನಾಗಿ ನಾ ಬಹಳ ನೊಂದೆ
ಜ್ಞಾನವು ತಿಳಿಯದು ಮುಂದೆ – ಎನ್ನ
ಮಾನಾಭಿಮಾನವು ನಿನ್ನದು ತಂದೆ
ಊರಿಗೆ ಹೋಗುತ್ತಲಿದ್ದೇ – ಅಲ್ಲಿ
ದಾರಿತಪ್ಪಿ ಘೋರಾರಣ್ಯದಿ ಬಿದ್ದೆ
ಯಾರು ದಿಕ್ಕಿಲ್ಲವೆಂದಿದ್ದೆ – ಬಂದು
ದಾರಿಯ ತೋರಿದೆ ಕಾರುಣ್ಯನಿಧಿಯೇ
ವಾದಭೇದಗಳನ್ನು ಮರೆಸೋ – ಭವ
ಬಾಧೆಗಳನ್ನು ಪರಿಹರಿಸೋ
ಸಾಧು ಸಂಗದೊಳೆನ್ನನರಿಸೋ
ಪಾದಕಮಲದೊಳೆನ್ನ ಬೆರೆಸೋ
ಧಾತ್ರಿಯೊಳಗೆ ಚೇಳ್ಗುರ್ಕಿ ಪುಣ್ಯ
ಕ್ಷೇತ್ರವು ಗಳಿಸಿದೆ ಎರ್ರಿತಾತನ ಹುಡುಕಿ
ಸ್ತೋತ್ರ ಮಾಡುವುದಲ್ಲದೆ ಹರಕೆ – ಈ
ಗಾತ್ರವಿರುತನಕ ತೀರದೀ ಬಯಕೆ”[೨೧]

ಈ ಪದದಲ್ಲಿ ಗುರುವಿನ ಅನುಗ್ರಹವನ್ನು ಬಯಸುತ್ತಿರುವುದನ್ನು ಗಮನಿಸಬಹುದು. ಗುರುವನ್ನು ನಂಬಿದ ಶಿಷ್ಯನಿಗೆ ಒಳ್ಳೆಯ ಜೀವನ ನೀಡಿ ಸರಿಯಾದ ಮಾರ್ಗದಲ್ಲಿ ನಡೆಸು ಎನ್ನುವ ಆಸೆ ಶಿಷ್ಯನಲ್ಲಿದೆ. ಏನು ತಿಳಿಯದು ಏನು ಮಾಡಲರಿಯದ ಮನಕೆ ದಿಕ್ಕು ಕಾಣದಾಗಿದೆ. ನೀನು ಬಂದು ಕೈ ಹಿಡಿದು ಸರಿಯಾದ ಮಾರ್ಗದಲ್ಲಿ ಮುನ್ನಡೆಸೆಂದು ಬೇಡಿಕೊಳ್ಳುವ ಪರಿ ಇಲ್ಲಿದೆ.

## ಗುರುರಾಯ

“ಗುರುರಾಯ ಸದ್ಗುರಾಯ - ನಿಮ್ಮ
ಚರಣವ ನಂಬಿದೆ ಚಿರಕಾಯ
ಅರಿಯದೆ ಬಂದೆನು ಜನ್ಮಕ್ಕೆ -ನಾ

ಗುರಿಯಾದೆನು ಈ ಕರ್ಮಕ್ಕೆ
ಕರುಣಿಸದಿರುವೆ ಏತಕ್ಕೆ - ನಾ
ಶರಣೆಂದು ನಿಮ್ಮ ಮೊರೆಹೊಕ್ಕೆ
ಗುಂಭದ ಮೋಸಗಾರರನು - ಆ
ಡಂಭಕ ವೇಷದ ಚೋರರನು
ನಂಬದೆ ಬಂದಿಹೆ ನಿನ್ನೆಡೆಗೆ - ನಿನ್ನ
ಹಂಬಲಹಿಡಿಸಿ ಪೊರೆಯನ್ನ
ಎಲ್ಲ ಸಾಧುರೊಳಗಾಡಿದೆನು - ಅವ
ರೆಲ್ಲರ ಚರ್ಯೆಯ ನೋಡಿದೆನು
ಸಲ್ಲದವರ ಬಿಡನಾಡಿದೆನು - ನಿಜ
ಬಲ್ಲಂಥ ಗುರುವಿನ ಕೂಡಿದೆನು
ಕಡೆಗಾಲಕ್ಕೆ ನೀ ದೊರೆತೆ - ಎನ್ನ
ಕಡೆಹಾಯಿಸು ಕರುಣಾಶರಧಿ
ಪಿಡಿದೆನು ನಿಮ್ಮನು ದೃಢತರದಿ - ನಾ
ನುಡಿದೆನು ಗುರುನೀ ನುಡಿಸಿದ ತೆರದಿ
ಕ್ಷಿತಿಯೊಳು ಚೇಳ್ಗುರ್ಕಿ ಪುರವಾಸ - ನಿಜ
ಯತಿಗಳು ಕೂಡುವ ಕೈಲಾಸ
ಪ್ರತಿ ಎರ‍್ರಿತಾತನೇ ಕೊಡುಲೇಸ - ನಿಜ
ಮತಿಯೊಳು ಮರೆಯದೆ ನಿಮ್ಮಧ್ಯಾಸ"೨೨

ಗುರುವೆಂದು ನಿಮ್ಮನ್ನು ನಂಬಿರುವೆ; ನನ್ನ ಜನ್ಮದ ಕರ್ಮಕ್ಕೆ ನಾನೇ ಹೊಣೆಯಾಗಿರುವೆ. ಅದನ್ನು ಅನುಭವಿಸುತಲಿರುವೆ; ನಿನ್ನ ನಂಬಿದ ಜನಕ್ಕೆಲ್ಲ ನೀನು ನೀಡಿರುವೆ ಅಭಯ! ಹಾಗೆ ನಾನು ನಂಬಿರುವೆ ನನ್ನ ಕೈ ಹಿಡಿದು ಕಾಪಾಡು ನನ್ನ ಪ್ರತಿ ಕ್ಷಣವು ಬಿಡದೆ ನಿನ್ನನ್ನೇ ಧ್ಯಾನಿಸುತ್ತಲಿರುವೆ ತಡಮಾಡದೆ ನೀ ಬಂದು ಇರುವ ತೊಂದರೆಯ ನಿವಾರಿಸೆಂದು ಗುರುವಿನಲ್ಲಿ ಪ್ರಾರ್ಥಿಸುವುದು ಇಲ್ಲಿ ತಿಳಿದುಬರುತ್ತದೆ.

## ಸರ್ವಾಂತರ್ಯಾಮಿ

"ಎಲ್ಲರೊಳಗಿರ್ದಿಲ್ಲದೇ ಜಗ
ವೆಲ್ಲ ಶೋಧಿಸಿ ಕಾಣ್ವನೆ
ಎಲ್ಲಿ ನೋಡಲು ಅಲ್ಲಿ ಚಿತ್ಕಳೆ
ಯಲ್ಲಿ ತಾ ಮುಳುಗಾಡ್ವನೆ
ಕಲ್ಲುಮುಳ್ಳೊಳು ಕಾಡುಕಾಷ್ಠಗ
ಳೆಲ್ಲ ಬೆಳಕನೆ ಮಾಡ್ವನೆ!

ಅಲ್ಲ ಅಹುದದು ಇಲ್ಲ ಉಂಟದು
ಒಲ್ಲೆ ಬೇಕೆಂದು ಕಾಡ್ವನೆ?
ಬಲ್ಲಜ್ಞಾನಿಯ ಸೊಲ್ಲು ಬೇರಿದೆ
ಖುಲ್ಲ ಜನರಂತೆ ಕಾಣ್ವನೆ?
ಮಾರುತಾಮನ ಮಾತುಗಳನು
ಮೀರಿದಾ ಘನಧೀರನೆ
ಮೇರು ಶಿಖರವನೇರಿ ಉನ್ಮನಿ
ಸೇರಿದಾ ಸುಖಸಾರನೆ
ಸೂರ್ಯನಂತೆ ಸರ್ವಸಾಕ್ಷಿಲಿ
ಕಾರ್ಯಕಾರಣ ಭೂತನೆ
ವೀರ್ಯಜಿತರಿಗೆ ತೂರ್ಯತೋರಿದ
ಆರ್ಯಗುರು ಎರ್ರಿತಾತನೆ
ದೇಶಕಧಿಕ ಚೆಳ್ಳಗುರ್ಕಿ
ವಾಸಮಾಡಿದ ಈಶನೆ
ದಾಸತಿಕ್ಕಯ್ಯ ಕೂಸಿನೊಳುನಿಧಿ
ಧ್ಯಾಸ ಸುಪ್ರಕಾಶನೆ"೨೩

ನಂಬಿದ ಗುರು ದೈವಸ್ವರೂಪಿ; ಅವನು ಎಲ್ಲ ಕಡೆ ಇದ್ದಾನೆ. ಅವನಿಲ್ಲದ ಜಾಗವಿಲ್ಲ. ಗುರುವನ್ನು ನಂಬಿದ ಭಕ್ತ, ಶಿಷ್ಯ ಯಾರೇ ಆಗಿರಲಿ ಇದ್ದಲ್ಲಿಯೇ ಮನತುಂಬಿ ಗುರುವನ್ನು ನೆನೆದರೆ ಅವನು ತನ್ನ ಆಶೀರ್ವಾದವನ್ನು ನೀಡಿ ಭಕ್ತರ ಕಷ್ಟಗಳಿಗೆ ಸ್ಪಂದಿಸುವನು. ಅವನು ಸರ್ವಾಂತರ್ಯಾಮಿ ಎಲ್ಲ ಕಡೆಯೂ ಇರುತ್ತಾನೆಂಬ ನಂಬಿಕೆ. ಭಕ್ತರಲ್ಲಿ ಗುರುವನ್ನು ನಂಬಿದ ಶಿಷ್ಯರಲ್ಲಿರುವುದು ಇಲ್ಲಿ ಕಾಣಬಹುದಾಗಿದೆ.

### ಹೇಗೆ ಮರೆಯಲೋ

"ಹೇಗೆ ಮರೆಯಲೋ ತಾತನ ಹೇಗೆ ಮರೆಯಲೋ
ಭೋಗವಿಷಯಗಳನು ತ್ಯಜಿಸಿ
ತ್ಯಾಗವರುಹಿದ ಶ್ರೀ ಗುರುವೇ ನಿಮ್ಮ
ಜ್ಞಾನವೆಂಬೋ ಪರಮಾಮೃತದ
ಪಾನವನ್ನು ಕುಡಿಸಿ ಶರೀರದ
ಮಾನ ಅಭಿಮಾನವನು ಬಿಡಿಸಿ
ಆನಂದದಿ ಮೈ ಮರೆಸಿದ ತಾತನ
ರಾಗದ್ವೇಷಾದಿ ಗುಣಗಳನೆಲ್ಲ
ನೀಗಿ ನಿರ್ಬೈಲಾದ ಶಿವನ

ಯೋಗವನ್ನು ತಿಳುಹಿ ಭವ
ರೋಗವನ್ನು ಕಳೆದ ಸದ್ಗುರುವಿನ
ಮಾರುತಾಮನ ಮಾತುಗಳನು
ಮೀರಿದಂಥ ಪರಮಾತ್ಮನೊಳು
ಸೇರಿ ಮತ್ತೆ ನರಜನ್ಮಕ್ಕೆ
ಬಾರದಂತೆ ಮಾಡಿದ ತಾತನ
ದಾಂತಿಯನ್ನು ಹಿಡಿಸಿ ಮಾಯ
ಭ್ರಾಂತಿಯನ್ನು ಬಿಡಿಸಿ ಮುಕ್ತಿ
ಕಾಂತೆಯೆನಗೆ ಮದುವೆಯಮಾಡಿ
ಶಾಂತಿಸುಖದೊಳಿರಿಸಿದ ತಾತನ
ಧಾರುಣಿಯೋಳ್ ಚೇಳ್ಳಗುರ್ಕಿ – ಉ
ದ್ಧಾರ ಮಾಡಿದ ಶ್ರೀ ಎರ್ರಿತಾತ
ಕೋರಿದವರಿಗೆ ಕೊರತೆಯಿಲ್ಲ
ಧೀರತಿಕ್ಕಯ್ಯ ಮಗನೇ ಬಲ್ಲ."[೨೪]

ವ್ಯಕ್ತಿ ತಾನು ನಂಬಿದ ದೈವದ ಮೇಲೆ ಅಪಾರವಾದ ನಂಬಿಕೆಯನ್ನಿರಿಸಿಕೊಂಡು ತನ್ನ ಜೀವನದ ಪ್ರತಿ ಕ್ಷಣದ ಕಾರ್ಯದಲ್ಲಿ ದೇವರಿದ್ದಾನೆಂದು ನಂಬಿ ಅವನನ್ನು ಮರೆತರೆ ತನ್ನ ಉಸಿರು ಜೀವದಲ್ಲಿಲ್ಲವೆಂದು ದೃಢವಾಗಿಸಿಕೊಂಡಿರುತ್ತಾನೆ. ತಾನು ತನ್ನ ಗುರುವನ್ನು ದೈವವಾಗಿಸಿಕೊಂಡು ಪೂಜಿಸುವ, ಪ್ರಾರ್ಥಿಸುವ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿರುತ್ತಾನೆಂಬುದು ಇಲ್ಲಿ ತಿಳಿಯಬಹುದು.

ಮೈಲಾರ ಬಸವಲಿಂಗ ಶರಣರು ತಾವೇ ರಚಿಸಿದ ತತ್ವಪದಗಳಲ್ಲಿ ಕೆಲವು ತತ್ವಪದಗಳನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ.

### ಚಿತ್ತ ಬತ್ತಿಯ ಜ್ಯೋತಿ

"ತಾನೆ ಬೆಳಗುತಿದೆ ಸ್ವಯಂ ಜ್ಯೋತಿ ತಾನೆ ಬೆಳಗುತಿದೆ
ಮಾನಸ ವಾಚಕ ಕಾಯಕದೊಳು ತನ್ನ ತಾನೆ ಬೆಳಗುತಿದೆ
ತನ್ನ ವಾಮಕರ ಪೀಠ ಪಾತ್ರೆಯೊಳು । ನಿರ್
ಭಿನ್ನ ಭಕ್ತಿಯ ರಸತೈಲ ತೀವಿ
ಸನ್ನುತ ನಡೆನುಡಿ ಬತ್ತಿವಿಡಿದು । ಸುಪ್ರ
ಸನ್ನ ಪ್ರಕಾಶ ಸತ್‌ಕ್ರಿಯಾ ಜೋಡಿ
ಪರತತ್ವ ಹೃದಯ ಪಣತೆಯೊಳು । ಷಣ್ಮಂತ್ರ
ದರುವೆಂಬ ಸುರಸ ತೈಲವ ಹೀರುತ
ವರದೃಢ ಚಿತ್ತಬತ್ತಿಯ ಕೊನೆಯೊಳು । ಲಿಂಗ

ಕಿರಣದೊಬ್ಬುಳಿಯ ಸುಜ್ಞಾನ ಜ್ಯೋತಿ
ಚಾರು ಸದ್‌ಭಾವ ಪಣತೆಯೊಳು ತತ್ವ ವಿ
ಚಾರ ಸುಸಾರ ಘೃತವನೀಂಟುತ
ಮೀರಿದಾಚರಣೆ ಬತ್ತಿಯ ಕೊನೆಯೊಳು । ಚೆನ್ನ
ವೀರ ಮದ್‌ಗುರು ಮಹಾಜ್ಞಾನ ಜ್ಯೋತಿ
ಮುಸಿಯನಾಡುವುದಿಲ್ಲವಣ್ಣ । ನೀವು
ಹಸನಾಗಿ ಶೋಧಿಸಿ ತಿಳಕೊಳ್ಳಿರಣ್ಣ."[೨೫]

ದೇಹದೊಳಗೆ ಮನಸ್ಸಿನಲ್ಲಿ ಬೆಳಕಿನ ಕಿರಣ ಪ್ರಕಾಶಿಸುತ್ತಿದೆ. ಅದರಲ್ಲಿ ಭಕ್ತಿಯೆಂಬ ಬೆಳಕಿಗೆ ನಿಷ್ಠೆಯೆಂಬ ನಡೆಯಿದೆ. ಶಿವನ ಮೆಚ್ಚುಗೆ ಪಡೆದುದಾಗಿದೆ. ಹಾಗಾಗಿ ಜ್ಯೋತಿ ಮಿನುಗುತಿದೆ. ಆ ಜ್ಯೋತಿಗೆ ಭಕ್ತಿಯೇ ತೈಲ; ಬೆಳಕಿನ ರೂಪವೇ ಜ್ಞಾನವೆಂಬುದನ್ನು ಮನವರಿಕೆ ಮಾಡಿ ಕೊಡಲಾಗಿದೆ.

## ನೀರು ಬೀಜವ ಬಿತ್ತಿ

"ಬೇರು ಬಲಿದು ಸಾರವಳಿದ । ಅಣ್ಣ
ನೀರು ಬೀಜವ ಬಿತ್ತಿ ಭೂಮಿಯ ಬೆಳೆದು
ಮಾರುತನ ಹೊತ್ತು ಸುಳಿದವಕ್ಕಿ
ತೂರದ ಮುನ್ನ ಮೂಗಂಡುಗವಳೆದು.
ತಾಳೆಯು ಮರದ ಮೇಲೊಂದು । ಬಾವಿ
ಆಳು ಪ್ರಮಾಣದರೊಳಗೇಳು ಸಿಂಧು
ಬಾಳುವ ಜನವೆಲ್ಲ ಬಂದು । ಮುಳಿ
ಗೇಳುತಿಹರು ತಡಿಗಾಣದೆಂದೆಂದೂ.
ನೀರ ನಡುವೆ ಮೂರು ಬೆಂಕಿ । ಹುಟ್ಟಿ
ತೀರೆ ತೀರದು ಸುಟ್ಟು ಸುಡುತದೆ ಬೆಂಕಿ
ಆರಿಸಬೇಕೆಂಬ ಶಂಕೆ । ತಲೆ
ದೋರಲೊಲ್ಲದು ಮೂರು ಲೋಕಕ್ಕೆ ಸೋಂಕಿ
ಹುಲಿಯ ಹುಲ್ಲೆಯ ನಡುವೊಂದು । ಅದು
ತಲೆಯೆರಡಾಗಿ ಲೋಕವನ್ನೆಲ್ಲ ತಿಂದು
ಕೆಲದಲ್ಲಿ ಮತ್ತೊಂದು ಬಂದು । ಅಲ್ಲಿ
ಮೆಲುಕಿರಿವುದ ನಾ ನೋಡಿದೆ ನಿಂದು
ಕುಲವಂತ ಹೊಲೆಯನ ತಂಗಿ । ತಾನು
ಜಲಜಭವಾಂಡ ಮಂಡಲಕೆ ಮೂಲಂಗಿ
ಒಲವಿಂದ ಹಾಕಿದ ಭಂಗಿ । ಅದು

ತಲೆಗೇರಿ ಮೊಲ ಬೇಟೆಕಾರನ ನುಂಗಿ.
ಕತ್ತಲೆಯೊಳು ಕಂಡ ಕುಣಿಯ । ತಾನು
ಹೊತ್ತಾರೆ ಕಣಗಂಡು ಬೀಳುವ ಗಣಿಯಾ
ಸತ್ತು ಹುಟ್ಟುವುದಕ್ಕೆ ದಣಿಯ । ನೆಂದು
ಸತ್ಯಲೋಕದ ಜನ ನಗುವಂತಹ ಖಣಿಯಾ.
ಅಣ್ಣತಂಗಿಯರೊಂದುಗೂಡಿ । ಒಬ್ಬ
ರುಣ್ಣದೂಟವನುಂಡು ಚನ್ನಾಟಮಾಡಿ
ಪುಣ್ಯ ಪಾಪವು ಹಿಂದುಮಾಡಿ । ಮೂರು
ಕಣ್ಣೊಳಗೆ ತಾವು ಬೆರೆದಾರು ನೋಡಿ.
ಆಡಿನ ಕೊರಳೊಳಗಿರುವ । ಮೊಲೆ
ಜೋಡಿನಿಂದಲಿ ಹಾಲು ನಿತ್ಯದಿ ಕರೆವೆ
ಮಾಡುವ ಜಾತಿ ಸಂಕರವ । ಇಂತ
ಗಾಡಿಗತನವ ಬಲ್ಲವ ನಮ್ಮ । ಗೊರವ.
ಶರಧಿಯೊಳಗೆ ಬಂದು ಹಳ್ಳ । ತಾನು
ಹರಿದು ಹರಿಯುತಿದೆ ನಿಲಕಾಲವಿಲ್ಲ
ಮರೆಮಾಚಲೇತಕೀ ಸೊಲ್ಲ । ಮುಕ್ತಿ
ವರದಮದ್ಗುರು ಚೆನ್ನವೀರನ ಬಲ್ಲ."[೨೬]

ಮನುಜನಲ್ಲಿರುವ ಕೀಳುಮಟ್ಟದ ಬುದ್ಧಿಯನ್ನು ಸರಿಪಡಿಸಿಕೊಳ್ಳಲು ಭಗವಂತನ ಅನುಗ್ರಹದಿಂದ ಮಾತ್ರ ಸಾಧ್ಯ. ಪ್ರತಿಕ್ಷಣವು ಬದಲಾಗುವ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಲು ಭಗವಂತನ ಅನುಗ್ರಹ ಮುಖ್ಯ. ಮೇಲು - ಕೀಳೆಂಬ ತಾರತಮ್ಯ ಮಾಡುವ ಮನುಜನ ಬುದ್ಧಿಯು ಅವನ ದೇಹದಲ್ಲೆಲ್ಲ ಬೆಂಕಿಯಂತೆ ಹಬ್ಬಿದೆ. ಇದನ್ನು ಆರಿಸಲು ದೇವರ ಅನುಗ್ರಹದಿಂದ ಸಾಧ್ಯ. ದೇವರ ಅನುಗ್ರಹ ಪಡೆಯಲು ಮನ ಶುದ್ಧೀಕರಿಸಬೇಕು. ಪರಿಶುದ್ಧ ಮನಸ್ಸನ್ನು ಹೊಂದಿ ಮನುಜನಾಗುವವನಾದರೆ ದೇವರ ಆಶೀರ್ವಾದ ದೊರೆಯುವುದೆಂಬ ಸಂದೇಶ ಇಲ್ಲಿದೆ.

**ಕರಿಯೆಂಟು ನರಿ ನುಂಗಿತಲ್ಲಾ !**

"ಸಟೆಯನಾಡುವನೆ ಸುಜ್ಞಾನಿ । ಇದು
ದಿಟವೆಂದು ತಿಳಿಯಬಲ್ಲವನೆ ಅಜ್ಞಾನಿ.
ಕೋಡಗನಿಗೆ ಕೋಡು ಮೂಡಿ । ತನ್ನ
ಕೋಡಿನಿಂದ ಮೂರುಜಗವನಲ್ಲಾಡಿಸಿ
ಆಡು ಕೋಡುಗ ತಲೆಗೂಡಿ । ನ್ಯಾಯ
ಮೂಡಿದಾಕ್ಷಣ ಮೋಕ್ಷವಾದೀತು ನೋಡಿ.
ಒಂಟೆ ಮೂರೆಂಡೆಯಾಗಿಹುದು । ಹೃದ್

ಗಂಟು ಲಕ್ಷ್ಮಿಯೊಳೊಂಟಿಮನೆ ಮಾಡಿಹುದು
ಎಂಟಾರು ಲೋಕವಾಳುವುದು । ಇಂಥಾ
ಒಂಟೆಯ ಸೊಕ್ಕನು ಮಂಟ ಬೆಕ್ಕು ನುಂಗಿಹುದು.
ಕರಿಯೆಂಟು ನರಿ ನುಂಗಿತಲ್ಲ । ಸಣ್ಣ
ಇರಿವೆ ನುಂಗಿತು ಮೂರು ಲೋಕವನ್ನೆಲ್ಲ
ಅರಿಯದವರಿಗಳವಲ್ಲ । ಎಮ್ಮ
ಗುರು ಚೆನ್ನವೀರೇಶ ಮಹೇಶ ಬಲ್ಲ."[೨೭]

ಸುಳ್ಳು ಹೇಳುವವನನ್ನು ನೋಡಿದರೂ ಬುದ್ಧಿವಂತನಾದವನು ಅದನ್ನು ನಿಜವೆಂದು ನಂಬುವವ ಎಂಥ ಅಜ್ಞಾನಿಯಾಗಿರಬೇಕು. ಅರ್ಧ ಜ್ಞಾನ ಹೊಂದಿ ಕೊಬ್ಬಿನಿಂದ ಓಡಾಡುವವನನ್ನು ಹೇಗೆ ತಿದ್ದಬೇಕೆನ್ನುವ ಯೋಚನೆ, ಏನು ಗೊತ್ತಿಲ್ಲದಿದ್ದರೂ ಗೊತ್ತೆಂದು ಮೆರೆದಾಡುವವನನ್ನು ತಿದ್ದಿ ನಡೆಸಲು ಗುರುವೇ ನೀನು ಬಂದು ಕಾಪಾಡಬೇಕೆಂದು ದೈವವನ್ನು ನೆನೆದು ಚನ್ನವೀರೇಶ ಇದನ್ನೆಲ್ಲ ಬಲ್ಲ ನೀನೇ ಕರುಣಿಸಿ ಕಾಪಾಡೆನ್ನುವ ಕೋರಿಕೆ - ಪ್ರಾರ್ಥನೆ ಇಲ್ಲಿದೆ.

ತತ್ವಪದಕಾರ ಮಲ್ಲಿಕಾರ್ಜುನ ಎತ್ತಿನಹಟ್ಟಿ ಸ್ವತಃ ರಚಿಸಿದ ತತ್ವಪದಗಳಲ್ಲಿ ಒಂದನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ.

## ಊರು ಹಾಳಾಯಿತಮ್ಮ

"ಊರು ಹಾಳಾಯಿತಮ್ಮ ಉಲುಹು ಅಡಗಿ ಹೋಯಿತು
ಸೇರಿದಂಥ ಜನರು ಎಲ್ಲಿ ಕಟ್ಟು ಹೋಯಿತಮ್ಮ
ಊರು ಹಾಳಾಯಿತಮ್ಮ ಉಲುಹು ಅಡಗಿ ಹೋಯಿತಮ್ಮ ॥
ನಾನು ಒಬ್ಬಳಿಗೆ ಮತ್ತೆ ಮೂರು ಮಂದಿ ಹುಟ್ಟಿ
ಪಾರುಪತ್ಯ ಮಾಡಿಕೊಂಡು ಪಟ್ಟಣಕ್ಕೆ ಬಂದರು
ಕಾರುಬಾರು ಮಾಡಿಕೊಂಡು ತಮಗೆ ತಾವು ಅಳುತೆರಲು
ವಾದೆಯೇನೊಂಬತ್ತು ಅವರೋಳು ಮೂರು ಬಟ್ಟಲಾಯಿತು ॥

ಬೇರೆ ಬೇರೆಯಾಗಿಯಿವರು ನಾರಿ ಪುರುಷರೊಡನೆ ಇರಲು
ಆರು ಏಳು ಮಂದಿ ಮಕ್ಕಳವರಿಗಾಗಲು
ಪೋರತಾನದಿಂದಲೆಲ್ಲ ದಾರಿ ಬಟ್ಟೆ ಕಾಯ್ದುಕೊಂಡು
ಆರನಾದರೇನು ಬಿಡದೆ ಹಡಕನೀಗೆ ಬಡಿವದು ॥

ಹತ್ತು ಎಂಟು ಮಂದಿಯಿವಗೆ ಪುತ್ರ ಪಾತ್ರರಾಗಿ ತಮ್ಮ
ಮೊತ್ತವನ್ನು ಕೂಡಿಕೊಂಡು ಮಲೆಯ ಸೇರಲು
ಸುತ್ತಮುತ್ತ ದಾರಿಯನು ಎತ್ತ ಹೊರಡಗೊಡದೆ ಜನರ
ಕುತ್ತಿಗೀಯ ಕೋಯಿದು ಅವರ ನೆತ್ತರವನ್ನು ಕುಡಿವರೆ ॥

ಮತ್ತೆ ನಾರಿಯಿಂದಲೀಗ ಇಪ್ಪತ್ತೈದು ಮಂದಿ ಹುಟ್ಟಿ
ಸುತ್ತಲು ರಾಜ್ಯವನ್ನೆಲ್ಲ ಸೂರೆಮಾಡಿ ಬಿಟ್ಟರು
ಭೀತಿ ಮಾಡುವರಿಲ್ಲ ಎಮಗಿನ್ನೆತ್ತಲಾದರೇನು ಎನುತ
ಬತ್ತಿ ಸಾಯುಧಗಳನು ಕಟ್ಟಿ ಬಯಲು ಬೀದಿ ಹಿಡಿವರು ॥

ಸತ್ಯ ಶರಣರಿವನು ಕೇಳಿ ಎತ್ತಿನ್ಹಟ್ಟಿ ಈಶಗ್ಹೇಳಿ
ಎತ್ತಿನಿಂದ ಬಂತು ದಂಡು ಹೇಳಶಕ್ಯ ವಿಲ್ಲವು
ಮುತ್ತಿಕೊಂಡು ಮೂರು ಘಳಿಗೆ ಕುತ್ತಿಗೇಯ ಕೋಯಿದು ಎಲ್ಲರ
ಹತ್ತರಾಣ್ಯ ಹಾಕಿಕೊಂಡು ಅಂಗ ಕಾಲುಕೊಟ್ಟರು ॥"೨೮

ಕುಟುಂಬದಲ್ಲಿನ ಸಂಸಾರವಾಗಲು ಮಕ್ಕಳು ಕಾರಣರಾಗುತ್ತಾರೆ. ದುಡಿಮೆ ಕಡಿಮೆ ಮಕ್ಕಳು ಹೆಚ್ಚಿರಲು ಬಡತನದ ಬೇಗೆಯಲಿ ಬಾಳ ನೌಕೆ ಸಾಗಿಸಲು ಪಡುವ ಕಷ್ಟ ನೆನೆದು ಹೇಳುವ ಅಳಲು ಇಲ್ಲಿ ಕಾಣಸಿಗುತ್ತದೆ. ಹೀಗೆ ಮನುಜನಲ್ಲಿ ಹುಟ್ಟುವ ಅವನ ವಿಕೃತ ಮನಸ್ಸಿನ ನಡವಳಿಕೆ ದಾರಿ ತಪ್ಪಿ ನಡೆಸುತ್ತ, ಮನುಜನ ಮಾನವೀಯತೆ, ಆತ್ಮೀಯತೆಯನ್ನು ಹಾಳು ಮಾಡುತ್ತದೆಂಬುದನ್ನು ಇಲ್ಲಿ ಪದವಾಗಿಸಲಾಗಿದೆ.

ತತ್ವಪದಕಾರ್ತಿ ಓರೆಬಾಯಿ ಲಕ್ಷ್ಮಿದೇವಮ್ಮ ಸ್ವತಃ ತಾವೇ ರಚಿಸಿದ ತತ್ವಪದಗಳಲ್ಲಿ ಒಂದನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ.

## ಅತ್ತೆ ಮಾವ

"ಅತ್ತಿ ಮಾವ ಬಳಗತ್ತಿನವರು ಯಿತ್ತಿನ್ನಪೋಗುವೋಣಿ
ಹತ್ತಿಲ್ಲಿದ್ದ ಜನ ಸುತ್ತುಗಟ್ಟಿ ತಲಿಹತ್ತಿ ಬಡಿಯರೇನೆ ॥
ಪತಿಯು ಕಂಡರೆನ್ನ ಹತುಮಾಡುವೋದೇನೆ ಗತಿಯು ಪೇಳೆ ನೀನೆ
ಮತಿಹೀನನು ಮೈದುನನು ಮನಿಯಾಳು ಗತಿಯನ್ನೂ ಏನೇ ॥
ಅರಳು ಮಲ್ಲಿಗೆಯಂತೆ ಸರಳಿನ ಶೀರೆಯ
ಮರುಳುಗೈದುದಲ್ಲೇ ದುರಳೇ ಅತ್ತಿಗೀ
ನಾದುನಿ ಮನೆಯಾಳು ಕೊರಳು ಕೋವೋರಲ್ಲೇ ॥
ಮುತ್ತಿನಾ ಶೀರೆಯ ಕುತ್ತಣಿ ಕುಪ್ಪಸ
ಇವತ್ತು ತಂದರಲ್ಲೇ ಸತ್ಯವು ಕೇಳಿರುವ
ಹತ್ತು ಸಾವಿರ ಬೆಲಿ ವ್ಯರ್ಥವಾಯಿತಲ್ಲೇ
ಕಂದರಗಲಿ ನಾವು ಬಂದೆವು ಇಲ್ಲಿಗೇ
ಮುಂದೇನು ಗತಿಯಿಲ್ಲ ತಂದೆ ಶ್ರೀ ನರಸಿಂಹ
ವಿಠಲರಾಯು ನೊಂದೇ ತಾನೇ ಬಲ್ಲ ॥"೨೯

ಹೆಣ್ಣು ತಾನು ಮದುವೆಯಾಗಿ ಸೇರಿದ ಮನೆಯ ಸ್ಥಿತಿಯನ್ನಿಲ್ಲಿ ಬಿಚ್ಚಿಡಲಾಗಿದೆ. ಸಂಸಾರದಲ್ಲಿ ಅತ್ತೆ, ಮಾವ, ಮೈದುನ, ನಾದಿನಿ, ಗಂಡ ಹೀಗೆ ಇವರೆಲ್ಲರ ಮಧ್ಯೆ ಸಹಿಸಿಕೊಂಡು ಬಾಳುವ ಬದುಕು ಬಲು ಕಷ್ಟ. ಒಬ್ಬರಿಗಿಷ್ಟವಾದ ಒಬ್ಬರಿಗೆ ಕಷ್ಟ; ಇದನ್ನೆಲ್ಲ ಸಹಿಸಿಕೊಂಡು ಬಾಳುವ ಬಾಳು ಸಾಯಲಾಗದೆ ಬದುಕಲಾಗದೆ, ಯಾತನೆಯನುಭವಿಸುವ ಸ್ಥಿತಿಯನ್ನು ಎದುರಿಸಿ ಹೆಣ್ಣು ಹೇಗೆ ಬಾಳುತ್ತಾಳೆಂಬುದನ್ನು ಇಲ್ಲಿ ಕಾಣಬಹುದಾಗಿದೆ.

ಆಜಮ್ ಪಾಷರವರು ಬಡೇಸಾಹೇಬ್ ಅವರ ಕುರಿತು ರಚಿಸಿರುವ ಸಲಾಂ ಪದಗಳಲ್ಲಿ ಮೂರು ಪದಗಳನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ.

೧

ಮುಸ್ತಫಾ ಮುಸ್ತಫ ಸಲಾಮುನ್ ಅಲ್ಲೈ
ಶಕ್ಲೆ ಗೌಸುಲ್‌ವರಾ ಸಲಾಮುನ್ ಅಲ್ಲೈ॥

ದೀನ್‌ಕೆ ಪೌಸಖಾಂ ಸಲಾಮುನ್ ಅಲ್ಲೈ
ದೀನ್‌ಕೆ ರಹ್ನುಮಾ ಸಲಾಮುನ್ ಅಲ್ಲೈ॥

ಫಾತಿಮಾ ಜೊ ಅಲಿಕೆ ಗುಲ್ ಶನ್‌ಮೆ
ಫೂಲ್ ಜೈಸಾ ಖಿಲಾ ಸಲಾಮುನ್ ಅಲ್ಲೈ॥
ಹಮ್ ಗರೀಚಾಂಪೆ ಔರ್ ಎತೀಮೌಸರ್
ತೇರಾ ಹಿ ಆಸರಾ ಸಲಾಮುನ್ ಅಲ್ಲೈ॥

ಸಬ್ ಮೆ ಅಫ್‌ಜಲ್‌ಹೆಯ್ ಔರ್ ಆಕ್‌ಮಲ್ ಹೈ
ತೇರಾ ರುತ್ಬಾ ಬಡಾ ಸಲಾಮುನ್ ಅಲ್ಲೈ॥

ಅಪನೆ ದರ್‌ಕೆ ಮುರಾದ್ ಮಂಡೌಂಕಿ
ಹೆಯ್ ಹಾಜತ್ ರವಾ ಸಲಾಮುನ್ ಅಲ್ಲೈ॥

ನಮಿಸುವೆ ನಿತ್ಯ ನಿನಗೆ ಬಾಬಾ ಶುಭವನ್ನುಂಟುಮಾಡು ಪ್ರತಿನಿತ್ಯ ಭಕ್ತರಿಗೆ. ದೇವರು ನೀನು ಭಕ್ತರನ್ನು ನಿಮ್ಮ ಅಪ್ಪುಗೆಯ ಪ್ರೀತಿಯಿಂದ ಆಶೀರ್ವದಿಸು ಬಾಬಾ ನಿನಗೆ ಸದಾ ನಮನಗಳು. ಪ್ರತಿದಿನ ಮುಂಜಾನೆಯಿಂದ ರಾತ್ರಿಯವರೆಗೆ ನಿಮ್ಮ ಕೃಪೆಯಿಂದ ಕೆಲಸ ಕಾರ್ಯಗಳನ್ನು ಮಾಡುತ್ತಿರುವ ನಿಮ್ಮ ಮಕ್ಕಳ ಈ ಭಕ್ತ ಸಮೂಹದ ಮೇಲೆ ಸದಾ ನಿಮ್ಮ ಕರುಣೆಯಿಟ್ಟು ಕಾಪಾಡುವ ನಿಮಗೆ ಸದಾ ನಮನಗಳು ಎಂಬ ನಮನದ ಭಕ್ತರ ಭಕ್ತಿ ತುಂಬಿದ ನಮನಗಳು ಇಲ್ಲಿವೆ.

೨

ಮುಸ್ತಫಾ ಖಾದ್ರಿ ತುಮ್‌ಪೆ ಲಾಖೊ ಸಲಾಮ್
ತುಮ್ ಹೋ ಆಲೆ ನಬಿ ತುಮ್‌ಪೆ ಲಾಖೊ ಸಲಾಮ್॥

ಫಾತಿಮಾ ಓ ಅಲಿಕೆ ಚಮನ್ ಕಲಿ
ಸಿಸ್‌ಬತೆ ಖಾದ್ರಿ ತುಮ್‌ಪೆ ಲಾಖೊ ಸಲಾಮ್॥

ದೀನ್ ಕಿ ಪಾಸ್‌ಲಾ ದೀನ್‌ಕೆ ರಹ್ನುಮಾ
ಮಸ್ಕನೆ ಕಂಪಲಿ ತುಮ್‌ಪೆ ಲಾಖೊ ಸಲಾಮ್॥
ನಾಮ್ ಸೆ ತಾರೆ ಸಬ್ ಕಿ ಮುಸೀಬತ್ ಟಲಿ
ಮಿಟ್‌ಗಯಿ ಬೀಕಲಿ ತುಮ್‌ಪೆ ಲಾಖೊ ಸಲಾಮ್॥
ಥೋಡೆ ಪಾನಿಸೆ ಸಯ್‌ರಾಬ್ ಕಿ ಫೌಜ್‌ಕು
ಏ ಕರಾಮತ್ ತೇರಿ ತುಮ್‌ಪೆ ಲಾಖೊ ಸಲಾಮ್॥

ತೇರೆ ದರಗಾಹ್‌ಮೆ ಶಾಹಿ ದರ್‌ಬಾರ್ ಹೈ
ನೆಮತೆ ಬಟ್‌ರಹೀ ತುಮ್‌ಪೆ ಲಾಖೊ ಸಲಾಮ್॥

ಗೌಸ್ ಕೆಹ್ತಾ ಹೆಯ್ ರುತ್ಯಾ ಬಡಾ ಹೈ ತೇರಾ
ತು ಸಖೀ ತುಶಫಿ ತುಮ್ ಪೆ ಲಾಖೊ ಸಲಾಮ್॥

ಭಗವಂತ ನೀನೇ ಸರ್ವಸ್ವ ನಿನ್ನ ನಂಬಿದ ಭಕ್ತರಿಗೆ ನಿನ್ನ ಅನುಗ್ರಹದಲ್ಲೇ. ಭಕ್ತರ ಜೀವನ ಸದಾ ಕಾಪಾಡು ತಂದೆ ನಿನ್ನ ಭಕ್ತರು ನಿನ್ನ ಮಡಿಲ ಮಕ್ಕಳಿದ್ದಂತೆ; ಭಕ್ತರ ಕಷ್ಟವನ್ನು ನಿವಾರಿಸಿ ಕಣ್ಣೀರು ದೂರವಾಗಿಸಿ ನಿನ್ನ ಆಶೀರ್ವಾದದಿಂದ ಸರ್ವರನ್ನು ರಕ್ಷಿಸು. ಭಕ್ತರ ಕಷ್ಟಗಳನ್ನು ನಿವಾರಣೆ ಮಾಡುವ ನಿಮಗೆ ಲಕ್ಷ ಲಕ್ಷ ವಂದನೆಗಳು. ಈ ಕಂಪ್ಲಿಯಲ್ಲಿ ನೆಲೆಸಿದ ನಿನಗೆ ಈ ಕ್ಷೇತ್ರದ ಭಕ್ತರು ಮಾಡುವ ಲಕ್ಷ ಲಕ್ಷ ನಮನಗಳು. ನಿನ್ನ ಮಹಿಮೆ ದೊಡ್ಡದು. ಬಾಬಾ ನಿನ್ನ ಭಕ್ತರ ತಪ್ಪನ್ನು ಮನ್ನಿಸಿ ಕೈ ಹಿಡಿದು ಕಾಪಾಡೆಂದು ಭಕ್ತರು ಬಾಬಾರಲ್ಲಿ ಮೊರೆಹೋದ ಪ್ರಾರ್ಥನೆ ಇದಾಗಿದೆ.

೩

ಮೆರಾ ಗೌಸ್ ಆಲಾ ಸಲಾಮುನ್ ಅಲ್ಲೈ
ತು ವಲಿಯೌಂಮೆ ಬಾಲಾ ಸಲಾಮುನ್ ಅಲ್ಲೈ॥
ನಬಿ ಫಾತಿಮಾ ಓ ಆಲಿ ಕಾ ಉಜಾಲಾ
ಹಮಾರಾ ತು ದಾತೌ ಸಲಾಮುನ್ ಅಲ್ಲೈ॥
ಸದಾ ಖೊಂಬ್ ಇಜ್ನಿ ಕಿ ದೇಕರ್ ಜಬಾಂಸೆ
ಕಿಯಾ ಮುರ್ದೆ ಜಿಂದಾ ಸಲಾಮುನ್ ಅಲ್ಲೈ॥
ಯತೀಮೌಂ ಕೆ ಹಾಮಿ ಗರೀಬೌಂಕೆ ಮೌಲಾ
ಹಮಿರಾ ತು ಆಖಾ ಸಲಾಮುನ್ ಅಲ್ಲೈ॥
ಶಜಲ್ ಮಹಜರ್ ಮೆ ಜಮಿ ಆಸಮಾಯ
ತೇರಾ ಬೋಲ್ ಬಾಲಾ ಸಲಾಮುನ್ ಅಲ್ಲೈ॥

ಕರಮ್ ಗೌಸ್ ಪರ್ ಕರ್ ಕರಮ್ ಕರೆವಾಲೆ
ಶರಮ್ ಕಾ ತು ದರಿಯಾ ಸಲಾಮುನ್ ಅಲ್ಲೈ॥

ಭಗವಂತ ನೀನು ಭಕ್ತರ ಮನೆ ಬೆಳಕಾಗಿರುವೆ. ನಿನ್ನ ಈ ಬೆಳಕಿನಿಂದಲೇ ಭಕ್ತರ ನಿತ್ಯ ಜೀವನ. ಬಾಬಾ ಕತ್ತಲಾದ ಭಕ್ತರ ಮನೆಯನ್ನು ಬೆಳಗಿದ ನಿನಗೆ ಎಷ್ಟು ನಮನ ಸಲ್ಲಿಸಿದರೂ ಸಾಲದು. ಭಕ್ತರ ಮನದ ಖುಷಿ ನೀನು. ನೀನಿಲ್ಲದೆ ನಿನ್ನ ಕರುಣೆಯಿಲ್ಲದೆ ಭಕ್ತರ ಬಾಳು ಇಲ್ಲ. ಖಾದ್ರಿ ಬಾಬಾ ನೀನೇ ಜೀವ ಉಸಿರೆಂದು ನಂಬಿರುವ ಈ ಕಂಪ್ಲಿ ಕ್ಷೇತ್ರದ ಭಕ್ತರನ್ನು ಕಾಪಾಡುವ ನಿನಗೆ ನಮನಗಳು. ಭಕ್ತರು ತಮ್ಮ ಕಷ್ಟ ಪರಿಹಾರ ಮಾಡುವ ಖಾದ್ರಿ ಬಾಬಾರಿಗೆ ತಮ್ಮ ನಮನಗಳನ್ನು ಸಲ್ಲಿಸುವುದನ್ನು ಕಾಣಬಹುದು.

ಸೈಯದ್ ಮಸೂರ್ ಅವರು ಮೀರ್ ಆಲಂ ಬಾಬಾರವರ ಕುರಿತು ರಚಿಸಿರುವ ಸಲಾಂ ಪದಗಳಲ್ಲಿ ಮೂರು ಪದಗಳನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ.

೧

ಗುರುಬಿನ್ ಮಿಲೆ ಗ್ಯಾನ್ ರಹೆ ಸಾದೂ
ಗುರುಬಿನ್ ಮಿಲೆ ಗ್ಯಾನ್ ರೇ
ಗುರುತಾರೆ ಗುರು ಮಾರೆ ದಿಲಾಹೆ
ಗುರುಹೈ ದೀನೋ ಇಮಾನ್ ರಹೆ ಸಾದೂ॥

ಮುಜೆ ಫಜಲೋ ಕರಂ ಕರ್ನಾ
ತೇರಾ ಆಧಾರ್ ಚಾಹತಾ ಹೂಂ
ಮೇರಾ ದಿಲ್ ಬಾಗ್ ಕೂಮ್ ಲಾಯೆ
ಗುಲೆಗಲ್ ಜಾರಾ ಚಾಹತಾ ಹೂಂ॥

ಫಜಲ್ ದಿಲ್ ಮುರ್ದಾ ಜಿಂದಾಕರ್
ಬನಾವೋ ಶಾದ್ ದಿನ್ ಮೇರಾ
ಸಫಾರ್‌ಕರ್ ಗೈರ್ ಸೆ ಸೀನಾ
ತೇರಾ ಅನುವಾರ್ ಚಾಹತಾ ಹೂಂ॥

ತುಮ್ಹೆ ಸಾಫಿ ತುಮ್ಹೆ ಸಾಗರ್
ತುಮ್ಹೆ ಮೈ ಜಾಂ ಖಾನಾ
ಪೀಲಾವೋ ಜಾಮಾ ವಹೆದತ್ ಕಾ
ತುಮ್ಹೆ ಮೆಹದಾರ್ ಕಾಫಿಹೈ॥

ದೋರಂಗಿಸೆ ಜೋಡಾ ಮುಜಕೋ
ಬನಾ ಏಕ್ ರಂಗ್ ಆಲಂ ಶಾ

ತಕ್ತ್ ಶಾಹಿ ಸೆ ಬೆಹೆತರ್ ಹೈ
ತೇರಾ ದೀದಾರ್ ಚಾಹತಾ ಹೂಂ॥

ಭಗವಂತ ಭಕ್ತರನ್ನು ಪ್ರೀತಿಸುವವನು. ಅವನನ್ನು ಭಕ್ತರು ತಂದೆ, ಬಾಬಾ, ಗುರುವೇ ಎಂಬ ನಾಮಗಳಿಂದ ಕರೆಯುವುದು, ಪೂಜಿಸುವುದು. ಭಗವಂತನಿಗೆ ಭಕ್ತರ ಮನದ ಬೇಡಿಕೆ ಕೇಳಿಸುವುದು. ಗುರುವೇ ಮೀರ್ ಆಲಂ ಬಾಬಾ ಎಂದರೆ ಆಶೀರ್ವದಿಸುವನು. ಭಕ್ತರು ಮನದಲ್ಲಿ ಮೀರ್ ಆಲಂ ಬಾಬಾನನ್ನು ನೆನೆಯುತ್ತ ನಿನ್ನ ಭಕ್ತರನ್ನು ಸದಾ ಕಾಪಾಡು ಕೈ ಹಿಡಿದು ಮುನ್ನಡೆಸು ಬಾಬಾ ನೀನು ಕರುಣಿಸಿ ಕಾಪಾಡುವ ಭಕ್ತರ ಕಾರ್ಯದಲ್ಲಿಯೇ ನಿನ್ನ ದರ್ಶನವು ಭಕ್ತರಿಗಾಗುತ್ತದೆ. ಬಾಬಾ ಕೈ ಮುಗಿದು ಬೇಡುವ ಈ ಭಕ್ತರನ್ನು ನಿನ್ನ ಅನುಗ್ರಹದಿಂದ ಸದಾ ರಕ್ಷಿಸು ಎನ್ನುವ ಅರ್ಥ ಈ ಪದದಿಂದ ತಿಳಿದುಬರುತ್ತದೆ.

೨

ಕರೂ ಕಿಸ್ ಮೂಂಸೆ ಬಡಾಯಿ ತುಮ್ಹಾರಿ
ಖುದಾಕಿ ಕಸಮ್ ಹೈ ಖುದಾಯಿ ತುಮ್ಹಾರಿ॥
ಮಹ್ಮದ್ ನ ಹೋತೆ ತೋ ಕುಚ್ ಬಿ ನಹೋತಾ
ಕಹಾ ಹೋತಿ ಜಲ್ವಾನುಮಾಯಿ ತುಮ್ಹಾರಿ॥

ಮಹ್ಮದ್ ಕೆ ಘರ್ ಜಾಥ್ ಆಯಿ ನ ಹೋತಿ
ತು ದಾರಾಹಿ ನೋಮೋ ರೋಷನ್ ನಾಯಿ ನಾ ಹೋತಿ॥
ಮುಷಕಿಲ್ ಪಡೆತೂಬಿ ಮುಷಕಿಲ್ ತೋ ಶಾ ಹೈ
ಕಟಿನ್ ವಕ್ತ್ ಮುಷಕಿಲ್ ಕೇ ಶಾಯಿ ತುಮ್ಹಾರಿ॥

ವಹಿ ಹೋಂಗೆ ಆಲಂ ಕೆ ಹಾಜತ್ ರಾವಾಬಿ
ಸದಾ ಹೋ ಹಮ್ ಪರ್ ರಹೆನೋಮಾಹಿ ತುಮ್ಹಾರಿ॥

ಬಾಬಾ ನಿನ್ನ ಹೇಗೆ ಹೊಗಳಲಿ, ನಿನ್ನ ಹೇಗೆ ಬಣ್ಣಿಸಲಿ, ಯಾವ ಬಾಯಿಂದ ನಿನ್ನನ್ನು ಕೊಂಡಾಡಲಿ; ಎಂಥ ಮಹಿಮೆ ದೊಡ್ಡದು ತಂದೆ. ಮನತುಂಬಿ ಬೇಡಿದ ಭಕ್ತರ ಕಷ್ಟವ ಕಳೆಯುವ ನೀನು ಕರುಣಾಮಯಿ; ನಿನ್ನ ದಯೆಯಿಲ್ಲದೆ ಯಾವ ಕಾರ್ಯವೂ ನಡೆಯದು. ತಂದೆ ಭಕ್ತರ ಮನಮನೆಯಲ್ಲಿ ಪೂಜಿಸುವ ನಿನ್ನ ಅರೆಕ್ಷಣವು ಮರೆಯಲಾರರು. ಈ ನಿನ್ನ ಭಕ್ತರು ಪ್ರತಿ ಘಳಿಗೆ ಕಾಪಾಡು ಈ ನಿನ್ನ ಭಕ್ತರನು. ಭಕ್ತನು ತನ್ನ ಗೌರವ ಪ್ರೀತಿಯನ್ನು ಬಾಬಾರವರಿಗೆ ತೋರಿಸುತ್ತಿದ್ದಾರೆ.

೩

ಮಹ್ಮದ್ ಮಹ್ಮದ್ ಪುಕಾರಾ ಕರೆಂಗೆ
ದಿಲೋ ಜಾನ್‌ಸೆ ತುಮ್‌ಪರ್ ನಿಸಾರಾ ಕರೆಂಗೆ॥

ಖುದಾ ಘರ್ ಲೇ ಜಾವೆ ಮದೀನೇಮೆ ಹಮ್ ಕೋ
ಹಬೀಬ್ ಖುದಾಕಾ ನಜಾರಾ ಕರೆಂಗೆ॥

ಪಡೆ ಹಿಂದ್ ಮೆ ಹಮ್ ತಲಬ್ ಗಾರ್ ಸರ್ವರ್
ಜುದಾಯ್ ಮೆ ಕಬ್ ತಕ್ ಗುಜಾರಾ ಕರೆಂಗೆ॥

ತುಮ್ಹೆ ರೋಜ್ ಮಹೆಶರ್ ಮೆ ಸಾಖಿ ಹಮಾರೆ
ಅಹೇದ್ ಔರ್ ಅಹ್ಮದ್ ಸಹರಾ ಕರೆಂಗೆ॥

ಕರೆಂಗೆ ಜೊ ಆಲಂ ಸೆ ಆಲಂ ನವಾಜೆ
ಖುದಾ ತರಫ್ ಅಹ್ಮದ್ ಈಷಾರಾ ಕರೆಂಗೆ॥

ಮಹ್ಮದ್ ಮಹ್ಮದ್ ಎಂದು ಕರೆಯುತ್ತ ಬಾಬಾ ನಿನ್ನನ್ನು ಹೃದಯ ತುಂಬಿ ಪ್ರಾರ್ಥಿಸುವ ಭಕ್ತರನ್ನು ಆಶೀರ್ವದಿಸುವ ನಿನ್ನ ಮಹಿಮೆ ದೊಡ್ಡದು. ಮೀರ್ ಆಲಂ ನವಾಜ್ ಬಾಬಾ ಭಕ್ತರ ಮೊರೆಯನ್ನು ಆಲಿಸಿ ಭಕ್ತರ ಕಷ್ಟಗಳಿಗೆ ಸ್ಪಂದಿಸುವ ತಂದೆ. ಸದಾ ಹೀಗೆ ಇರಲಿ ನಿನ್ನ ಅನುಗ್ರಹ ಈ ನಿನ್ನ ಮಕ್ಕಳ ಮೇಲೆ. ಭಕ್ತರು ಮನತುಂಬಿ ತಾವು ನಂಬಿದ ತಮ್ಮ ದೇವರನ್ನು ಮನತುಂಬಿ ಪ್ರಾರ್ಥಿಸುತ್ತಾರೆ.

ಕುಡುತಿನಿಯ ಮಹ್ಮದ್ ಪಾಷಾರವರು ಲಂಗರ್ ಶಾವಲಿ ಬಾಬಾ ಅವರ ಕುರಿತು ರಚಿಸಿರುವ ಸಲಾಂ ಪದಗಳಲ್ಲಿ ಮೂರು ಪದಗಳನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ.

೧

ಶಾವಲಿ ಬಾಬಾ ಶಾವಲಿ ಬಾ
ನಂಬಿದ ಭಕ್ತರ ಕಷ್ಟವ ಕಳೆವ
ಬಾಬಾ ನಿನ್ನ ಪಾದಗಳಿಗೆ
ಸಾವಿರ ಸಾವಿರ ನಮನಗಳು ॥
ಭಕ್ತರ ಮನೆಯ ಬೆಳಕು ನೀನು
ಭಕ್ತರ ದೇಹದ ಶಕ್ತಿ ನೀನು
ಕುಡಿತಿನಿ ಭಕ್ತರನು
ಕಾಪಾಡುವ ನಿನಗೆ
ಸಾವಿರ ಸಾವಿರ ನಮನಗಳು ॥
ಲಂಗರ್ ಶಾವಲಿ ಬಾಬಾ ಎಂದು
ಕೂಗಿದರೆ ಸಾಕು ಓಡೋಡಿ ಬರುವ
ಭಕ್ತರ ಕಣ್ಣೀರೊರೆಸುವ
ನಿನ ಪಾದಗಳಿಗೆ

ಸಾವಿರ ಸಾವಿರ ನಮನಗಳು ॥
ನಮ್ಮ ನಗುವಿಗೆ ಕಾರಣ ನೀನು
ನಮ್ಮ ನೋವ ನಿವಾರಿಸುವೆ ನೀನು
ನಮಗೆಲ್ಲ ಸುಖ ನೀಡುವೆ ನೀನು
ನಿನ ಪಾದಗಳಿಗೆ ಸಾವಿರ ಸಾವಿರ ನಮನಗಳು

ಭಕ್ತರು ತಾವು ನಂಬಿದ ದೈವವನ್ನು ಮನತುಂಬಿ ಹೊಗಳುತ್ತಿದ್ದು, ಭಕ್ತರು ಬಾಬಾ ಅವರನ್ನು ತನು ಮನದಿಂದ ಪೂಜಿಸಿ ತಮ್ಮ ಬೇಡಿಕೆಯನ್ನು ಈಡೇರಿಸಿಕೊಂಡುದರ ಪ್ರತಿಯಾಗಿ ಬಾಬಾರವರಿಗೆ ವಂದನೆಗಳನ್ನು ಸಲ್ಲಿಸುತ್ತಿದ್ದಾರೆ.

೨

ನೀ ನೆಲೆಸಿದ ಈ ಕ್ಷೇತ್ರದಲ್ಲಿ
ನೆಲೆಸಿರುವ ನಾವೇ ಧನ್ಯರು
ನಿನ್ನ ಅನುಗ್ರಹದಲ್ಲಿ ಬಾಳುವ
ನಾವೇ ಸುಖ ಜೀವಿಗಳು ॥
ಪ್ರತಿದಿನವು ಪೂಜಿಸುವೆವು ನಿನ್ನ
ಲಂಗರ್ ಶಾವಲಿ ಬಾಬಾ
ಭಕ್ತರ ಹೃದಯವೆಲ್ಲ ನೀನೇ ತುಂಬಿರುವೆ
ಕರುಣಿಸಿ ಕಾಪಾಡು ನಿನ್ನ ಮಕ್ಕಳ
ದುಃಖ ತುಂಬಿದ ಮನಗಳಲ್ಲಿ
ನೀ ತುಂಬಿದೆ ಆನಂದ
ನೀ ಎಂಥ ಕರುಣಾಳು ತಂದೆ
ಕುಡುತಿನಿಯ ದೈವ ನೀನೆ ತಂದೆ.

ಜನಸಾಮಾನ್ಯರು ತಾವು ನಂಬಿದ ಬಾಬಾರವರನ್ನು ಬೇಡಿಕೊಳ್ಳುತ್ತಿದ್ದಾರೆ. ಭಕ್ತರೆಂಬ ಭಾವನೆಯಲ್ಲಿ ಬಾಬಾ ನೆಲೆಸಿದ ಊರಲ್ಲಿ ಭಕ್ತ ಜನ ಸಮುದಾಯ ತಾವು ನೆಲೆಸಿರುವುದಕ್ಕೆ ಮತ್ತು ಬಾಬಾ ಅವರನ್ನು ನಿತ್ಯ ಭಕ್ತಿಯಿಂದ ಪೂಜಿಸುತ್ತಿರುವುದರ ಫಲದಿಂದ ಸಂತೋಷ ಗೊಂಡಿರುವುದಾಗಿ ಹೇಳಿಕೊಳ್ಳುತ್ತಾರೆ.

೩

ಗುರುವೇ ನೀನು ದೊರೆಯದಿದ್ದರೆ
ನಮಗೆ ಜೀವನದಿ ಸುಖವಿರಲಿಲ್ಲ
ನಿನ್ನ ಪಡೆದ ಭಕ್ತರು ನಾವೆಂದು
ಸುಖ ಸಂತೋಷ ತುಂಬಿ ಬಾಳುವೆಲ್ಲ ॥

ದೇವ ಮಾನವನಾಗಿ ಬಂದೆ
ನಮ್ಮ ಈ ಕುಡುತಿನಿ ಕ್ಷೇತ್ರಕ್ಕೆ
ಮಾನವರಲ್ಲಿ ಮಾನವನಾಗಿ ಬೆರೆತು ಬಾಳಿದೆ
ಕುಡುತಿನಿ ಭಕ್ತರ ಜೊತೆಯಲಿ
ಲಂಗರ್ ಶಾವಲಿ ಬಾಬಾ ಎಂದರೆ
ನಮಗೆ ಮನದಲ್ಲಿ ಎಂಥ ಸಂತಸ
ಎಷ್ಟು ಜನ್ಮ ಕಳೆದರು ನೀನೆ
ನಮ್ಮ ಬಾಳಿಗೆ ಬೆಳಕಾಗಿ ತಂದೆ ॥

ಬಾಬಾ ಅವರು ಭಕ್ತ ಸಮುದಾಯಕ್ಕೆ ಒಬ್ಬ ಗುರುವಾಗಿ ದೈವವಾಗಿ ಅವರ ಜೊತೆ ಮಾನವನಾಗಿ ಬೆರೆತು ಭಕ್ತ ಜನರ ಕಷ್ಟಗಳಿಗೆ ಸ್ಪಂದಿಸಿರುವ ಬಾಬಾರವರಿಗೆ ಭಕ್ತರು ತಮ್ಮ ಪ್ರತಿ ಜನ್ಮಕ್ಕೂ ಇವರ ಕೃಪೆಯಿರಲೆಂದು ಬೇಡುವುದನ್ನು ಇಲ್ಲಿ ಕಾಣಬಹುದಾಗಿದೆ.

ಬಳ್ಳಾರಿಯ ಅಬ್ದುಲ್ ಅವರು ಮಕ್ದುಂ ಜಾನಿ ಬಾಬಾ ಅವರ ಕುರಿತು ರಚಿಸಿರುವ ಸಲಾಂ ಪದಗಳಲ್ಲಿ ಮೂರು ಪದಗಳನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ.

೧

ಮಕ್ದುಂ ಜಾನಿ ಬಾಬಾ
ಜಾನಿ ಬಾಬಾ ಜಾನಿ ಬಾಬಾ
ನೀವೇ ಭಕ್ತರ ಜಾನ್ ಬಾಬಾ
ನಿನ್ನ ನಾಮ ಸ್ಮರಿಸದೆ
ಭಕ್ತರು ಉಸಿರಾಡರು ಬಾಬಾ ॥
ಭಕ್ತರ ಕರೆಗೆ ಓಡೋಡಿ ಬರುವ
ಭಕ್ತರ ಕಷ್ಟಗಳ ನಿವಾರಿಸುವ
ಭಕ್ತರ ಮನದಲ್ಲಿ ಸಂತಸ ತರುವ
ಬಳ್ಳಾರಿ ಬಾಬಾ ಮಕ್ದುಂ ಬಾಬಾ
ಎಲ್ಲರನ್ನು ಸಮನಾಗಿ ಕಾಣುವೆ ನೀನು
ನಂಬಿದ ಮಕ್ಕಳ ಕರುಣಿಸಿ ಕಾಪಾಡುವ
ಎಂಥ ಕರುಣಾಮಯಿ ದೇವ ನೀನು
ನಿನ್ನ ಆಶೀರ್ವಾದ ನಮಗೆ ಶ್ರೀ ರಕ್ಷ

ಬಾಬಾ ಅವರನ್ನು ನಂಬಿದ ಜನಸಮುದಾಯ ಅವರನ್ನು ತಮ್ಮ ಪದಗಳಲ್ಲಿ, ಮಾತುಗಳಲ್ಲಿ ಈ ಭಕ್ತರ ಉಸಿರು ನೀನಾಗಿರುವೆ ತಂದೆ; ಎಲ್ಲರಿಗೆ ಸಮನಾದ ಪ್ರೀತಿಕೊಟ್ಟು ಕಾಪಾಡುವೆ ತಂದೆ ಎಂದು ಹೇಳುವ ಅರ್ಥ ಇಲ್ಲಿ ಕಾಣಸಿತ್ತದೆ.

೨

ಮಕ್ದುಂ ಜಾನಿ ಬಾಬಾ ಮಕ್ದುಂ ಜಾನಿ ಬಾಬಾ
ನೀವೇ ಎಲ್ಲ ನಿಮ್ಮಿಂದಲೇ ನಾವೆಲ್ಲ
ನೀವೇ ತುಂಬಿರುವ ಈ ಹೃದಯ
ಹೇಳುವೆವು ನಿಮಗೆ ನೂರಾರು ನಮನಗಳು
ಕತ್ತಲಿರುವ ಮನದಲ್ಲಿ ಬೆಳಕನ್ನು ತುಂಬಿ
ಮನೆ ಮನೆಯಲ್ಲಿ ಜ್ಯೋತಿಯಾಗಿ ಬೆಳಗಿ
ಬಡತನ ನಿವಾರಿಸಿ ಸುಖವನ್ನು ನೀಡಿರುವ
ಮಕ್ದುಂ ಜಾನಿ ಬಾಬಾ ನಿಮಗೆ ನೂರಾರು ನಮನಗಳು
ನಿಮ್ಮನ್ನು ನಂಬಿ ಬಂದವರ
ಬಾಳಿಗೆ ಬೆಳಕನ್ನು ನೀಡಿ
ದುಃಖದ ಜೀವನಕೆ ಆಸರೆಯಾಗಿರುವ
ಮಕ್ದುಂ ಜಾನಿ ಬಾಬಾ ನಿನಗೆ ನೂರಾರು ನಮನಗಳು
ಅಜ್ಞಾನದ ಜೀವಕ್ಕೆ ನೀನು ಜ್ಞಾನವನು ತುಂಬಿರುವೆ
ಮಾನವೀಯತೆಯುಳ್ಳ ಮನುಜರಾಗಿ ಮಾಡಿರುವ
ಮಕ್ದುಂ ಜಾನಿ ಬಾಬಾ ನಿನಗೆ ನೂರಾರು ನಮನಗಳು

ಮಕ್ದುಂ ಜಾನಿ ಬಾಬಾ ಅವರ ಆಶೀರ್ವಾದದಿಂದ ತಾವು ಕಂಡ ಸಂತಸವನ್ನು ನಮನಗಳಲ್ಲಿ ತಿಳಿಸುತ್ತ, ಕತ್ತಲಾದ ಭಕ್ತರ ಬಾಳನ್ನು ಬೆಳಗಿಸಿ, ಭಕ್ತರ ಬಡತನ ನಿವಾರಣೆ ಮಾಡಿರುವ ಬಾಬಾರಿಗೆ ನಮನಗಳನ್ನು ತಿಳಿಸುತ್ತಿದ್ದಾರೆ.

೩

ಗುರುವಾಗಿ ದೈವವಾಗಿ ಭಕ್ತರ
ಮನೆ ಮನದಿ ಪೂಜಿಸುವ ದೇವರಾಗಿ
ನೀನು ನೆಲೆಸಿದ ಕ್ಷೇತ್ರದ ಭಕ್ತರ
ಕಾಪಾಡುವ ಜಾನಿ ಬಾಬಾಗೆ ವಂದನೆ ಸಲ್ಲಿಸುವೆವು
ನೀನು ನೆಲೆಸಿದ ಈ ಊರು
ಜನರ ಮನದಲ್ಲಿದೆ ಸಂತಸ
ಬಳ್ಳಾರಿ ಜನರ ಜೀವ ನೀನಾದೆ
ಮಕ್ದುಂ ಜಾನಿ ಬಾಬಾಗೆ ವಂದನೆ ಸಲ್ಲಿಸುವೆವು
ನಿನ್ನ ನಂಬಿದ ಜನಕೆ
ಕೊಟ್ಟಿರುವೆ ಸುಖ ಶಾಂತಿ
ಎಂಥ ಮಹಿಮೆ ಇವರದು
ಮಕ್ದುಂ ಜಾನಿ ಬಾಬಾರಿಗೆ ವಂದನೆ ಸಲ್ಲಿಸುವೆವು

ಭಕ್ತರು ತಮ್ಮ ದೈವವಾದ ಬಾಬಾ ಅವರನ್ನು ಗುರುವಾಗಿ, ದೇವರಾಗಿ ಪೂಜಿಸಿ ಅವರ ಆಶೀರ್ವಾದವನ್ನು ಪಡೆದು ಮನೆಮನದಲ್ಲಿ ಸಂತಸವನ್ನು ಭಕ್ತರು ಕಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಬಾಬಾರವರಿಗೆ ವಂದನೆಯನ್ನು ಈ ಪದದ ಮೂಲಕ ಸಲ್ಲಿಸುತ್ತಿದ್ದಾರೆ.

ಉಜ್ಜನಿಯ ಸೈಯದ್ ಮುನಾವರ್ ಅವರು ಸೈಯದ್ ಸಾದಿಕ್ ವಲಿ ಶಾ ಖಾದ್ರಿ ಲೋಲಂಗರ್ ಅವರ ಕುರಿತು ರಚಿಸಿರುವ ಸಲಾಂ ಪದಗಳಲ್ಲಿ ಮೂರು ಪದಗಳನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ.

೧

ಸಾದಿಕ್ ವಲಿ ಲೋಲಂಗರ್
ಸಾರಿ ಸಾರಿ ಹೇಳುವೆವು
ಮನ ತುಂಬಿ ಹಾಡುವೆವು
ಉಜ್ಜನಿ ಬಾಬಾ ಲೋಲಂಗರ್ ಬಾಬಾ
ನೀನೇ ನಮ್ಮ ಜೀವ ಬಾಬಾ ॥
ಗುರುವಾಗಿ ನಂಬಿರುವೆವು
ದೇವರೆಂದು ಪೂಜಿಸಿರುವೆವು
ನಿನ್ನ ಕರುಣೆಯಲ್ಲಿ ಬಾಳುತ್ತಿರುವೆವು
ದೇವಾದಿ ದೇವ ಲೋಲಂಗರ್ ಬಾಬಾ
ಸಂತನಾಗಿ ನೀ ಬಂದು
ಸಂತೋಷ ನಮಗೆಲ್ಲ ತಂದು
ಮರೆಯಾದ ಮಾಣಿಕ್ಯವಾಗಿರುವೆ
ನಂಬಿದವರ ಮನದಲ್ಲಿ ನೆಲೆಸಿರುವೆ ತಂದೆ

ಬಾಬಾ ನಿನಗೆ ಒಂದಲ್ಲ ಎರಡಲ್ಲ ಹಲವು ಸಲ ಹೇಳುವೆವು ನೀನೆ ನಮ್ಮ ಪ್ರಾಣ. ಭಕ್ತರೆಲ್ಲ ಬಾಳಿ ಬದುಕುತ್ತಿರುವುದು ನಿಮ್ಮ ಕರುಣೆಯಲಿ. ಪ್ರತಿಭಕ್ತರು ನಿಮ್ಮನ್ನು ಮನದಲ್ಲಿ ಮನೆ ಮಾಡಿ ಪೂಜಿಸುತ್ತಿರುವರೆಂಬುದನ್ನು ಈ ಪದದಲ್ಲಿ ಕಾಣಬಹುದಾಗಿದೆ.

೨

ಬೆಳಕಾಗಿ ಬಂದು ಬೆಳಗಿದೆ ನೀನು
ಉಜ್ಜನಿ ಜನರ ಬಾಳನ್ನು
ಕತ್ತಲೆಯ ಬಾಳಿಗೆ ಜ್ಯೋತಿಯು ನೀನಾದೆ
ಉಜ್ಜನಿ ಬಾಬಾ ಲೋಲಂಗರ್ ಬಾಬಾ
ಯಾರೆ ಕರೆದರು ನಿನ್ನ
ನಗುನಗುತ ಬಳಿ ಬರುವೆ
ನಂಬಿದವರ ಕಷ್ಟವ ಕಳೆಯುವೆ

ಉಜ್ಜನಿ  ಬಾಬಾ ಲೋಲಂಗರ ಬಾಬಾ
ಹಸಿದ ಹೊಟ್ಟೆಗೆ ಅನ್ನವ ಕೊಟ್ಟಿರುವೆ
ಬಡತನದ ಮನೆಗೆ ಶ್ರೀಮಂತಿಕೆ ಕೊಟ್ಟಿರುವೆ
ರೋಗ ನಿವಾರಣೆ ಮಾಡಿ ಆರೋಗ್ಯ ಕೊಟ್ಟಿರುವೆ
ಉಜ್ಜನಿ ಬಾಬಾ ಲೋಲಂಗರ್ ಬಾಬಾ
ನಂಬಿದ ಭಕ್ತರಿಗೆ ಆಸರೆ ನೀನಾದೆ
ಪ್ರತಿ ಭಕ್ತರ ಮನೆಯ ಬೆಳಕಾಗಿ ನೀನು
ಭಕ್ತರು ಪೂಜಿಸುವ ದೇವರು ನೀನಾದೆ
ಉಜ್ಜನಿ ಬಾಬಾ ಲೋಲಂಗರ್ ಬಾಬಾ

ಭಕ್ತರು ತಾವು ನೆಲೆಸಿರುವ ಊರಿನ ದೈವವಾದ ಲೋಲಂಗರ್ ಬಾಬಾ ಅವರು ನೊಂದು ಬೆಂದು ಕತ್ತಲಾದ ಬಾಳಿಗೆ ಬೆಳಕಾಗಿ, ಭಕ್ತರ ಕೂಗಿಗೆ ಓಗೊಟ್ಟು ಬಂದು ಕಷ್ಟವ ಕಳೆಯುವ ಲೋಲಂಗರ್ ಬಾಬಾ ಅವರ ಮಹಿಮೆಯನ್ನು ಹೀಗೆ ಪದವಾಗಿಸಿದ್ದಾರೆ.

೩

ವಲಿ ಶಾ ಖಾದ್ರಿ ಲೋಲಂಗರ್ ಬಾಬಾ
ನಿಮಗೆ ಕೋಟಿ ಕೋಟಿ ನಮನಗಳು
ಗುರುವಾಗಿ ದಾರಿ ತೋರಿ
ದೇವರಾಗಿ ಆಶೀರ್ವದಿಸಿ
ನಂಬಿರುವ ಭಕ್ತರ
ಕಷ್ಟ ನಿವಾರಿಸಿರುವೆ
ಲೋಲಂಗರ್ ಬಾಬಾಗೆ ಕೋಟಿ ನಮನಗಳು ॥
ಪ್ರತಿ ಕ್ಷಣವು ಸ್ಮರಿಸುವ
ಪ್ರತಿ ದಿನವೂ ಪೂಜಿಸುವ
ನಿನ್ನ ಭಕ್ತರ ಮನೆಯ ಜ್ಯೋತಿ ನೀನಾದೆ
ಲೋಲಂಗರ್ ಬಾಬಾಗೆ ಕೋಟಿ ನಮನಗಳು
ಭಕ್ತರ ಬಾಳಿಗೆ ಶಕ್ತಿಯು ನೀನಾಗಿ
ನಂಬಿದ ದೇಹಕ್ಕೆ ಉಸಿರು  ನೀನಾಗಿ
ಭಕ್ತರ ಬಾಳನ್ನ ಬೆಳಗುವೆ ಸದಾ ನೀನು
ಲೋಲಂಗರ್ ಬಾಬಾಗೆ ಕೋಟಿ ನಮನಗಳು

ಭಕ್ತರು ಬಾಬಾ ಅವರಿಗೆ ಕೋಟಿ ನಮನಗಳನ್ನು ಸಲ್ಲಿಸುತ್ತಿದ್ದಾರೆ. ಗುರುವಾಗಿ, ದಾರಿ ತೋರಿ ದೇವರಾಗಿ ಆಶೀರ್ವದಿಸಿ, ಭಕ್ತರನು ಕರುಣೆಯಿಂದ ಕಾಪಾಡುವ ಬಾಬಾಗೆ ಕೋಟಿ ನಮನಗಳನ್ನು ಪದಗಳ ಮೂಲಕ ಸಲ್ಲಿಸುತ್ತಿದ್ದಾರೆ.

**ಕೊನೆ ಟಿಪ್ಪಣಿಗಳು**

೧. ವಿದ್ವಾನ್‌ಭುಜಂಗಮ್ಮಠದ ಗುರುಸಿದ್ಧಯ್ಯನವರು, **ಕಾನಾಮಡುವಿನ ಶ್ರೀ ಶರಣಾರ್ಯರು,** ಪುಟ ೮೭.

೨. ಶ್ರೀಮತಿ ಕೆ. ಅನುಸೂಯಮ್ಮ ಶರಣಪ್ಪ ಆಲೂರು, **ಶ್ರೀ ಶರಣಾರ್ಯರ ಸುಪ್ರಭಾತ ಮತ್ತು ಭಕ್ತಿಗೀತೆಗಳು,** ಪುಟ ೧, ೨, ೩.

ಅದೇ, ಪುಟ ೯.

೩. ಪ್ರಭಾನಂದ ಪಂಡಿತರು, **ಸಿಂಧಿಗೇರಿ ಮಲ್ಲೇಶ್ವರನ ಪುರಾಣ,** ಪುಟ ಸಂಧಿ ೩೧.

೪. ಅದೇ, ಪುಟ ೨೮೫.

೫. ಪಂಡಿತ ವೈ. ನಾಗೇಶ ಶಾಸ್ತ್ರಿಗಳು, **ಶ್ರೀ ಮರಿಯೋಗೀಶ್ವರ ಪುರಾಣವು,** ಪುಟ ೨೦೭.

೬. ಡಾ. ಕೆ.ಎಂ. ಮೇತ್ರಿ ಮತ್ತು ಡಾ. ಮೃತ್ಯುಂಜಯ ರುಮಾಲೆ, **ಕುರುಗೋಡು ನೀಲಮ್ಮನವರ ಸಾಂಸ್ಕೃತಿಕ ಅಧ್ಯಯನ,** ಪುಟ ೧೪.

ಅದೇ, ಪುಟ ೨೫.

ಅದೇ, ಪುಟ ೬೫.

೭. ಡಾ. ಎನ್.ಹೆಚ್. ಉತ್ತಂಗಿ, **ಶ್ರೀ ಗುರು ದೊಡ್ಡಬಸವೇಶ್ವರ ಸುಪ್ರಭಾತ ಹಾಗೂ ಭಕ್ತಿಗೀತೆಗಳು,** ಪುಟ ೧, ೨.

೮. ಅದೇ, ಪುಟ ೯.

೯. ಅದೇ, ಪುಟ ೧೦.

೧೦. ಅದೇ, ಪುಟ ೧೪.

೧೧. ಅದೇ, ಪುಟ ೧೬.

೧೨. ಅದೇ, ಪುಟ ೨೬.

೧೩. ಅದೇ, ಪುಟ ೨೮.

೧೪. ಡಾ. ರಂಗಾರೆಡ್ಡಿ ಕೋಡಿರಾಂಪುರ(ಸಂ), **ತತ್ವಪದಗಳು,** ಪುಟ ೧೩೦.

೧೫. ಅದೇ, ಪುಟ ೧೩೧.

೧೬. ಅದೇ, ಪುಟ ೧೩೧, ೧೩೨.

೧೭. ಅದೇ, ಪುಟ ೧೩೨, ೧೩೩.

೧೮. ಡಾ. ಜೋಳದರಾಶಿ ದೊಡ್ಡನಗೌಡರು(ಸಂ), **ಚೆಳ್ಳಗುರ್ಕಿ ಶ್ರೀ ಎರ್ರಿಸ್ವಾಮಿಗಳ ಶಿವಮಯ ಜೀವನ ಚರಿತ್ರೆ ಮತ್ತು ಶ್ರೀ ತಿಕ್ಕಯ್ಯಾವಧೂತರು ವಿರಚಿತ ಭಕ್ತಿಗೀತೆಗಳು,** ಪುಟ ೨೭.

೧೯. ಅದೇ, ಪುಟ ೨೮.

೨೦. ಅದೇ, ಪುಟ ೩೨.

೨೧. ಅದೇ, ಪುಟ ೩೧.

೨೨. ಡಾ. ರಂಗಾರೆಡ್ಡಿ ಕೋಡಿರಾಂಪುರ(ಸಂ), **ತತ್ವಪದಗಳು,** ಪುಟ ೧೪೨.

೨೩. ಅದೇ, ಪುಟ ೧೪೨, ೧೪೩.

೨೪. ಅದೇ, ಪುಟ ೧೪೪.

೨೫. ಜಿ.ವಿ. ಆನಂದಮೂರ್ತಿ, **ತತ್ವಪದಕಾರರು,** ಪುಟ ೬೧.

೨೬. ಅದೇ, ಪುಟ ೧೦.



ಅಧ್ಯಾಯ : ಆರು

# ತುಂಗಭದ್ರಾ ನದಿ ಪ್ರಾಂತ್ಯದ ಅನುಭಾವಿಗಳ ಸಾಂಸ್ಕೃತಿಕ ದಾಖಲೆಗಳು

೬.೧. ಪೂಜೆ

೬.೨. ಜಾತ್ರೆ -ಉತ್ಸವಗಳು

೬.೩. ನಂಬಿಕೆ -ಸಂಪ್ರದಾಯಗಳು

೬.೪. ಪವಾಡಗಳ ಆಶಯ

೬.೫. ಮಹಿಮೆ ವರ್ಣನೆಯ ಉದ್ದೇಶ

೬.೬. ಪ್ರಸ್ತುತತೆ

### ಅಧ್ಯಾಯ : ಆರು

# ತುಂಗಭದ್ರಾ ನದಿ ಪ್ರಾಂತ್ಯದ ಅನುಭಾವಿಗಳ ಸಾಂಸ್ಕೃತಿಕ ದಾಖಲೆಗಳು

ನಾಡಿನಾದ್ಯಂತ ಇರುವ ಅನೇಕ ದೇವರು, ಸಾಧು ಸಂತರ, ಶರಣರ, ಸೂಫಿಗಳ, ಆರೂಢರ, ಅವಧೂತರ ಹೆಸರಿನಲ್ಲಿ ವಿಶಿಷ್ಟ ಆಚರಣೆಗಳು ನಡೆಯುತ್ತಲಿವೆ. ವಿವಿಧ ರೀತಿಯ ಆರಾಧನಾ ಸ್ಥಳಗಳಲ್ಲಿ ಅವರವರ ಮತ-ಧರ್ಮ, ದೇವರುಗಳ ಹೆಸರಿನಲ್ಲಿ ನಿರ್ಮಾಣಗೊಂಡಿರುವ ಅನೇಕ ಗುಡಿ, ಚರ್ಚು, ಮಸೀದಿ, ಜಿನಾಲಯ, ವಿಹಾರ, ಗದ್ದುಗೆ ಅಥವಾ ಸಮಾಧಿಗಳಾಗಿ ಆರಾಧನೆಗೆ ಒಳಪಡುತ್ತಿವೆ. ವಿಶೇಷ ದಿನಗಳಲ್ಲಿ, ಹಬ್ಬಗಳಲ್ಲಿ ಮತ್ತು ದೇವರುಗಳೆನಿಸಿಕೊಂಡು ಪೂಜಿಸಿಕೊಂಡಿರುವವರ ಲಿಂಗೈಕ್ಯ, ಜೀವೈಕ್ಯಗೊಂಡಿರುವ ದಿನಗಳಂದು ವಿಶೇಷ ಆಚರಣಾ ದಿನಗಳಾಗಿ ಜೀವಪಡೆದುಕೊಳ್ಳುತ್ತವೆ. ಈ ಆಚರಣೆಯ ಸಮಯದಲ್ಲಿ ಸುತ್ತಮುತ್ತಲಿನ ಊರುಗಳಿಂದ ಅಪಾರ ಸಂಖ್ಯೆಯಲ್ಲಿ ಭಕ್ತ ಜನತೆ ತಮ್ಮ ಕಷ್ಟ ಪರಿಹಾರಕ್ಕಾಗಿ ತಾವು ಬೇಡಿಕೊಂಡಂತೆ ಹರಕೆ ಮಾಡಿಕೊಂಡಂತೆ ಆಚರಣೆಯಲ್ಲಿ ಪಾಲ್ಗೊಂಡು ಸೇವೆ ಸಲ್ಲಿಸುತ್ತಿರುತ್ತಾರೆ.

ಧಾರ್ಮಿಕ ಮತ್ತು ಸಾಮಾಜಿಕ ಬಾಂಧವ್ಯ ಮತ್ತು ಸಮನ್ವಯ ಸಹಿಷ್ಣುತೆಗೆ ಹೆಸರಾಗಿರುವ ಶರಣರು ಮತ್ತು ಸೂಫಿಗಳು ಹಾಗು ತತ್ವಪದಕಾರರ ಮಠ, ಗುಡಿ, ದರ್ಗಾಗಳಲ್ಲಿ ನಡೆಯುವ ಜಾತ್ರೆ, ಉತ್ಸವ, ಊರುಸುಗಳು ತಮ್ಮದೇ ಆದ ಪರಂಪರೆಯನ್ನು ಉಳಿಸಿಕೊಂಡಿವೆ. ಶರಣರು ಮತ್ತು ಸೂಫಿಗಳು ಐಕ್ಯರಾಗಿರುವ ಸ್ಥಳಗಳಲ್ಲಿ ಗದ್ದುಗೆ -ಸಮಾಧಿಗಳಿದ್ದು, ಮಠ, ದೇವಾಲಯ, ದರ್ಗಾಗಳು ನಿರ್ಮಾಣವಾಗಿವೆ. ಅಲ್ಲಿ ಯಾವ ಗುರು ಶಿಷ್ಯರೆಂಬ ಪರಂಪರಗಳು ಇರುವುದಿಲ್ಲ. ಅವರ ವಂಶದವರು ಇಲ್ಲವೆ ವಂಶದವರ ಮಠದ ಸಮಿತಿಯವರು ನೇಮಿಸಿದ ಅರ್ಚಕರು ಇರುತ್ತಾರೆ. ಅರ್ಚಕರು ಶಾಸ್ತ್ರೋಕ್ತವಾಗಿ ಪ್ರತಿದಿನ ಪೂಜೆ ಸಲ್ಲಿಸುತ್ತಾರೆ. ಭಕ್ತರು ತಮ್ಮ ಸುಖಮಯ ಜೀವನಕ್ಕೆ ವಿವಿಧ ರೀತಿಯ ಆಚರಣೆಗಳನ್ನು ಅನಿವಾರ್ಯವೆನಿಸುವ ಹಾಗೆ ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಶರಣರ ಮತ್ತು ಸೂಫಿಗಳ ಗದ್ದುಗೆ ಮತ್ತು ದರ್ಗಾದಲ್ಲಿರುವ ಸಮಾಧಿ, ಗುಡಿ, ಮಠಗಳಲ್ಲಿ ನಿರ್ಮಿಸಿರುವ ಮೂರ್ತಿಗಳಿಗೆ ವಿಶೇಷ ಪೂಜೆ, ಅಭಿಷೇಕ, ಜಾತ್ರೋತ್ಸವ, ಉರುಸುಗಳು ಬೆಳೆದು ಬಂದಿರುವುದನ್ನು ಗಮನಿಸಬಹುದಾಗಿದೆ.

೬.೧. ಪೂಜೆ

ಜಗತ್ತಿನ ಸೃಷ್ಟಿಗೆ, ಮಾನವನ ಜೀವನದ ಒಳಿತಿಗೆ ಪೂರಕವಾಗಿ ಪ್ರಕೃತಿಯ ವಿವಿಧ ವಿದ್ಯಮಾನಗಳಿಗೆ ಸ್ಪಂದಿಸಿ ಪ್ರಾಕೃತಿಕ ಶಕ್ತಿಗಳನ್ನು ನಂಬಿಕೆಯ ದೇವರನ್ನು ಪೂಜಿಸುತ್ತ ಬಂದಿರುವುದು ಇತಿಹಾಸ. ಈ ಪೂಜಿಸುವ, ಆರಾಧಿಸುವ ಪರಂಪರೆ ಅನಾದಿಕಾಲದಿಂದಲೂ ಬಂದಿದೆ ಎಂಬುದು ನಿರ್ವಿವಾದ. ಆರಂಭದಲ್ಲಿ ಪ್ರಕೃತಿಯನ್ನು, ಪೂಜಿಸಿದ ಮಾನವ ದೈವ - ದೇವರುಗಳನ್ನು ಆರಾಧಿಸಲು ಆರಂಭಿಸಿದ. ತನ್ನ ಜೀವನಕ್ಕೆ ಸಹಾಯಕವಾದ ಹಿರಿಯರನ್ನು, ಮಹಾತ್ಮರನ್ನು, ಪವಾಡ ಪುರುಷರನ್ನು ಆರಾಧಿಸುತ್ತಾ, ಗೌರವಿಸುತ್ತ ಬರತೊಡಗಿದ. ಆ ಮೂಲಕ ಸಹಾಯಕರಿಗೆ, ತಮ್ಮ ಶಕ್ತಿಯಿಂದ ಸಹಾಯ ಮಾಡಿದವರಿಗೆ ಗೌರವಿಸುವ ಮೂಲಕ ತಮ್ಮ ಆತ್ಮತೃಪ್ತಿಯನ್ನು ಮಾಡಿಕೊಂಡು ಬರಲಾಯಿತು. ಕಾಲ ಬದಲಾದಂತೆ ಆರಾಧನೆಯಲ್ಲೂ ಅನೇಕ ಸ್ವರೂಪಗಳು ಕಂಡು ಬಂದವು. ವಿಭಿನ್ನ ಧರ್ಮ - ಪಂಥ - ಜಾತಿಗಳು ಉಂಟಾದಂತೆ ಆರಾಧನೆಯಲ್ಲೂ ವ್ಯತ್ಯಾಸಗಳುಂಟಾದವು. ಶಿಷ್ಟ - ಪರಿಶಿಷ್ಟವೆಂಬ ಭೇದಭಾವಗಳುಂಟಾದವು. ಪ್ರಸ್ತುತ ಕಾಲಘಟ್ಟದಲ್ಲಿ ಅದನ್ನು ನಿಖರವಾಗಿ ಗುರುತಿಸಬಹುದಾಗಿದೆ. ಸಂಸ್ಕೃತ ಭಾಷೆಯ ಮಂತ್ರಗಳಿಂದ ಪುರಾಣ ಮತ್ತು ಆಗಮ ಮಾರ್ಗಗಳನ್ನು ಅನುಸರಿಸುತ್ತ ಆರಾಧಿಸುವ ಕ್ರಮವನ್ನು ಶಿಷ್ಟವೆಂದು ಕರೆದರೆ, ಮಾನವನನ್ನೇ ದೇವರನ್ನಾಗಿ, ದೈವಾಂಶ ಸಂಭೂತರನ್ನಾಗಿ ತಮಗೆ ತಿಳಿದಂತೆ, ತಮ್ಮಿಷ್ಟದಂತೆ ಪೂಜಿಸುವ ಕ್ರಮವನ್ನು ಪರಿಶಿಷ್ಟವೆಂದು ಕರೆಯಲಾಯಿತು. ಪ್ರಸ್ತುತ ಅಧ್ಯಯನದಲ್ಲಿ ಪವಾಡ ಪುರುಷರ, ಸೂಫಿ - ಸಂತರ, ಶರಣರ, ಅನುಭಾವಿಗಳ, ಆರೂಢರ ಆರಾಧನೆಗಳೆಲ್ಲವೂ ಭಕ್ತರ ಇಚ್ಛೆಗನುಸಾರವಾಗಿ ನೆರವೇರುತ್ತದೆಯೇ ವಿನಃ ಪುರಾಣ - ಆಗಮ ಮಾರ್ಗಗಳನ್ನು ಅನುಸರಿಸುತ್ತಿಲ್ಲವೆಂದು ತಿಳಿಯಬಹುದು.

ಶರಣರು ಸೂಫಿಗಳು ಮತ್ತು ತತ್ವಪದಕಾರರು ಆಡಂಬರದ ಅಥವಾ ಡಂಭಾಚಾರದ ಪೂಜೆಗಳನ್ನು ಆಚರಣೆಗಳನ್ನು, ಆಚರಿಸಿದವರಲ್ಲ. ಇವರು ಮನಸ್ಸಿನ ಪೂಜೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿದವರು. ಆತ್ಮಜ್ಞಾನಿಗಳಾಗಿ ಮಹಾ ಶಿವಯೋಗಿಗಳಾಗಿ ಅನುಭಾವಿಗಳಾಗಿದ್ದವರು. ಈ ಅನುಭಾವಿಗಳ ಮರಣಾನಂತರ ಅವರು ಸಮಾಧಿ ಸ್ಥಳಗಳಲ್ಲಿ ಮತ್ತು ಅವರು ಕೆಲವು ಪ್ರದೇಶಗಳಲ್ಲಿ ಸಂಚಾರ ಮಾಡಿದರೆನ್ನಲಾದ ಹಲವು ಗ್ರಾಮಗಳಲ್ಲಿ, ಮಠ–ಮಂದಿರಗಳನ್ನು ನಿರ್ಮಿಸಿ ಪ್ರತಿನಿತ್ಯ ಪೂಜೆ ಆಚರಣೆ ಉತ್ಸವಗಳು ಜಾತ್ರೆಗಳು, ಉರುಸುಗಳು ನಡೆಯಲಾಗುತ್ತಿದೆ. ಸಮಾಧಿಯಾದ ಸ್ಥಳದಲ್ಲಿ ಗದ್ದುಗೆ ನಿರ್ಮಿಸಿ ಅದರ ಮೇಲೆ ಮೂರ್ತಿಗಳ ನಿರ್ಮಾಣ ಮಾಡಿ ಪೂಜಿಸುತ್ತಿದ್ದಾರೆ. ಶರಣರದಾದರೆ ಮುಖವಾಡವನ್ನು ಲೋಹದಲ್ಲಿ ಮಾಡಿಸಿರುತ್ತಾರೆ. ಕೆಲವು ಕಡೆ ಮುಖವಾಡವಿಲ್ಲದೆ ಲಿಂಗ ಇಟ್ಟಿರುತ್ತಾರೆ. ಕೆಲವರ ಗದ್ದುಗೆಯ ಮೇಲೆ ಬಸವಣ್ಣನನ್ನು ನಿರ್ಮಿಸಿರುತ್ತಾರೆ. ಸೂಫಿಗಳದು ಯಾವ ಮೂರ್ತಿ ಇರುವುದಿಲ್ಲ. ಸಮಾಧಿಯನ್ನು ದೊಡ್ಡ ಕಟ್ಟೆಯನ್ನಾಗಿ ಮಾಡಿ ಅದರ ಮೇಲೆ ಸಮಾಧಿಯನ್ನು ಕಟ್ಟಿರುತ್ತಾರೆ. ಅದಕ್ಕೆ ಬಟ್ಟೆಯನ್ನು

ಹೊದಿಸಿ ಮೇಲೆ ಹೂವನ್ನು ಹಾಕಿರುತ್ತಾರೆ. ಇನ್ನು ತತ್ವಪದಕಾರರಿಗೆ ಯಾವ ಊರಲ್ಲೂ ಗುಡಿ - ದೇವಾಲಯ - ಮಠ ಪ್ರತಿಮೆಗಳನ್ನು ನಿರ್ಮಾಣ ಮಾಡಿರುವುದಿಲ್ಲ. ಆದರೆ ಇವರು ರಚಿಸಿದ ಪದಗಳನ್ನು ಎಲ್ಲಾ ದೇವಾಲಯಗಳಲ್ಲಿ ಪ್ರತಿನಿತ್ಯ ಪೂಜೆ ಮಾಡುವಾಗ ಹಾಡುತ್ತಾರೆ. ಈ ಹಾಡುಗಳಲ್ಲಿ ಇವರು ಜೀವಂತಿಕೆಯನ್ನು ಪಡೆದುಕೊಳ್ಳುತ್ತಾರೆ. ತತ್ವಪದಕಾರರಾದ ಬಸವಲಿಂಗ ಶರಣರದು ಮಾತ್ರ ಮೈಲಾರದಲ್ಲಿ ಪ್ರತಿಮೆಯನ್ನು ಮಾಡಿದ್ದಾರೆ. ಆದರೆ ಅದನ್ನು ಯಾರು ಪೂಜಿಸುವಂತೆ ಕಾಣಿಸುವುದಿಲ್ಲ. ಈ ಮಠಗಳಲ್ಲಿ ಮತ್ತು ದರ್ಗಾಗಳಲ್ಲಿ ದಿನಕ್ಕೆ ಎರಡು ಮೂರು ಹೊತ್ತು ನಡೆಯಲಿರುವ ಪೂಜೆಯ ಜೊತೆಗೆ ಮಠಗಳಲ್ಲಿ ಮಾತ್ರ ದಿನಕ್ಕೆ ಎರಡು ಮೂರು ಹೊತ್ತು ಪೂಜೆ ನಡೆದರೆ ದರ್ಗಾಗಳಲ್ಲಿ ಭಕ್ತರು ಬಂದಂತೆಲ್ಲಾ ಹಗಲೆಲ್ಲ ಪೂಜೆಯನ್ನು ಮಾಡುತ್ತಾರೆ. ಶರಣರ ಮಠಗಳಲ್ಲಿ ಸೋಮವಾರ ವಿಶೇಷವಾದ ಪೂಜೆ ಮಾಡಿದರೆ ದರ್ಗಾಗಳಲ್ಲಿ ಗುರುವಾರ, ಶುಕ್ರವಾರ ದಿನಗಳಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಪೂಜೆಯನ್ನು ಅರ್ಚಕರು (ಪೂಜಾರಿಗಳು) ಸಂಪ್ರದಾಯ ಬದ್ಧವಾಗಿ ನೆರವೇರಿಸುತ್ತಾರೆ. ಪ್ರತಿ ಅಮಾವಾಸ್ಯೆಗೆ ಮತ್ತು ಶ್ರಾವಣ ಮಾಸದಲ್ಲಿ ಹಾಗು ಕಾರ್ತಿಕ ಮಾಸದಲ್ಲಿ ವಿಶೇಷ ಪೂಜೆಗಳು ನಡೆಯುತ್ತಲಿದ್ದು, ಸಾವಿರಾರು ಭಕ್ತರು ಪೂಜೆಗೆ ಆಗಮಿಸುತ್ತಾರೆ. ಇತ್ತೀಚಿಗಂತೂ ಪ್ರಸ್ತುತವಾಗಿ ಈ ದಿನಗಳಲ್ಲಿ ಮಠದಲ್ಲಿ ಮತ್ತು ದರ್ಗಾಗಳಲ್ಲಿ ಅಮಾವಾಸ್ಯ ಪೂಜೆಗೆ ವಿಶೇಷ ಮಹತ್ವವಿದ್ದು ಜನರು ಜಾತ್ರೆಗೆ ಸೇರಿದಂತೆ ಸೇರಿರುತ್ತಾರೆ.

ಹಬ್ಬಗಳಂದು ಮತ್ತು ಜಾತ್ರೆ ಉತ್ಸವ, ಉರುಸ್ಸುಗಳಲ್ಲಿ ವಿಶೇಷ ದಿನಗಳಲ್ಲಿ ಪೂಜೆಗಳು ವೈಭವದಿಂದ ನಡೆಯುತ್ತಲಿದ್ದು, ಭಕ್ತರು ಕಿಕ್ಕಿರಿದು ನೆರೆದಿರುತ್ತಾರೆ. ಪೂಜೆಯ ಸಮಯದಲ್ಲಿ ಮಠ - ಗುಡಿಗಳಲ್ಲಿ ನಗಾರಿ, ಘಂಟೆ, ಜಾಗಟೆ ಬಾರಿಸುತ್ತಿದ್ದು, ಆಗಮಿಸಿದ ಭಕ್ತರು ತಾವು ನಂಬಿ ಬಂದ ದೈವಾಂಶಸಂಭೂತರ ದರ್ಶನ ಪಡೆದು, ಗದ್ದುಗೆಯ, ಸಮಾಧಿಯ ಸುತ್ತ ಪ್ರದಕ್ಷಿಣೆ ಹಾಕಿ ಪ್ರಸಾದ ಸ್ವೀಕರಿಸುವರು. ಭಕ್ತರು ತಾವು ನಂಬಿದ ದೈವಾಂಶಸಂಭೂತರು ಉಪಯೋಗಿಸಿದ ಮಂಚ, ಕುರ್ಚಿ, ವಸ್ತ್ರ, ಪಾದುಕೆ, ಪಲ್ಲಕ್ಕಿಗಳಿಗೆಲ್ಲ ನಮಸ್ಕರಿಸುತ್ತಾರೆ. ದೂರದ ಪ್ರದೇಶಗಳಿಂದ ಭಕ್ತ ಜನರು ತಮ್ಮ ಆರಾಧ್ಯ ದೈವಸಂಭೂತರಾದ ದೇವರನ್ನು ಕಾಣಲು ಮಠಗಳಿಗೆ ದರ್ಗಾಗಳಿಗೆ ಬರುತ್ತಾರೆ. ಬಂದವರಿಗೆ ಉಳಿದುಕೊಳ್ಳಲು, ವಿಶ್ರಾಂತಿ ಪಡೆದುಕೊಳ್ಳಲು ಮಠ ಮತ್ತು ದರ್ಗಾಗಳಲ್ಲಿ ವಸತಿ ವ್ಯವಸ್ಥೆ ಮಾಡಲಾಗಿದೆ. ಕೆಲವು ಮಠ ಮತ್ತು ದರ್ಗಾಗಳಲ್ಲಿ ವ್ಯವಸ್ಥೆಯಿದೆ. ಕೆಲವು ಕಡೆ ವ್ಯವಸ್ಥೆಯಿಲ್ಲ. ಕೆಲವು ಮಠಗಳಲ್ಲಿ ದಾಸೋಹದ ವ್ಯವಸ್ಥೆಯಿದೆ. ದರ್ಗಾಗಳಲ್ಲಿ ನಿತ್ಯ ದಾಸೋಹ ಇರುವುದಿಲ್ಲ. ಈ ಮಠ ಮತ್ತು ದರ್ಗಾಗಳಲ್ಲಿ ವಿಶೇಷ ದಿನಗಳಂದು ನಡೆಯುವ ಪೂಜಾದಿನಗಳಂದು ಮಾತ್ರ ಈ ವ್ಯವಸ್ಥೆಯಿರುತ್ತದೆ. ಪ್ರತಿ ಮಠ ಮತ್ತು ದರ್ಗಾಗಳಲ್ಲಿ ಪೂಜೆಗಳು ಉತ್ಸವಗಳು, ಜಾತ್ರೆಗಳು, ಉರುಸುಗಳು ಸುಗಮವಾಗಿ ನಡೆಯುವಂತೆ ಸಮಿತಿಯೊಂದನ್ನು ರಚಿಸಿಕೊಂಡಿರುತ್ತಾರೆ.

ಕುರುಗೋಡು ನೀಲಮ್ಮನ ಮಠದಲ್ಲಿ ನಡೆಯುವ ನಿತ್ಯ ಪೂಜೆಯ ಜೊತೆಗೆ ವರ್ಷದಲ್ಲಿ ವಿಶೇಷ ಪೂಜಾ ಕಾರ್ಯಕ್ರಮಗಳ ವಿವರವನ್ನು ಗಮನಿಸೋಣ.

೧. ಧನುರ್ಮಾಸದಲ್ಲಿ ಪೂಜೆ.

೨. ವಿಶೇಷತೆಯಿಂದ ಕೂಡಿದ ಪೂಜೆಯೆಂದರೆ ಶ್ರಾವಣಮಾಸದ ಪೂಜೆ, ಉತ್ಸವ, ಜಾತ್ರೆ, ಆಚರಣೆಗಳು ನಡೆಯುತ್ತವೆ.

೩. ಪ್ರತಿ ಅಮಾವಾಸ್ಯೆ ಮತ್ತು ಹುಣ್ಣಿಮೆಯೆಂದು ವಿಶೇಷ ಪೂಜೆ.

೪. ಕುರುಗೋಡಿಗೆ ಬರುವ ಸೊಸೆಯಂದಿರು, ಊರಿನಿಂದ ಹೊರಡುವ ಹೆಣ್ಣು ಮಕ್ಕಳು ನೀಲಮ್ಮನ ಮಠಕ್ಕೆ ಹೋಗಿ ದರ್ಶನ ಪಡೆದು ಬರುವ ಸಂಪ್ರದಾಯವಿದೆ.

೫. ನೀಲಮ್ಮನ ನಾಟಕವನ್ನು ಶ್ರಾವಣಮಾಸದಲ್ಲಿ ನಡೆಯುವ ಜಾತ್ರೆಯ ಸಮಯದಲ್ಲಿ ನಡೆಯುತ್ತದೆ.

೬. ನೀಲಮ್ಮನ ಮಠವು ಕುರುಗೋಡು ಮತ್ತು ಮುದ್ದಾಪುರದಲ್ಲೂ ಇರುವುದರಿಂದ ಎರಡು ಕಡೆಯು ಉತ್ಸವ ನಡೆಯುತ್ತದೆ.

೭. ಮುದ್ದಾಪುರದಲ್ಲಿ ನೀಲಮ್ಮನ ಜಾತ್ರೆಯನ್ನು ಪ್ರತಿವರ್ಷ ಶ್ರಾವಣ ಮಾಸದ ಕೊನೆಯ ಸೋಮವಾರ ಮತ್ತು ಅದರ ಹಿಂದಿನ ರವಿವಾರ ಎರಡು ದಿನಗಳಂದು ಉತ್ಸವ ಮತ್ತು ಜಾತ್ರೆಯನ್ನು ಆಚರಿಸಲಾಗುತ್ತದೆ.

೮. ಶ್ರಾವಣ ಮಾಸದಲ್ಲಿ ಸಿಂಧಿಗೇರಿಯಲ್ಲಿ ಬಸವಣ್ಣನಿಗೂ ನೀಲಮ್ಮನಿಗೂ ನಿಶ್ಚಿತಾರ್ಥ ಕಾರ್ಯಕ್ರಮವನ್ನು ಮಾಡುತ್ತಾರೆ.

ಕೆಲವು ಮಠಗಳಲ್ಲಿ ವಂಶಸ್ಥರಿಂದ ಇಲ್ಲವೆ ಸಮಿತಿಯವರು ನೇಮಿಸಿದ ಅರ್ಚಕರಿಂದ ಸಂಪ್ರದಾಯಬದ್ಧವಾದ ರೀತಿಯಲ್ಲಿ ಪೂಜೆಗಳು ನಡೆಯುತ್ತಿವೆ. ಕೆಲವು ಮಠಗಳಲ್ಲಿ ನಿತ್ಯ ಎರಡು ಬಾರಿ ಪೂಜೆಯಿದ್ದರೆ, ಕೆಲವು ಮಠಗಳಲ್ಲಿ ನಿತ್ಯ ಮೂರು ಬಾರಿ ಪೂಜೆಯ ಜೊತೆಗೆ ರಾತ್ರಿ ಹೊತ್ತು ಭಜನಾ ಕಾರ್ಯಕ್ರಮಗಳು ಇರುತ್ತವೆ. ಸೋಮವಾರ ಮತ್ತು ಅಮಾವಾಸ್ಯೆಯ ಪೂಜೆಗೆ ವಿಶೇಷ ಮಹತ್ವವಿರುತ್ತದೆ. ಹಾಗೆ ಶರಣರು ಸಂಚಾರ ಮಾಡಿದರೆನ್ನಲಾದ ಕೆಲ ಸ್ಥಳಗಳಲ್ಲಿಯೂ ಮಠಗಳಿದ್ದು, ಅಲ್ಲಿಯೂ ನಿತ್ಯ ಮತ್ತು ವಿಶೇಷ ದಿನಗಳಲ್ಲಿ ಪೂಜಾ ವ್ಯವಸ್ಥೆ ಇರುತ್ತದೆ.

ಕೆಲವು ಮಠಗಳಲ್ಲಿ ವಿಶೇಷ ದಿನದಂದು ಕಾರ್ಯಕ್ರಮಗಳು ನಡೆಯುತ್ತಿರುತ್ತವೆ.

- ಪಂಚಾಮೃತ ಅಭಿಷೇಕ
- ಸಹಸ್ರ ಬಿಲ್ವಾರ್ಚನೆ

- ಮಹಾ ಪ್ರಸಾದ
- ರುದ್ರಾಭಿಷೇಕ
- ಕರ್ಪೂರದಾರತಿ
- ಮಂಗಳಾರತಿ

ಹೀಗೆ ವಿವಿಧ ರೀತಿಯ ಅಭಿಷೇಕದ ಪೂಜೆಗಳು ನಡೆಯುತ್ತವೆ.

ಮುಖ್ಯವಾಗಿ ಶ್ರಾವಣಮಾಸ ಅಮವಾಸ್ಯೆ, ಹಬ್ಬ, ಉತ್ಸವ, ಜಾತ್ರೆ, ತೇರು ನಡೆಯುವಾಗ ಭಕ್ತರು ಬೇಡಿಕೆಗಳಿಗನುಸಾರವಾಗಿ ಪೂಜಾ ಕಾರ್ಯಗಳು ನಡೆಯುತ್ತವೆ. ಯಾವ ಪೂಜೆಗಳನ್ನೂ ಇಂತಿಷ್ಟೆ ಹೊತ್ತು ಮಾಡಬೇಕೆಂಬ ನಿಯಮವಿಲ್ಲ.

**ಸಿಂಧಿಗೇರಿ ಮಲ್ಲಪ್ಪ ಶರಣರು**

ಮಲ್ಲಪ್ಪನವರ ಜಾತ್ರೆಯು ಪ್ರತಿವರ್ಷ ನಡೆಯುತ್ತದೆ. ಜಾತ್ರೆಯ ನಿಮಿತ್ತ ಪುರಾಣ ಪ್ರವಚನಗಳು ನಡೆಯುತ್ತಿರುತ್ತವೆ. ಇಲ್ಲಿ ನಡೆಯುವ ಕಾರ್ಯಕ್ರಮಗಳು ಇಂತಿವೆ.

೧. ಸೋಮವಾರ ವಿಶೇಷ ಪೂಜೆ

೨. ಜಾತ್ರೆ - ಉತ್ಸವ

೩. ಪುರಾಣ ಪ್ರವಚನ

ಫಾಲ್ಗುಣ ಶುದ್ಧ ದಶಮಿಯಂದು ರಥೋತ್ಸವ. ಆ ನಿಮಿತ್ತ ಸೋಮವಾರ ಹದಿನೈದು ದಿನಗಳ ಮೊದಲು ನಿತ್ಯ ಸಾಯಂಕಾಲ ಪುರಾಣ ಪ್ರವಚನ ನಡೆಯುತ್ತದೆ. ರಥೋತ್ಸವದ ಮಾರನೆಯ ದಿನ ವಗ್ಗರ ಆಟವಿರುತ್ತದೆ. ಈ ಆಟದಲ್ಲಿ ಕುದುರೆಕಾರಣ ಭಾಗವಹಿಸುವುದು ವಿಶೇಷವಾಗಿರುತ್ತದೆ.

ಇದೇ ದಿನದಂದು ಮರುಸಮಾಧಿ ಹೊಂದಿದ ಬೈಲೂರು ಮಠದಲ್ಲಿಯೂ ರಥೋತ್ಸವ ನಡೆಯುತ್ತದೆ. ಉತ್ಸವದ ಪ್ರಯುಕ್ತ ಸತತವಾಗಿ ಹನ್ನೆರಡು ದಿನ ಸಾಯಂಕಾಲ ಪುರಾಣ ಪ್ರವಚನವಿರುತ್ತದೆ. ಪುರಾಣದ ಕೊನೆಯ ದಿನ ರಾತ್ರಿ ಭಜನೆ ಕಾರ್ಯಕ್ರಮವಿದ್ದು, ಮೂರನೆಯ ದಿನ ತಾತನವರ ಉತ್ಸವ ನಡೆಯುತ್ತದೆ. ಈ ಉತ್ಸವದಲ್ಲಿ ಭಕ್ತಜನರ ಗುಂಪು ಅಧಿಕ ಸಂಖ್ಯೆಯಲ್ಲಿರುತ್ತದೆ. ಎಲ್ಲಾ ಭಕ್ತರು ಆನಂದದಿಂದ ಬಂದು ಪಾಲ್ಗೊಂಡು ಉತ್ಸವವನ್ನು ನಡೆಸುತ್ತಾರೆ. ತಮ್ಮ ಹರಕೆಗಳನ್ನು ಕೂಡ ತೀರಿಸುತ್ತಾರೆ.

**ಕಾನಾಮಡುಗು ಶರಣಪ್ಪ**

ಇಲ್ಲಿ ಪ್ರತಿವರ್ಷ ಕಾರ್ತಿಕ ಶುದ್ಧ ದಶಮಿಯಂದು ಶರಣಪ್ಪನವರ ರಥೋತ್ಸವ ನಡೆಯುತ್ತದೆ. ಅಂದು ಮಠದಲ್ಲಿ ಪುರಾಣ ಪ್ರವಚನ, ಕೀರ್ತನೆ ನಡೆಯುತ್ತವೆ. ಅಂದು ನಡೆಯುವ ಕಾರ್ಯಕ್ರಮಗಳು ಹೀಗಿವೆ.

೧. ನವಮಿಯಂದು ಕಾರ್ತಿಕ ಪೂಜೆ

೨. ದಶಮಿಯಂದು ರಥೋತ್ಸವ

೩. ಸ್ವಾಮಿಯ ಮುಖವಾಡವನ್ನು ಪಲ್ಲಕಿಯಲ್ಲಿರಿಸಿ ಊರಿನ ತುಂಬೆಲ್ಲಾ ಮೆರವಣಿಗೆಯನ್ನು ಮಾಡುತ್ತಾರೆ.

೪. ರಾತ್ರಿಯಲ್ಲಿ ಅವರಿಗೆ ವಿಶೇಷವಾಗಿ ಉಯ್ಯಾಲೆ ಪೂಜೆಯನ್ನು ಮಾಡಿ ಮಹಾಮಂಗಳಾರತಿ ಮಾಡಿ ಮಂಗಳಾರತಿ ಪದವನ್ನು ಹಾಡಿ ಸ್ವಾಮಿಯ ಪೂಜೆಯನ್ನು ಭಕ್ತರೆಲ್ಲರೂ ಸೇರಿ ನೆರವೇರಿಸುತ್ತಾರೆ.

**ಜಾತ್ರೆಯ ವಿಶೇಷತೆ**

ವಿಜಯದಶಮಿಯ ಹಬ್ಬದಲ್ಲಿ ಜಾತ್ರೆ ನಡೆಯುತ್ತದೆ. ಮೂರು ದಿನಗಳ ಕಾಲ ವಿಜೃಂಭಣೆಯಿಂದ ಜಾತ್ರೆಯನ್ನು ಮಾಡುತ್ತಾರೆ. ಕಾನಾಮಡುಗು, ಕೂಡ್ಲಿಗಿ ಮತ್ತು ಸುತ್ತಲೂ ಊರುಗಳಿಂದ ಭಕ್ತರು ಬರುತ್ತಾರೆ. ಬಂದಿರುವ ಭಕ್ತರಿಗೆಲ್ಲ ಅನ್ನ ದಾಸೋಹವನ್ನು ಏರ್ಪಡಿಸಿರುತ್ತಾರೆ. ಅಧಿಕ ಸಂಖ್ಯೆಯಲ್ಲಿ ಜನರು ಬಂದು ಶರಣಪ್ಪನವರ ರಥೋತ್ಸವವನ್ನು ನೆರವೇರಿಸುತ್ತಾರೆ. ಭಕ್ತರು ಬೇಡಿಕೊಂಡ ಪ್ರಾರ್ಥನೆ ನೆರವೇರಿರುವವರು ಅಂದು ಹರಕೆಯನ್ನು ತೀರಿಸುತ್ತಾರೆ. ಜಾತ್ರೆಯ ದಿನದಂದು ತಮ್ಮ ಬೇಡಿಕೆಯನ್ನು ನೆರವೇರಿಸಿಕೊಳ್ಳುತ್ತಾರೆ.

ಶ್ರಾವಣ ಮಾಸದಲ್ಲಿಯೂ ಕೂಡ ಪ್ರತಿವರ್ಷ ಶ್ರಾವಣ ಮಾಸದ ದಿನಗಳಲ್ಲಿ ಶರಣಪ್ಪನವರ ಪಲ್ಲಕಿ ಉತ್ಸವವನ್ನು ನಡೆಸುತ್ತಾರೆ. ಸ್ವಾಮಿಯನ್ನು ಪಲ್ಲಕಿಯಲ್ಲಿ ಕೂಡಿಸಿಕೊಂಡು ಊರೆಲ್ಲ ಮೆರವಣಿಗೆಯನ್ನು ಮಾಡುತ್ತಾರೆ. ಭಕ್ತರೆಲ್ಲರು ಸೇರಿ ಈ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ.

ಪ್ರತಿವರ್ಷ ಯುಗಾದಿಯ ಪಾಡ್ಯಮಿಯ ದಿನದಲ್ಲಿ ಶರಣಪ್ಪನವರ ಪಲ್ಲಕ್ಕಿ ಉತ್ಸವವನ್ನು ನೆರವೇರಿಸುತ್ತಾರೆ. ಪಲ್ಲಕ್ಕಿ ಮೆರವಣಿಗೆ ಮಾಡಿಕೊಂಡು ಹೋಗುವಾಗ ಊರ ಜನರೆಲ್ಲ ಮನೆಯಿಂದ ಹೊರಗೆ ಬಂದು ಪಲ್ಲಕ್ಕಿಗೆ ನಮಸ್ಕರಿಸಿ ದರ್ಶನ ಪಡೆದು ಪುನೀತರಾಗುತ್ತಾರೆ. ಕೆಲ ಭಕ್ತರು ಪಲ್ಲಕ್ಕಿಯೊಂದಿಗೆ ಮೆರವಣಿಗೆಯಲ್ಲಿ ಪಾಲ್ಗೊಂಡು ಧನ್ಯರಾಗುತ್ತಾರೆ.

ಸ್ವಾಮಿಯವರ ಉತ್ಸವವು ವರ್ಷದಲ್ಲಿ ಮೂರು ಬಾರಿ ನಡೆಯುತ್ತದೆ. ವಿಜಯದಶಮಿಯಲ್ಲಿ ರಥೋತ್ಸವ ಮತ್ತು ಶ್ರಾವಣ ಮಾಸ ಹಾಗು ಯುಗಾದಿಯಲ್ಲಿ ಪಲ್ಲಕ್ಕಿ ಉತ್ಸವಗಳು ನಡೆಯುತ್ತವೆ. ಪ್ರತಿ ದಿನ ಶರಣಪ್ಪನವರಿಗೆ ಪೂಜಾಕಾರ್ಯ ನಡೆಯುತ್ತಿದ್ದು, ಪ್ರತಿ ಸೋಮವಾರ ಇಲ್ಲಿ ವಿಶೇಷವಾಗಿರುತ್ತದೆ. ಪೂಜಾ ಕಾರ್ಯಕ್ರಮ ವಿಜೃಂಭಣೆಯಿಂದ ನಡೆಯುತ್ತದೆ. ಅಂದು ಭಕ್ತ ಜನರು ಅಧಿಕ ಸಂಖ್ಯೆಯಲ್ಲಿ ಸೇರಿರುತ್ತಾರೆ.

**ಗದ್ದಿಕೆರೆ ದೊಡ್ಡಬಸಪ್ಪ**

ಇಲ್ಲಿ ಪ್ರತಿದಿನ ಪೂಜೆಯನ್ನು ಮಾಡುತ್ತಾ ಭಕ್ತರು ಬಂದು ಹೋಗುವುದನ್ನು ಗಮನಿಸಬಹುದು. ಪ್ರತಿ ಭಾನುವಾರ ಸಂಜೆ ವಿಶೇಷ ಪೂಜೆಯನ್ನು ಮಾಡುತ್ತಾ ಹಾಡನ್ನು ಹಾಡುತ್ತಾರೆ.

೧. ಪಲ್ಲಕ್ಕಿ ಉತ್ಸವ

೨. ಪ್ರತಿ ಸೋಮವಾರ ವಿಶೇಷ ಪೂಜೆ

೩. ತಿಂಗಳಿಗೊಮ್ಮೆ ಅಮಾವಾಸ್ಯೆಯ ಪಲ್ಲಕಿ ಉತ್ಸವ

೪. ಶ್ರಾವಣಮಾಸದಲ್ಲಿ ಅಭಿಷೇಕ ಪೂಜೆ - ಇಲ್ಲಿ ನಡೆಯುವ ಪೂಜೆಗಳು.

**ಜಾತ್ರೆಯ ವಿಶೇಷತೆ**

ಇಲ್ಲಿ ಪ್ರತಿವರ್ಷ ಜಾತ್ರೆ ನಡೆಯುತ್ತದೆ. ಜಾತ್ರೆಯು ಪ್ರತಿವರ್ಷ ಶಿವರಾತ್ರಿ ಜಾಗರಣೆಯ ಮರುದಿನ ಜಾತ್ರೆ ನಡೆಯುತ್ತದೆ. ಶಿವರಾತ್ರಿಯಾದ ಮೂರನೆಯ ದಿನ ರಥೋತ್ಸವ ಕಾರ್ಯಕ್ರಮವನ್ನು ನಡೆಸುತ್ತಾರೆ. ಜಾತ್ರೆಯಲ್ಲಿ ಸುತ್ತಮುತ್ತಲಿನ ಜನರೆಲ್ಲ ಬಂದು ಸೇರುತ್ತಾರೆ. ನಂದಿಪುರ, ಹಗರಿಬೊಮ್ಮನಹಳ್ಳಿ, ಹೊಸಪೇಟೆ ಹೀಗೆ ಹಲವಾರು ಕಡೆಯಿಂದ ಭಕ್ತಜನರು ಬಂದು ರಥೋತ್ಸವದ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಾರೆ. ಈ ಜಾತ್ರೆಗೆ ಬಂದ ಭಕ್ತರು ತಮ್ಮ ಇಷ್ಟಾರ್ಥ ಸಿದ್ಧಿಯನ್ನು ಪಡೆದುಕೊಂಡವರು ತಮ್ಮ ಹರಕೆಯನ್ನು ತೀರಿಸುತ್ತಾರೆ. ಆ ಜಾತ್ರೆಯಲ್ಲಿ ನಡೆಯುವ ವಿಶೇಷತೆಯೆಂದರೆ ಧ್ವಜ ಮಾರಾಟವನ್ನು ಮಾಡುತ್ತಾರೆ. ಆ ಧ್ವಜವನ್ನು ಸವಾಲಿನಲ್ಲಿ ಮಾರಾಟ ಮಾಡುತ್ತಾರೆ. ಅದರಿಂದ ಬಂದ ಹಣದಿಂದ ದೇವಸ್ಥಾನದ ಜೀರ್ಣೋದ್ಧಾರ ಮಾಡುತ್ತಾರೆ ಮತ್ತು ಮಠದ ಇತರ ಕಾರ್ಯಕ್ರಮಗಳ ಅಭಿವೃದ್ಧಿಗಾಗಿ ಬಳಕೆ ಮಾಡುತ್ತಾರೆ. ಜಾತ್ರೆಯ ದಿನ ಮಹಾರುದ್ರಾಭಿಷೇಕ ಪೂಜೆಯನ್ನು ಮಾಡುತ್ತಾರೆ. ಅಂದು ಜಾತ್ರೆಗೆ ಬಂದಿರುವ ಭಕ್ತರು ಕಾಣಿಕೆಗಳನ್ನು ಸಲ್ಲಿಸುತ್ತಾರೆ.

ಶ್ರಾವಣಮಾಸದಲ್ಲಿ ಒಂದು ತಿಂಗಳು ಪೂಜೆಯ ಕಾರ್ಯಕ್ರಮ ವಿಶೇಷತೆಯಿಂದ ಕೂಡಿರುತ್ತದೆ. ಭಕ್ತರು ತಾವು ಬೇಡಿದ ಹರಕೆ ನೆರವೇರಿದ ನಂತರ ಅವರು ತೀರಿಸುತ್ತಾರೆ. ಶ್ರಾವಣಮಾಸದಲ್ಲಿ ವಿಶೇಷ ಪೂಜೆಯನ್ನು ಮಾಡಿಸುವ ಹರಕೆಯಿದ್ದರೆ ಅಂಥವರು ಶ್ರಾವಣಮಾಸದಲ್ಲಿ ಬಂದು ವಿಶೇಷವಾದ ಅಭಿಷೇಕವನ್ನು ಮಾಡಿಸುತ್ತಾರೆ. ನಿತ್ಯ ಪ್ರಸಾದವಿರುತ್ತದೆ.

ಪ್ರತಿ ಅಮಾವಾಸ್ಯೆಯಂದು ತಿಂಗಳ ಇಲ್ಲಿ ಪಲ್ಲಕ್ಕಿ ಉತ್ಸವವನ್ನು ನಡೆಸುತ್ತಾರೆ. ಊರಿನಲ್ಲಿ ಶರಣರ ಮುಖವಿರುವ ಮುಖವಾಡವನ್ನಿಟ್ಟು ಪಲ್ಲಕ್ಕಿಯನ್ನು ಹೊತ್ತು ಮೆರವಣಿಗೆಯನ್ನು ಮಾಡುತ್ತಾರೆ. ಬಂದಿರುವ ಭಕ್ತಾದಿಗಳಿಗೆ ಸಿಹಿ ಪಾಯಸವನ್ನು ಹಂಚುತ್ತಾರೆ.

ಪ್ರತಿ ಸೋಮವಾರ ವಿಶೇಷ ಪೂಜೆಯಿರುತ್ತದೆ. ಇಲ್ಲಿ ಊರಿನಲ್ಲಿ ಯಾರದೇ ಮನೆಯಲ್ಲಿ ಶುಭಕಾರ್ಯ ನಡೆದರೆ ಈ ಸೋಮವಾರದಂದು ಬಂದು ಪೂಜೆಯನ್ನು ಮಾಡಿಸುತ್ತಾರೆ.

ಭಕ್ತರು ಅಧಿಕ ಸಂಖ್ಯೆಯಲ್ಲಿ ಬಂದು ಭಗವಂತನ ದರ್ಶನವನ್ನು ಮಾಡುತ್ತಾರೆ. ಗದ್ದಿಕೆರೆ ದೊಡ್ಡಬಸಪ್ಪನ ಅನುಗ್ರಹದಿಂದ ಎಷ್ಟೋ ಜನರು ಒಳಿತನ್ನು ಕಂಡವರಿದ್ದಾರೆ - ಕಂಡುಕೊಳ್ಳುತ್ತಿದ್ದಾರೆ. ದಿನದಿಂದ ದಿನಕ್ಕೆ ಇಲ್ಲಿ ಭಕ್ತರ ಸಂಖ್ಯೆ ಬೆಳೆಯುತ್ತಲಿದೆ. ಮಠದ ಕಾರ್ಯಕ್ರಮಗಳು ಅಭಿವೃದ್ಧಿಯಾಗುತ್ತಲಿವೆ.

**ಬಳ್ಳಾರಿ ಮರಿಸ್ವಾಮಿ**

ಇಲ್ಲಿ ಪ್ರತಿವರ್ಷ ದಶಮಿ ದಿವಸ ಪಲ್ಲಕಿ ಉತ್ಸವವನ್ನು ಮಾಡುತ್ತಾರೆ. ಪ್ರತಿ ಭಾನುವಾರ ವಿಶೇಷ ಪೂಜೆ ಇರುತ್ತದೆ.

೧. ಪಲ್ಲಕ್ಕಿ ಉತ್ಸವ

೨. ಶಿವಾನುಗೋಷ್ಠಿ

೩. ಕಾರ್ತಿಕ ಮಾಸದ ವಿಶೇಷ ಪೂಜೆ

೪. ಶ್ರಾವಣ ಮಾಸದಲ್ಲಿ ವಿಶೇಷ ಪೂಜೆ - ಇಲ್ಲಿ ನಡೆಯುವ ಕಾರ್ಯಕ್ರಮಗಳು.

ಪ್ರತಿ ವರ್ಷ ವಿಜಯದಶಮಿಯಲ್ಲಿ ದಶಮಿಯ ದಿನದಂದು ಸಂಜೆಯ ವೇಳೆಯಲ್ಲಿ ಪಲ್ಲಕ್ಕಿ ಉತ್ಸವ ನಡೆಯುತ್ತದೆ. ನವರಾತ್ರಿಯ ದಿನಗಳಲ್ಲಿ ಒಂಭತ್ತು ದಿನಗಳ ಕಾಲ ವಿಶೇಷ ಪೂಜೆಯಿದ್ದು ದಾಸೋಹ ನಡೆಯುತ್ತದೆ. ಈ ಪಲ್ಲಕ್ಕಿ ಉತ್ಸವಕ್ಕೆ ಭಕ್ತಾದಿಗಳೆಲ್ಲರೂ ಬಂದು ಪಾಲ್ಗೊಳ್ಳುತ್ತಾರೆ. ಮರಿಸ್ವಾಮಿಯವರನ್ನು ನಂಬಿ ಪೂಜಿಸಿ ಒಳಿತನ್ನು ಕಂಡವರು ಬಂದು ಭಯಭಕ್ತಿಯಿಂದ ಪೂಜಿಸಿ ತಮ್ಮ ಇಷ್ಟಾನುಸಾರ ಕಾಣಿಕೆಗಳನ್ನು ನೀಡುತ್ತಾರೆ. ತಾವು ಬೇಡಿಕೊಂಡದ್ದು ಸಿದ್ಧಿಸಿದ ನಂತರ ಬಂದು ಹರಕೆಯನ್ನು ತೀರಿಸುತ್ತಾರೆ. ಪಲ್ಲಕ್ಕಿ ಉತ್ಸವದಲ್ಲಿ ಬಳ್ಳಾರಿಯ ಸುತ್ತ ಮುತ್ತಲೂರಿನ ಜನರೆಲ್ಲ ಬಂದು ಪಾಲ್ಗೊಂಡು ಸಂಭ್ರಮದಿಂದ ಪಲ್ಲಕ್ಕಿ ಉತ್ಸವವನ್ನು ನಡೆಸುತ್ತಾರೆ.

ಶ್ರಾವಣ ಮಾಸದಲ್ಲಿ ಪೂಜೆಯು ಒಂದು ತಿಂಗಳು ಪೂರ್ತಿ ನಡೆಯುತ್ತದೆ. ಈ ಪೂಜೆಯು ವಿಶೇಷತೆಯಿಂದ ಕೂಡಿರುತ್ತದೆ. ಬಿಲ್ವಾರ್ಚನೆಯ ಪೂಜೆ, ಅಭಿಷೇಕದ ಪೂಜೆ ಹೆಚ್ಚಾಗಿ ನಡೆಯುತ್ತದೆ. ಶ್ರಾವಣ ಮಾಸದಲ್ಲಿ ಪ್ರತಿದಿನ ನಡೆಯುವ ಪೂಜೆಯಲ್ಲಿ ಸೋಮವಾರ ತುಂಬಾ ವಿಶೇಷತೆಯಿಂದ ಕೂಡಿರುತ್ತದೆ. ಶ್ರಾವಣ ಮಾಸದ ಪೂಜೆಯಿಂದ ಒಳಿತನ್ನ ಕಂಡಿರುವವರು ತಪ್ಪದೆ ಪೂಜಿಸುತ್ತಾರೆ.

ಕಾರ್ತಿಕ ಮಾಸದಲ್ಲಿ ಪೂರ್ತಿ ಒಂದು ತಿಂಗಳು ಪೂಜೆ ಇರುತ್ತದೆ. ಕಾರ್ತಿಕ ಮಾಸದಲ್ಲಿ ದೀಪಗಳನ್ನು ಹಚ್ಚಿ ಪೂಜಿಸುತ್ತಾ ಪ್ರಾರ್ಥಿಸುತ್ತಾರೆ. ಕತ್ತಲಾದ ಬಡತನದ ಬಾಳಿಗೆ ಸಿರಿತನದ ಬೆಳಕನ್ನು ಕೊಡು ಎಂದು ಪ್ರಾರ್ಥಿಸಿ ಒಳಿತನ್ನು ಕಂಡುಕೊಂಡು ತಮ್ಮ ಹರಕೆಯನ್ನು ತೀರಿಸಿದವರಿದ್ದಾರೆ. ಇಂದಿಗೂ ಪ್ರತಿ ಪೂಜೆಯಲ್ಲಿ ಪಾಲ್ಗೊಂಡು ತಮ್ಮ ಭಕ್ತಿಯನ್ನು ಗೌರವದಿಂದ ಆಚರಿಸುತ್ತಿದ್ದಾರೆ.

ಪ್ರತಿ ಭಾನುವಾರ ಈ ಮಠದಲ್ಲಿ ಶಿವಾನುಗೋಷ್ಠಿಯಂಬ ಕಾರ್ಯಕ್ರಮವನ್ನು ಇಟ್ಟುಕೊಂಡಿರುತ್ತಾರೆ. ಆ ದಿನದಂದು ಭಕ್ತರು ಶಿವಾನುಗೋಷ್ಠಿಯಲ್ಲಿ ಪಾಲ್ಗೊಳ್ಳುತ್ತಾರೆ. ಮಠಕ್ಕೆ ಬಂದ ಭಕ್ತರು ಮರಿಸ್ವಾಮಿಯವರನ್ನು ಸ್ಮರಿಸುತ್ತಾ ಪ್ರಾರ್ಥನೆಯನ್ನು ಹಿತವಚನವನ್ನು ಹಾಡುತ್ತಾರೆ.

**ಬಡೇ ಸಾಹೇಬ್ ಖಾದ್ರಿ(ಶಾ ಮುಸ್ತಫಾ ಖಾದ್ರಿ)**

ಇಲ್ಲಿ ಪ್ರತಿವರ್ಷವು ಉರುಸು ತಪ್ಪದೇ ನಡೆಯುತ್ತದೆ. ವಿಶೇಷ ಪೂಜೆ ಗುರುವಾರ ದಂದಿರುತ್ತದೆ. ಇಲ್ಲಿ ನಡೆಯುವ ಕಾರ್ಯಕ್ರಮಗಳು ಹೀಗಿವೆ :

೧. ಉರುಸು

೨. ಅಮಾವಾಸ್ಯೆ ಪೂಜೆ

೩. ಪ್ರತಿ ಗುರುವಾರ ವಿಶೇಷ ಪೂಜೆ

**ಜಾತ್ರೆಯ ವಿಶೇಷತೆ**

ಪ್ರತಿ ವರ್ಷ ಬಡೇ ಸಾಹೇಬ್ ಖಾದ್ರಿಯವರ ಜಾತ್ರೆ ನಡೆಯುತ್ತದೆ. ಜಾತ್ರೆಯು ರಜಬ್ ಮಾಸದ ಹತ್ತು, ಹನ್ನೊಂದು, ಹನ್ನೆರಡು ತಾರೀಖಿನಂದು ನಡೆಯುತ್ತದೆ. ಜಾತ್ರೆಗೆಂದು ದೂರದ ಊರುಗಳಿಂದ ಜನರು ಬರುತ್ತಾರೆ. ರಾಯಚೂರು, ಸಿಂಧನೂರು, ಗುತ್ತಿ, ಆದೋನಿ ಮುಂತಾದ ಊರುಗಳಿಂದ ಭಕ್ತ ಜನರು ಉರುಸು ಆಚರಣೆಯಲ್ಲಿ ಪಾಲ್ಗೊಳ್ಳಲು ಬರುತ್ತಾರೆ. ಈ ಉರುಸು ಮೂರು ದಿನಗಳ ಕಾಲ ನಡೆಯುತ್ತದೆ. ಮೊದಲನೆಯ ದಿನ ಗಂಧದ ಮೆರವಣಿಗೆ ಇರುತ್ತದೆ. ಭಕ್ತಾದಿಗಳೆಲ್ಲ ಸೇರಿ ಗಂಧದ ಮೆರವಣಿಗೆಯನ್ನು ಮಾಡಿಕೊಂಡು ಬಂದು ಬಡೇ ಸಾಹೇಬ್ ಖಾದ್ರಿಯವರ ಪೂಜೆಯನ್ನು ಮಾಡುತ್ತಾರೆ. ಎಲ್ಲಾ ಭಕ್ತರ ಸಮ್ಮುಖದಲ್ಲಿ ಪೂಜೆ ನೆರವೇರುತ್ತದೆ. ಎರಡನೆಯ ದಿನ ಉರುಸು ಇರುತ್ತದೆ. ಅಂದು ದೇವರಿಗೆ ಫಾತೆ ಮಾಡಿ ಓದಿಕೆ ಮಾಡಿ ಬಂದಿರುವ ಭಕ್ತರು ಕೊಟ್ಟ ಕಾಣಿಕೆಗಳನ್ನು ಬಾಬಾ ಅವರಿಗೆ ಅರ್ಪಿಸಿ ವಿಶೇಷವಾದ ಪೂಜೆಯನ್ನು ಮಾಡುತ್ತಾರೆ. ನಂತರ ಕೆಲವು ಆಚರಣೆಗಳನ್ನು ಮಾಡಲಾಗುತ್ತದೆ. ಆಚರಣೆಗಳನ್ನು ಮಾತಿನ ಕಾರ್ಯಕ್ರಮ ಮತ್ತು ನಾಥ್ ಕಾರ್ಯಕ್ರಮವಿರುತ್ತದೆ. ರಾತ್ರಿಯಲ್ಲಿ ಖವ್ವಾಲಿ ಹಾಡನ್ನು ಹಾಡುತ್ತಾರೆ. ಖವ್ವಾಲಿ ಹಾಡು ಉರುಸು ನಡೆಯುವಾಗ ಮಾತ್ರ ಹಾಡುತ್ತಾರೆ. ಮೂರನೆಯ ದಿನ ಗುರುವಿನ ಮೆರವಣಿಗೆಯನ್ನು ಮಾಡುತ್ತಾರೆ. ಅಂದು ಊಟದ ವ್ಯವಸ್ಥೆ ಇರುತ್ತದೆ. ಊಟದ ವ್ಯವಸ್ಥೆಯು ಮೊದಲನೆ ಮತ್ತು ಮೂರನೆಯ ದಿನದಂದು ಇರುತ್ತದೆ. ಭಕ್ತರು ಅಧಿಕ ಸಂಖ್ಯೆಯಲ್ಲಿ ಬಂದು ಜಾತ್ರೆಯಲ್ಲಿ ಪಾಲ್ಗೊಂಡು ದೇವರಲ್ಲಿ ಪ್ರಾರ್ಥಿಸಿಕೊಳ್ಳುತ್ತಾರೆ. ಬಂದ ಭಕ್ತರಿಗೆ ಉಳಿದುಕೊಳ್ಳಲು ವ್ಯವಸ್ಥೆಯನ್ನು ಕೂಡ ಮಾಡಿರುತ್ತಾರೆ. ಭಕ್ತರು ತಮ್ಮ ಹರಕೆಯನ್ನು ಮಾಡಿಕೊಂಡ ಬಾಬಾ ಅವರಿಂದ ಒಳಿತು ಕಂಡುಕೊಂಡವರು ಹರಕೆಯನ್ನು ತೀರಿಸುತ್ತಾರೆ.

ಪ್ರತಿ ಆಮಾವಾಸ್ಯೆಯಂದು ಅಧಿಕ ಸಂಖ್ಯೆಯಲ್ಲಿ ಜನರು ಬಂದು ಬಾಬಾ ಅವರ ವಿಶೇಷ ಪೂಜೆಯನ್ನು ನೆರವೇರಿಸುತ್ತಾರೆ. ವಿಶೇಷ ಪೂಜೆಯಲ್ಲಿ - ಆಚರಣೆಯಲ್ಲಿ ಭಾಗವಹಿಸುತ್ತಾರೆ. ಅಂದು ಭಕ್ತರಿಗೆ ಸಿಹಿಯನ್ನು ಕೊಡುತ್ತಾರೆ. ಬಂದಂಥ ಭಕ್ತರು ಅಂದು ಅಲ್ಲಿಯೇ ಉಳಿದು ಕೊಳ್ಳುತ್ತಾರೆ. ಅವರಿಗೆ ವಸತಿ ವ್ಯವಸ್ಥೆ ಇರುತ್ತದೆ. ಪ್ರತಿ ತಿಂಗಳು ಬರುವ ಅಮಾವಾಸ್ಯೆಯಂದು ಅಧಿಕ ಸಂಖ್ಯೆಯ ಭಕ್ತರು ವಿಶೇಷ ಪೂಜೆಯಲ್ಲಿ ಪಾಲ್ಗೊಳ್ಳುತ್ತ ತಮ್ಮ ಪ್ರಾರ್ಥನೆ ಮಾಡುತ್ತಾರೆ.

ವಾರದಲ್ಲಿ ಒಂದು ದಿನ ಗುರುವಾರ ವಿಶೇಷವಾಗಿ ಪೂಜೆಯನ್ನು ಮಾಡುತ್ತಾರೆ. ಅಂದು ಭಕ್ತರು ಬಾಬಾ ಅವರ ದರ್ಶನ ಪಡೆದು ತಾವು ತಂದಿರುವ ಹೂವು ಹಣ್ಣು ಸಕ್ಕರೆ

ಎಲ್ಲವನ್ನು ಬಾಬಾ ಅವರಿಗೆ ಅರ್ಪಿಸಿ ತಮ್ಮ ಕಷ್ಟ ನಿವಾರಣೆಗಾಗಿ ಪ್ರಾರ್ಥಿಸಿಕೊಳ್ಳುತ್ತಾರೆ. ಇವರ ಈ ಪ್ರಾರ್ಥನೆ ನೆರವೇರಿದ ಮೇಲೆ ಬಂದು ಹರಕೆಯನ್ನು ತೀರಿಸುತ್ತಾರೆ. ಬಾಬಾ ಅವರ ಅನುಗ್ರಹ, ಆಶೀರ್ವಾದ ಇಂದಿಗೂ ಜೀವಂತವಾಗಿ ನಡೆಯುತ್ತಿದೆ ಎನ್ನುವುದಕ್ಕೆ ಭಕ್ತರ ಸಂಖ್ಯೆಯನ್ನು ನೋಡಿದರೆ ತಿಳಿಯುತ್ತದೆ. ಭಕ್ತರು ಬಾಬಾ ಅವರಿಗೆ ವಂದಿಸಿ ಸಲಾಂ ಮಾಡುತ್ತಾರೆ. ವಂದನೆಯನ್ನು ಬಾಬಾ ಅವರಿಗೆ ಪದಗಳನ್ನು ಹಾಡುತ್ತ ಸಲ್ಲಿಸುತ್ತಾರೆ.

**ಸಾದಿಕ್ ವಲಿ ಶಾ ಖಾದ್ರಿ ತೋಲಂಗರ್**

ಲೋಲಂಗರ್ ಬಾಬಾ ಅವರ ಉರುಸು ಪ್ರತಿ ವರ್ಷವು ನಡೆಯುತ್ತದೆ. ಅದು ಜನವರಿ ತಿಂಗಳಿನಲ್ಲಿ ನಡೆಯುತ್ತದೆ. ಆ ಸಂದರ್ಭದಲ್ಲಿ ವಿಶೇಷ ಪೂಜೆಗಳು ನಡೆಯುತ್ತವೆ.

೧. ಉರುಸು

೨. ಅಮಾವಾಸ್ಯೆ ಪೂಜೆ

೩. ಪ್ರತಿ ಗುರುವಾರ ಮತ್ತು ಶುಕ್ರವಾರ ವಿಶೇಷ ಪೂಜೆ - ಇವು ಇಲ್ಲಿ ನಡೆಯುವ ಕಾರ್ಯಕ್ರಮಗಳು.

**ಜಾತ್ರೆಯ ವಿಶೇಷತೆ**

ಲೋಲಂಗರ್ ಬಾಬಾ ಅವರ ಜಾತ್ರೆಯು ಪ್ರತಿವರ್ಷ ತಪ್ಪದೇ ನಡೆಯುತ್ತದೆ. ಅಧಿಕ ಸಂಖ್ಯೆಯಲ್ಲಿ ಜನರು ಬಂದು ಸೇರುತ್ತಾರೆ. ಉರುಸ್ಸು ಪ್ರತಿವರ್ಷ ಜನವರಿ ತಿಂಗಳಿನಲ್ಲಿ ನಡೆಯುತ್ತದೆ. ಇದು ಮೂರು ದಿನಗಳ ಕಾಲ ನಡೆಯುತ್ತದೆ. ಮೊದಲನೇ ದಿನ ಗಂಧದ ಮೆರವಣಿಗೆ; ಭಕ್ತರೆಲ್ಲ ಸೇರಿ ಗಂಧದ ಮೆರವಣಿಗೆಯನ್ನು ಮಾಡುತ್ತಾ ಬಂದು ಭಕ್ತರ ಸಮ್ಮುಖದಲ್ಲಿ ಲೋಲಂಗರ್ ಬಾಬಾ ಅವರಿಗೆ ಗಂಧದ ಪೂಜೆಯನ್ನು ಸಲ್ಲಿಸುತ್ತಾರೆ: ಎರಡನೆಯ ದಿನ ಉರುಸು. ಅಂದು ಲೋಲಂಗರ್ ಬಾಬಾ ಅವರಿಗೆ ವಿಶೇಷವಾದ ಪೂಜೆಯನ್ನು ಮಾಡುತ್ತಾರೆ. ಅಂದು ಗಣ್ಯವ್ಯಕ್ತಿಗಳಿಂದ ಉರುಸಿನ ಅಂಗವಾಗಿ ಆಹ್ವಾನಿಸಿರುತ್ತಾರೆ. ಅವರು ಭಾಷಣ ಮಾಡುತ್ತಾರೆ. ನಂತರ ರಾತ್ರಿಯಲ್ಲಿ ಖವ್ವಾಲಿ ಹಾಡು ಹಾಡುತ್ತಾರೆ. ರಾತ್ರಿಯಲ್ಲಿ ಖವ್ವಾಲಿ ಪದಗಳು ರಾರಾಜಿಸುತ್ತಿರುತ್ತದೆ. ಖವ್ವಾಲಿ ಹಾಡುವವರನ್ನು ದೂರದ ಊರುಗಳಿಂದ ಕರೆಸುತ್ತಾರೆ. ಮೂರನೆಯ ದಿನ ಊಟದ ವ್ಯವಸ್ಥೆ ಇರುತ್ತದೆ.

ಪ್ರತಿ ಅಮಾವಾಸ್ಯೆಗೆ ಲೋಲಂಗರ್ ಬಾಬಾ ಅವರ ದರ್ಶನ ಪಡೆಯಲು ಅಧಿಕ ಸಂಖ್ಯೆಯಲ್ಲಿ ಜನರು ಬರುತ್ತಾರೆ. ಅಂದು ವಿಶೇಷವಾದ ಪೂಜೆ ಇರುತ್ತದೆ. ಈ ಅಮಾವಾಸ್ಯೆಯಂದು ಅವರಿಗಿರುವ ಕಷ್ಟಗಳಿಗೆ ಪರಿಹಾರ ಸಿಗುವುದೆಂದು ನಂಬುತ್ತಾರೆ. ಈ ಅಮಾವಾಸ್ಯೆಯಂದು ಭಕ್ತರ ಕಷ್ಟ ನಿವಾರಣೆಯಾಗುತ್ತದೆಂಬುದು ಭಕ್ತರ ನಂಬಿಕೆ. ಒಳಿತನ್ನು ಕಂಡ ಭಕ್ತರು ಹರಕೆಯನ್ನು ತೀರಿಸಿಕೊಳ್ಳುತ್ತಾರೆ.

ವಾರದಲ್ಲಿ ಎರಡು ದಿನ ಗುರುವಾರ ಮತ್ತು ಶುಕ್ರವಾರ ವಿಶೇಷವಾಗಿ ಪೂಜೆಯನ್ನು ಮಾಡುತ್ತಾರೆ. ಭಕ್ತರೆಲ್ಲರೂ ಬಾಬಾ ಅವರ ದರ್ಶನ ಪಡೆದು ತಾವು ತಂದಿರುವ ಹೂವು ಮತ್ತು ಹಣ್ಣುಗಳನ್ನು ಅರ್ಪಿಸಿ ವಂದಿಸುತ್ತಾರೆ. ತಮ್ಮ ಕಷ್ಟ ನಿವಾರಣೆಗಾಗಿ ಪ್ರಾರ್ಥಿಸುತ್ತಾರೆ.

**ಮಕ್ದುಂ ಜಾನಿ ಬಾಬಾ**

ಇಲ್ಲಿ ಪ್ರತಿವರ್ಷ ರಬಿಉಲ್ಲಾಕರ್‌ದಲ್ಲಿ ಉರ್ದು ತಾರೀಖಿನ ಪ್ರಕಾರ ಬಾಬಾರ ಉರುಸನ್ನು ಮಾಡುತ್ತಾರೆ.

೧. ಉರುಸು

೨. ಪ್ರತಿ ಗುರುವಾರ ವಿಶೇಷ ಪೂಜೆ - ಇಲ್ಲಿ ನಡೆಯುವ ಕಾರ್ಯಕ್ರಮಗಳು.

**ಜಾತ್ರೆಯ ವಿಶೇಷತೆ**

ಜಾತ್ರೆಯು ಉರ್ದು ತಾರೀಖಿನಂತೆ ರಬಿಉಲ್ಲಾಕರ್‌ದಲ್ಲಿ ಹದಿನಾರನೆಯ ತಾರೀಖಿನಿಂದ ಹದಿನೆಂಟನೇ ತಾರೀಖಿನವರೆಗೆ ಮೂರು ದಿನಗಳ ಕಾಲ ನಡೆಯುತ್ತದೆ.

ಮೊದಲನೆಯ ದಿನ ಗಂಧದ ಮೆರವಣಿಗೆ ಇರುತ್ತದೆ. ಭಕ್ತರೆಲ್ಲರೂ ಸೇರಿ ಗಂಧವನ್ನು ತಂದು ಬಾಬಾ ಅವರ ಪೂಜೆಯನ್ನು ಮಾಡುತ್ತಾರೆ. ಎರಡನೆ ದಿನ ಉರುಸು ಇರುತ್ತದೆ. ಉರುಸಿನ ದಿನ ಬಾಬಾ ಅವರನ್ನು ವಿಶೇಷವಾಗಿ ಪೂಜಿಸುತ್ತಾರೆ. ಅಂದು ರಾತ್ರಿ ಕುರಾನ್ ಬೋಧನೆಯನ್ನು ಮಾಡುತ್ತಾರೆ ಮತ್ತು ಖವ್ವಾಲಿ ಹಾಡುತ್ತಾರೆ. ಮೂರನೆಯ ದಿನ ಅನ್ನದಾನವನ್ನು ಏರ್ಪಡಿಸಿರುತ್ತಾರೆ.

ವಾರದ ಪ್ರತಿ ಗುರುವಾರ ವಿಶೇಷವಾದ ಪೂಜೆಯಿರುತ್ತದೆ. ಭಕ್ತರೆಲ್ಲರೂ ಬಂದು ಮಕ್ದುಂ ಜಾನಿ ಬಾಬಾ ಅವರಲ್ಲಿ ಪ್ರಾರ್ಥನೆಯನ್ನು ಮಾಡಿ ವಂದನೆಯನ್ನು ಸೂಚಿಸುತ್ತಾರೆ. ತಮ್ಮ ಬೇಡಿಕೆ ನೆರವೇರಿದವರು ಹರಕೆಯನ್ನು ತೀರಿಸುತ್ತಾರೆ. ಇಂದಿಗೂ ಪ್ರತಿ ಗುರುವಾರದಂದು ಬಾಬಾ ಅವರಲ್ಲಿಗೆ ಬಂದ ಭಕ್ತರು ಹೂವು, ಹಣ್ಣು, ಸಕ್ಕರೆ, ಹೀಗೆ ಏನಾದರೂ ತಂದು ಅರ್ಪಿಸುತ್ತಾರೆ. ಎಲ್ಲರೂ ಬಾಬಾ ಅವರಿಗೆ ಪೂಜಿಸಿ ಸಲಾಂ ಮಾಡುತ್ತಾರೆ. ಗೌರವವನ್ನು ಸೂಚಿಸುತ್ತಾರೆ.

**ಲಂಗರ್ ಶಾವಲಿ**

ಲಂಗರ್ ಶಾವಲಿಯವರ ಜಾತ್ರೆಯು ಪ್ರತಿವರ್ಷ ನಡೆಯುತ್ತದೆ. ವಾರದಲ್ಲಿ ಒಂದು ದಿನ ವಿಶೇಷ ಪೂಜೆ ಇರುತ್ತದೆ.

೧. ಉರುಸು

೨. ವಿಶೇಷ ಪೂಜೆ ಶುಕ್ರವಾರ - ಇಲ್ಲಿ ನಡೆಯುವ ಕಾರ್ಯಕ್ರಮಗಳು.

**ಜಾತ್ರೆಯ ವಿಶೇಷತೆ**

ಪ್ರತಿ ವರ್ಷ ಲಂಗರ್ ಶಾವಲಿಯವರ ಜಾತ್ರೆಯ ಉರುಸು ರಂಜಾನ್ ಹಬ್ಬವಾದ ೧೨ನೆಯ ದಿನದಂದು ನಡೆಯುತ್ತದೆ. ಈ ಜಾತ್ರೆಯು (ಉರುಸು) ಮೂರು ದಿನಗಳ ಕಾಲ ನಡೆಯುತ್ತದೆ. ಮೊದಲನೆ ದಿನ ಗಂಧದ ಮೆರವಣಿಗೆ; ಎರಡನೇ ದಿನ ಉರುಸು ನಡೆಯುತ್ತದೆ. ಅಂದು ರಾತ್ರಿ ಕುರಾನ್ ಬೋಧನೆ ಮತ್ತು ಖವ್ವಾಲಿ ಪದಗಳನ್ನು ಹಾಡುತ್ತಾರೆ. ಮೂರನೆಯ ದಿನ ಅನ್ನ ದಾನವನ್ನು ಮಾಡುತ್ತಾರೆ. ಜಾತ್ರೆಗೆಂದು ಬಂದಿರುವ ಭಕ್ತಾದಿಗಳು ಅನ್ನ ಪ್ರಸಾದವನ್ನು ಸ್ವೀಕರಿಸುತ್ತಾರೆ.

ಪ್ರತಿ ಶುಕ್ರವಾರ ಬಾಬಾ ಅವರಿಗೆ ವಿಶೇಷವಾದ ಪೂಜೆಯನ್ನು ಮಾಡುತ್ತಾರೆ. ಬಂದ ಭಕ್ತರು ಬಾಬಾ ಅವರಲ್ಲಿ ಪ್ರಾರ್ಥನೆಯನ್ನು ಮಾಡಿ ಅವರಿಗೆ ಸಲಾಂ ಮಾಡುತ್ತಾರೆ. ಅವರಿಗೆ ಗೌರವ ಸೂಚಿಸಲು ಹಲವು ಪದಗಳನ್ನು ಹಾಡುತ್ತಾರೆ. ಬಾಬಾ ಅವರಿಂದ ಒಳಿತನ್ನು ಕಂಡವರು ಹರಕೆಯನ್ನು ತೀರಿಸುತ್ತಾರೆ.

**ಸೂಫಿ ಅಹಮದ್ ಶಾ ಖಾದ್ರಿ (ಮೀರ್ ಆಲಂ ನವಾಜ್)**

ಈ ದರ್ಗಾದಲ್ಲಿ ಬಾಬಾ ಅವರ ಉರುಸನ್ನು ಪ್ರತಿವರ್ಷ ರಂಜಾನ್ ಹಬ್ಬವಾದ ಎಂಟನೇ ದಿನಕ್ಕೆ ನಡೆಸುತ್ತಾರೆ. ಪ್ರತಿ ದಿನ ಭಕ್ತರು ಬಂದು ಬಾಬಾ ಅವರ ದರ್ಶನ ಪಡೆದುಕೊಳ್ಳುತ್ತಾರೆ. ತಿಂಗಳಿಗೊಮ್ಮೆ ವಿಶೇಷ ಪೂಜೆಯಿರುತ್ತದೆ.

೧. ಉರುಸು

೨. ಪ್ರತಿ ತಿಂಗಳು ಉರ್ದು ದಿನಾಂಕದಂತೆ ಒಂಭತ್ತನೇ ತಾರೀಖು ವಿಶೇಷ ಪೂಜೆ

೩. ಪ್ರತಿ ಬುಧವಾರ ವಿಶೇಷವಾದ ಪೂಜೆ - ಇವು ಇಲ್ಲಿ ನಡೆಯುವ ಕಾರ್ಯಕ್ರಮಗಳು.

**ಉರುಸಿನ ವಿಶೇಷತೆ:**

ಪ್ರತಿ ವರ್ಷ ರಂಜಾನ್ ಹಬ್ಬವಾದ ಎಂಟು ದಿವಸಕ್ಕೆ ಉರುಸು ನಡೆಯುತ್ತದೆ. ಇದು ಮೂರು ದಿನಗಳ ಕಾಲ ನಡೆಯುತ್ತದೆ. ಈ ಮೂರು ದಿನಗಳ ಉರುಸಿನಲ್ಲಿ ಮೊದಲನೆ ದಿನ ಗಂಧವನ್ನು ಮೆರವಣಿಗೆಯ ಮೂಲಕ ಹೊತ್ತು ತಂದು ಬಾಬಾ ಅವರನ್ನು ಪೂಜಿಸುತ್ತಾರೆ. ಎರಡನೆಯ ದಿನ ಉರುಸು (ಜಾತ್ರೆ) ನಡೆಯುತ್ತದೆ. ಅಂದಿನ ದಿನ ಅವರು ಗಣ್ಯವ್ಯಕ್ತಿಗಳನ್ನು ಅಂದು ಅಹ್ವಾನಿಸಿರುತ್ತಾರೆ. ಅವರು ಅಂದು ಉರುಸಿನ ಗುಣಗಾನ ಮಾಡುತ್ತ ಬಾಬಾ ಅವರನ್ನು ಕುರಿತು ಹೇಳುತ್ತಾ ಭಾಷಣವನ್ನು ಮಾಡುತ್ತಾರೆ. ಅಂದು ರಾತ್ರಿ ಖವ್ವಾಲಿ ಹಾಡುಗಳನ್ನು ಹಾಡುತ್ತಾರೆ. ರಾತ್ರಿಯಿಡೀ ಬರೀ ಖವ್ವಾಲಿಯ ಹಾಡುಗಳದೇ ದರ್ಬಾರು ನಡೆಯುತ್ತದೆ. ಮೂರನೆಯ ದಿನ ಅನ್ನದಾನವಿರುತ್ತದೆ. ಈ ಜಾತ್ರೆಯಲ್ಲಿ ಎಲ್ಲಾ ಧರ್ಮದವರು ಪಾಲ್ಗೊಂಡಿರುತ್ತಾರೆ. ಯಾವುದೇ ನಿರ್ಬಂಧವಿರುವುದಿಲ್ಲ. ಎಲ್ಲಾ ಧರ್ಮದವರು ಬಾಬಾ ಅವರನ್ನು ಆರಾಧಿಸುತ್ತಾರೆ.

ಪ್ರತಿ ತಿಂಗಳು ಉರ್ದು ತಾರೀಖಿನಂತೆ ಒಂಭತ್ತನೆಯ ದಿನ ಒಂದು ವಿಶೇಷವಾದ ಪೂಜೆ ನಡೆಯುತ್ತದೆ. ಅದನ್ನು 'ಸಣ್ಣ ಜಾತ್ರೆ' ಎಂದೇ ಹೇಳಬಹುದಾಗಿದೆ. ಈ ದಿನದಂದು ವಿಶೇಷವಾದ ಪೂಜೆಯನ್ನು ಮಾಡಿ ಬಂದಿರುವ ಭಕ್ತರಿಗೆ ಊಟವನ್ನು ಹಾಕುತ್ತಾರೆ. ಭಕ್ತರು ತಮ್ಮ ಹರಕೆಯನ್ನು ತೀರಿಸುತ್ತಾರೆ.

ಪ್ರತಿ ಬುಧವಾರ ವಿಶೇಷವಾದ ಪೂಜೆ ನಡೆಯುತ್ತದೆ. ಅಂದು ಭಕ್ತರೆಲ್ಲರೂ ಬಾಬಾ ಅವರ ವಿಶೇಷ ಪೂಜೆಯಲ್ಲಿ ಪಾಲ್ಗೊಂಡು ವಂದಿಸುತ್ತಾರೆ. ಭಕ್ತರು ಹೂವು, ಹಣ್ಣು, ಸಿಹಿಯನ್ನು ತಂದು ಕೊಡುತ್ತಾರೆ. ಅದನ್ನೆಲ್ಲ ಇಟ್ಟು ಪೂಜೆ ಮಾಡುತ್ತಾರೆ. ಪೂಜೆಯಲ್ಲಿ ಭಕ್ತರು ಬಾಬಾ ಅವರಿಗೆ ವಂದನೆಯನ್ನು ಸಲ್ಲಿಸುತ್ತಾರೆ. ಆ ವಿಶೇಷ ಪೂಜೆಯಲ್ಲಿ ಭಕ್ತರೆಲ್ಲರೂ ಬಾಬಾ ಅವರಿಗೆ ಸಲಾಂ ಪದವನ್ನು ಹಾಡುತ್ತಾರೆ.

**೬.೨. ಜಾತ್ರೆ - ಉತ್ಸವಗಳು**

ಪ್ರಪಂಚದ ಎಲ್ಲ ದೇಶಗಳಲ್ಲಿ ಎಲ್ಲ ಧರ್ಮ ಮತ್ತು ಜನಾಂಗದವರಲ್ಲಿಯೂ ಜಾತ್ರೆ ಉತ್ಸವಗಳು ನಡೆದುಕೊಂಡು ಬರುತ್ತಿವೆ. ಆಯಾಯ ಪ್ರದೇಶಗಳಲ್ಲಿರುವ ತಮ್ಮದೇ ವೈಶಿಷ್ಟ್ಯತೆಯ ಸಂಪ್ರದಾಯದಿಂದ ಕೂಡಿದ ಊಟ, ಉಡುಗೆ - ತೊಡುಗೆ, ಆಚಾರ - ವಿಚಾರಗಳಿಂದ ಕೂಡಿರುವ ಈ ಜಾತ್ರೆ - ಉತ್ಸವಗಳು ನಡೆಯುವುದು ಸುಗ್ಗಿಯ ಕಾಲ ಮತ್ತು ಮಳೆಗಾಲ ಇವುಗಳನ್ನು ಹೊರತುಪಡಿಸಿ, ಜನರ ಬಿಡುವಿನ ಸಮಯದಲ್ಲಿ ನಡೆಯುತ್ತಿರುತ್ತವೆ. ಈ ಜಾತ್ರೆ - ಉತ್ಸವಗಳಲ್ಲಿ ಎಲ್ಲ ವರ್ಗದ ಜನರು ಜಾತಿ, ಮತಗಳ, ಧರ್ಮಗಳ ತಾರತಮ್ಯ ತೋರದೆ ಒಂದಾಗಿ ಪಾಲ್ಗೊಂಡು ನಡೆಸಿಕೊಡುತ್ತಾರೆ. ಇವರು ಪಾಲ್ಗೊಳ್ಳುವ ಈ ಜಾತ್ರೆಗಳು ದೈವಸಂಭೂತರೆಂದು ಪೂಜಿಸಿಕೊಳ್ಳುತ್ತಿರುವ ಮಹಾತ್ಮರು ತಂದುಕೊಟ್ಟಿರುವ ಸಂಸ್ಕೃತಿ ಮತ್ತು ಸಾಂಸ್ಕೃತಿಕ ಹಿರಿಮೆಗಳನ್ನು ತೋರಿಸುತ್ತವೆ. ಈ ಜಾತ್ರೆಗಳು ಕುಟುಂಬದವರೆಲ್ಲ ಸೇರಿ ಮತ್ತು ಒಂದೂರಿಂದ ಮತ್ತೊಂದು ಊರಿನ ಜನರೊಂದಿಗೆ ಬೆರೆತು ಧರ್ಮ, ಮತಗಳ ಭೇದಭಾವವನ್ನು ಮರೆತು ಭಾವೈಕ್ಯತೆಯ ಬೆಸುಗೆಯನ್ನು ಬೆಸಯುವಲ್ಲಿ ಸಹಕಾರಿಯಾಗಿವೆ. ಸೌಹಾರ್ದತೆಯನ್ನು ಬೆಳೆಸಿಕೊಂಡು ವಿಶಾಲವಾದ ಮನೋಭಾವನೆಯಲ್ಲಿ ಧರ್ಮ. ಜಾತಿ ಮತಗಳ ಸಮನ್ವಯ ಸಾರಲು ಜಾತ್ರೆಗಳು ಸಹಕಾರಿಯಾಗಿವೆ. ಜಾತಿಗಳು ಧರ್ಮಗಳ ಮಧ್ಯೆ, ಜಾತಿಗಳ ಮಧ್ಯೆ ಬಾಂಧವ್ಯವನ್ನು ಬೆಳೆಸುತ್ತವೆ.

ದೇವಮಾನವರಾಗಿ, ದೈವಾಂಶಸಂಭೂತರಾಗಿ, ಆಧ್ಯಾತ್ಮ ಜೀವಿಗಳಾಗಿ ಜೀವಿಸಿದ ಮಹಾಪುರುಷರು ಕಣ್ಮರೆಯಾಗಿರುವ ದಿನವನ್ನು ಪುಣ್ಯತಿಥಿಗಳನ್ನಾಗಿ ಆಚರಿಸುತ್ತಾರೆ. ಆ ದಿನದಂದು ಅವರ ನೆನಪಿಗಾಗಿಯೇ ಈ ಜಾತ್ರೆ–ಉತ್ಸವಗಳನ್ನು ನಡೆಸುತ್ತಾರೆ. ಶರಣರು, ಸಂತರು, ಸೂಫಿಗಳು ಮುಂತಾದ ಅನುಭಾವಿಗಳು ಜನಸಾಮಾನ್ಯರಿಗೆ ಮತ್ತು ಸಮಾಜಕ್ಕೆ ಕಷ್ಟ ನಿವಾರಣೆಯನ್ನು ಮಾಡಿ ಪ್ರಾರ್ಥನೆಯನ್ನು ಪೂರೈಸಿದ ಜನಸಾಮಾನ್ಯರು ಬೇಡಿದ ವರವನ್ನು ನೀಡಿದ ಅವರ ಸಮಸ್ಯೆಗಳಿಗೆ ಸ್ಪಂದಿಸಿ ಪರಿಹಾರವನ್ನು ಕೊಟ್ಟ ಅನುಭಾವಿಗಳ ದೈವಾಂಶಸಂಭೂತರ ಮೇಲೆ ಭಕ್ತರು ಇಟ್ಟಿರುವ ನಂಬಿಕೆ ಮತ್ತು ಸಂತಸದ ಗಾಢವಾದ ಸಂಬಂಧವೇ ಜಾತ್ರೆ - ಉತ್ಸವ.

ಜಾತ್ರೆ ಮತ್ತು ಉತ್ಸವಗಳೆಂದಾಗ ಜನಸಾಮಾನ್ಯರಿಗೆ ಹಬ್ಬದೂಟ; ಸಂತೋಷದಿಂದ ನೆಂಟರೊಂದಿಗೆ ಓಡಾಡುವ ದಿನವೆಂದೇ ಭಾವಿಸುವರು. ಸಂದರ್ಭ ಕೂಡ ಹಾಗೆಯೇ ಇರುತ್ತದೆ. ಒಂದು ಸಮಾಜ ಮತ್ತು ಜನರು ವಾಸಿಸುವಲ್ಲಿ ಒಬ್ಬ ಮಹಾಪುರುಷ ದೈವಾಂಶಸಂಭೂತ ಇದ್ದೇ ಇರುತ್ತಾನೆ. ಈ ಸಮಾಜದ ಜನರು ತಮ್ಮ ಕಷ್ಟ ನಿವಾರಣೆಯನ್ನು ಅವನಿಂದ ಮಾಡಿಸಿಕೊಂಡು ಸಮಾಜದಲ್ಲಿ ಸಂತಸದಿಂದ ಬಾಳುವಾಗ ಅದು ಈ ದೇವಮಾನವನಿಂದ ಸಿಕ್ಕ ಫಲವೆಂದು ನಂಬುತ್ತಾರೆ. ಇಂಥ ದೈವಾಂಶಸಂಭೂತರಿಗೆ ಗೌರವ ಸೂಚಿಸುವುದು ಜನಸಾಮಾನ್ಯರ ಕರ್ತವ್ಯ. ಜಾತ್ರೆ - ಉತ್ಸವಗಳ ಮೂಲಕ ಗೌರವವನ್ನು, ಭಕ್ತಿಯನ್ನು ಸಮರ್ಪಿಸುತ್ತಾರೆ. ಆ ದೈವಾಂಶಸಂಭೂತರು ದೈವಾದೀನರಾದ ದಿನದಂದು ಜಾತ್ರೆ–ಉತ್ಸವಗಳನ್ನು ಮಾಡಿದಾಗ ಈ ದೇವಮಾನವರಾಗಿ ಬಾಳಿದ ಈ ಮಹಾತ್ಮರಿಗೂ ತೃಪ್ತಿ ಸಿಗುತ್ತದೆ. ಭಕ್ತರಿಗೂ ಅನುಗ್ರಹ ಆಶೀರ್ವಾದ ಲಭಿಸುತ್ತದೆ ಎಂಬ ನಂಬಿಕೆಯಿದೆ.

ಅನುಭಾವಿಗಳು ಜೀವಸಮಾಧಿಯಾದ ಅಥವಾ ಲಿಂಗೈಕ್ಯರಾದ ದಿನದಂದು ಜಾತ್ರೆ, ಉತ್ಸವ, ಉರುಸುಗಳು ನಡೆಯುತ್ತವೆ. ಈ ಜಾತ್ರೆ, ಉತ್ಸವ, ಉರುಸುಗಳಲ್ಲಿ ಎಲ್ಲ ಧರ್ಮ - ಜಾತಿಭೇದವೆನ್ನದೆ ಭಕ್ತರೆಲ್ಲರೂ ಪಾಲ್ಗೊಳ್ಳುತ್ತಾರೆ. ಆದರೆ ದೇವ - ದೇವಿಯರ ಗುಡಿ - ದೇವಾಲಯಗಳಲ್ಲಿ ಪ್ರತಿವರ್ಷ ನಿಗದಿಪಡಿಸಿದ ದಿನದಲ್ಲಿ ಜಾತ್ರೆಗಳು - ಉತ್ಸವಗಳು ಜರುಗುತ್ತವೆ. ಆ ದೇವ - ದೇವಿಯರ ಭಕ್ತರು ಮಾತ್ರ ಭಾಗವಹಿಸುತ್ತಾರೆ. ಅನುಭಾವಿಗಳು ಇಡೀ ಸಮಾಜಕ್ಕೆ ಒಳಿತನ್ನುಂಟು ಮಾಡಿರುವುದರಿಂದ ಜಾತಿ - ಧರ್ಮಗಳ ಸಮನ್ವಯತೆಯನ್ನು ಕಾಣಬಹುದು. ಈ ರೀತಿಯ ಜಾತಿ - ಧರ್ಮಗಳ ಸಮನ್ವಯತೆಯನ್ನು ದೇವಾಲಯಗಳ ಉತ್ಸವ - ಜಾತ್ರೆಗಳಲ್ಲಿ ಕಾಣಲು ಸಾಧ್ಯವಿಲ್ಲ.

ಅನುಭಾವಿಗಳ ಜಾತ್ರೆಯೆಂದರೆ ಮಠದ ಜಾತ್ರೆಯಂದೇ ಅರ್ಥ. ಈ ಜಾತ್ರೆಗೆ ಊರಿನ ಜನರೆಲ್ಲರ ಸಹಕಾರವಿರುತ್ತದೆ, ಒಗ್ಗಟ್ಟಿರುತ್ತದೆ. ಊರಿನ ಜನರ ಸಂಬಂಧಿಕರು, ಅಕ್ಕಪಕ್ಕದ ಹಳ್ಳಿಯವರು ವಿಶೇಷವಾಗಿ ಊರಿನಿಂದ ಬದುಕನ್ನು ಕಟ್ಟಿಕೊಳ್ಳಲು ವಲಸೆ ಹೋದ ಜನರು, ಬಡವರು ಸಿರಿವಂತರು ಧರ್ಮ, ಜಾತಿ ಕುಲಗಳೆನ್ನದೆ ಒಂದಾಗಿ ನಿಂತು ಭಕ್ತರೆಲ್ಲರೂ ಜಾತ್ರೆಯ ದಿನದಂದು ನಡೆಯುವ ರಥೋತ್ಸವಕ್ಕೆ ಸಾಕ್ಷಿಯಾಗುತ್ತಾರೆ. ಧಾರ್ಮಿಕವಾಗಿ, ಸಾಮಾಜಿಕವಾಗಿ ಭಾವೈಕ್ಯತೆ ಹುಟ್ಟಿಸುವ ಇಂಥ ಜಾತ್ರೆಗಳು ಹೆಣ್ಣು - ಗಂಡು ಎಂಬ ಭೇದ ಭಾವವಿಲ್ಲದೆ ಆಚರಿಸುವ ಪ್ರೀತಿ ಸಂಬಂಧಗಳ ಸಂಕೇತಗಳಾಗಿವೆ. ಸುಣ್ಣಬಣ್ಣಗಳಿಂದ, ವಿದ್ಯುತ್ ದೀಪಗಳಿಂದ ವಿಶೇಷವಾಗಿ ಅಲಂಕರಿಸಿರುತ್ತಾರೆ. ಮಠಗಳ ಹೊರಾಂಗಣದಲ್ಲಿ ನಿರ್ದಿಷ್ಟಪಡಿಸಿದ ಜಾಗದಲ್ಲಿ ಹಣ್ಣು, ಕಾಯಿ, ಪುಸ್ತಕ, ಫೋಟೋ, ಆಟದ ಸಾಮಾನು, ಪಾತ್ರೆ, ಬಟ್ಟೆ, ಬಳೆ ಅಂಗಡಿಗಳು ಹೀಗೆ ವಿವಿಧ ಸಾಮಾನುಗಳನ್ನು ಮಾರುವ ಅಂಗಡಿಗಳನ್ನು ಸಾಲು–ಸಾಲಾಗಿ ಹಾಕಿರುತ್ತಾರೆ.

ಜಾತ್ರೆಯಲ್ಲಿ ಮಠಗಳಿಗೆ ವಿಶೇಷತೆಯ ಅಲಂಕಾರ ಮಾಡಿರುತ್ತಾರೆ. ಭಕ್ತರೆಲ್ಲರೂ ಬಣ್ಣಬಣ್ಣದ ಉಡುಗೆಗಳನ್ನು ತೊಟ್ಟುಕೊಂಡು ಮಠಕ್ಕೆ ಹೋಗಿ ಮಠದಲ್ಲಿರುವ ವಿಗ್ರಹ, ಸಮಾಧಿಗೆ

ನಮಸ್ಕರಿಸುತ್ತಾರೆ. ಪ್ರಸಾದ, ತೀರ್ಥ ಸ್ವೀಕರಿಸುತ್ತಾರೆ. ಇದೇ ರೀತಿಯಲ್ಲಿ ಸೂಫಿಗಳ ದರ್ಗಾಗಳಲ್ಲಿಯೂ ಜಾತ್ರೆಯು ನಡೆಯುತ್ತದೆ. ಅಲ್ಲಿಯೂ ಪ್ರವಚನ ಪುರಾಣಗಳು ಮಠದಲ್ಲಿ ನಡೆಯುವಂತೆ ನಡೆಯುತ್ತವೆ. ಮಠದಲ್ಲಿ ಪ್ರವಚನ, ಶಿವಾನುಗೋಷ್ಠಿ, ಜ್ಞಾನ ದಾಸೋಹ, ನಾಟಕಗಳಿರುತ್ತವೆ. ದರ್ಗಾಗಳಲ್ಲಿ ಜಾತ್ರೆಯ ದಿನ ರಾತ್ರಿಯಲ್ಲಿ ಖವ್ವಾಲಿ, ಪ್ರವಚನ, ಕುರಾನ್ ಬೋಧನೆ, ಊಟದ ವ್ಯವಸ್ಥೆಯೂ ಇರುತ್ತದೆ.

"ಜಾತ್ರೆಗಳು ಒಂದು ಪ್ರದೇಶದ ಬೇರೆ ಬೇರೆ ಭಾಷೆ, ಜಾತಿ, ವರ್ಗ, ಸಾಮಾಜಿಕ ಅಂತಸ್ತು, ಅಭಿರುಚಿಯ ಜನಸಮುದಾಯವನ್ನು ಸಮಾವೇಶಗೊಳಿಸಿ ಅವರಲ್ಲಿ ಆಸ್ತಿಕ ಭಾವನೆಯನ್ನು ಉದ್ದೀಪನಗೊಳಿಸುವ ಸಾಂಸ್ಕೃತಿಕ ಕ್ರಿಯೆಯಾಗಿರುವುದರಿಂದ ಈ ವ್ಯವಸ್ಥೆಯ ಹಿನ್ನೆಲೆಯಲ್ಲಿ ದುಡಿಯುವ ಜನಪದ ಮನೋಭೂಮಿಕ ಮಹತ್ವದ್ದಾಗಿದೆ. ಹಾಗಾಗಿ ಮೂಲಭೂತವಾಗಿ ಕಲ್ಪನೆ, ಸ್ವರೂಪ, ಆಶಯ, ಉದ್ದೇಶಗಳಲ್ಲಿ ಜಾತ್ರೆಯು ಜನಪದೀಯ".[೧]

ಬಳ್ಳಾರಿ ಜಿಲ್ಲೆಯಲ್ಲಿ ಅನುಭಾವಿ ಶರಣರ, ಸಂತರ, ಸೂಫಿಗಳ ಜಾತ್ರೆಗಳು ಜನಪ್ರಿಯ ಜಾತ್ರೆಗಳೆಂದು ಹೆಸರು ಪಡೆದಿವೆ. ಕುರುಗೋಡು ನೀಲಮ್ಮ, ಬಳ್ಳಾರಿ ಮರಿಸ್ವಾಮಿ, ಕಾನಾಮಡುಗು ಶರಣಪ್ಪ, ಗದ್ದಿಕೆರೆ ದೊಡ್ಡಬಸಪ್ಪ, ಸಿಂಧಿಗೇರಿ ಮಲ್ಲಪ್ಪ, ಕಂಪ್ಲಿಯ ಬಡೇ ಸಾಹೇಬ್ ಖಾದ್ರಿ, ಬಳ್ಳಾರಿ ಮಕ್ದುಂಜಾನಿ ಬಾಬಾ, ಉಜ್ಜನಿಯ ಸಾದಿಕ್ ವಲಿ ಶಾ ಖಾದ್ರಿ ತೋಲಂಗರ್, ಹೊಸಪೇಟೆಯ ಮೀರ್ ಆಲಂ ನವಾಜ್, ಕುಡತಿನಿಯ ಲಂಗರ್ ಶಾವಲಿ ಮೊದಲಾದ ಮಹಾನುಭಾವಿಗಳ ಜಾತ್ರೆಗಳಲ್ಲಿ ಮೇಲು-ಕೀಳು, ಬಡವ-ಶ್ರೀಮಂತನೆಂಬ ಭೇದ ಭಾವವಿಲ್ಲದೆ ಎಲ್ಲ ಜನರು ಸೇರುವುದರಿಂದ ಸಾಮಾಜಿಕ ಮತ್ತು ಭಾಷಾಬಾಂದವ್ಯದ ಸಂಕೇತವಾಗಿದೆ.

**೬.೩. ನಂಬಿಕೆ - ಸಂಪ್ರದಾಯಗಳು**

ಸಂಪ್ರದಾಯಗಳಿಗೆ ನಂಬಿಕೆಯೇ ಮೂಲ. ನಂಬಿಕೆ ಮತ್ತು ಸಂಪ್ರದಾಯಗಳ ರೂಪವನ್ನು ಹೊತ್ತು ನಿಂತ ಶರಣರು, ಸೂಫಿಗಳು, ಸಾಧು-ಸಂತರು, ಅವಧೂತರು, ಯೋಗಿಗಳು ಇಂದು ಇಲ್ಲದಿದ್ದರೂ ಇವರು ನಡೆದ ನಡೆ, ಆಡಿದ ನುಡಿಗಳಿಂದ ಇವರ ಗದ್ದುಗೆ ಪ್ರಭಾವದಿಂದ ಭಕ್ತರ ಕಷ್ಟಗಳನ್ನು ಸಮಸ್ಯೆಗಳನ್ನು, ರೋಗ ರುಜಿನಗಳನ್ನು ಪರಿಹರಿಸಿ, ಇಷ್ಟಾರ್ಥವನ್ನು ನೆರವೇರಿಸುತ್ತಾರೆಂಬ ನಂಬಿಕೆಗಳು ಜೀವಂತವಾಗಿವೆ.

ನೋಡುವಂತೆ ಸಮಾಜದಲ್ಲಿ ಎಲ್ಲ ವರ್ಗದ ಎಲ್ಲ ಅಂತಸ್ತಿನ ಜನರಿದ್ದಾರೆ. ಇಂದಿನ ತಂತ್ರಜ್ಞಾನ ಯುಗದಲ್ಲಿಯೂ ಜನಪದರ ನಂಬಿಕೆಗಳಲ್ಲಿ ಜನರಿದ್ದಾರೆಂದರೆ ಈ ದೈವಾಂಶಸಂಭೂತ ರಾದ ಅನುಭಾವಿಗಳ ಪ್ರಭಾವ ಇವರ ಮೇಲೆ ಇರುವುದು ತಿಳಿದು ಬರುತ್ತದೆ. ನಂಬಿಕೆಯೆನ್ನುವುದು ಸಮಾಜದಲ್ಲಿ ಬಾಳಿ ಬದುಕುವ ಜನರಿಗೆ ಬದುಕನ್ನು ಕಟ್ಟಿಕೊಳ್ಳುವಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಸಹಾಯಕವಾಗಿರುತ್ತದೆ. ನಂಬಿಕೆಯಿಂದಲೇ ಜನರು ತಮ್ಮ ಬೇಡಿಕೆಯನ್ನು ತಾವು ಪೂಜಿಸಿ ಆರಾಧಿಸುವ ದೈವಗಳಲ್ಲಿಟ್ಟು ಪರಿಹಾರ ಕಂಡುಕೊಂಡು ನೆಮ್ಮದಿಯ ಬದುಕನ್ನು

ಕಟ್ಟಿಕೊಂಡಿದ್ದಾರೆ. ಆ ಕಾರಣಕ್ಕಾಗಿ ನಂಬಿಕೆಗೆ ಪರಂಪರಾಗತವಾಗಿ ಮುಂದುವರಿದುಕೊಂಡು ಬಂದಿದೆ. ನಂಬಿಕೆ ಬದುಕಿಗೆ ಶಕ್ತಿಯನ್ನು ಕೊಡುವಂಥದ್ದಾಗಿದೆ.

ಸಂಪ್ರದಾಯದ ಮೂಲವೇ ನಂಬಿಕೆ. ನಂಬಿಕೆ ಸಂಪ್ರದಾಯ ಎಂಬುದನ್ನು ಇಲ್ಲಿ ಎರಡು ವರ್ಗಗಳಾಗಿ ನೋಡಬಹುದಾಗಿದೆ. "ನಂಬಿಕೆ-ಸಂಪ್ರದಾಯ ಎರಡು ಕವಲಾಗಿ ಒಡೆಯುತ್ತದೆ. ಒಂದು ರಾಜಕೀಯ, ಮತ್ತೊಂದು ಸಾಮಾಜಿಕ-ಧಾರ್ಮಿಕ. ಮೊದಲನೆಯದು ಕಾನೂನೂಶಾಸ್ತ್ರವಾಗಿ ವಿಕಾಸಗೊಂಡಿದೆ. ಎರಡನೆಯದು ನೀತಿಶಾಸ್ತ್ರವಾಗಿ ಅರಳುತ್ತದೆ. ಗುರು ಹಿರಿಯರು, ತಂದೆ-ಮಕ್ಕಳು ಹಾಗೂ ವ್ಯವಹಾರಗಳಿಗೆ ಸೇರುವ ಸಂಪ್ರದಾಯಗಳು ನೈತಿಕ ಕ್ಷೇತ್ರದ ಪರಿಧಿಯಲ್ಲಿ ಸಮಾವೇಶಗೊಳ್ಳುತ್ತವೆ. ಈ ನಂಬಿಕೆ ಸಂಪ್ರದಾಯಗಳು ಸಾಮಾಜಿಕ ಮತ್ತು ಕೌಟುಂಬಿಕ ಮೌಲ್ಯಗಳು ನಂಬಿಕೆಗಳ ಮೂಲಕ ವ್ಯಕ್ತವಾಗುತ್ತವೆ. ಅವು ಸಮಾಜದ ಅಲಿಖಿತ ಶಾಸನಗಳು. ಇವು ಲಿಖಿತ ಶಾಸನಗಳಿಗಿಂತ ಬೆಲೆಯುಳ್ಳವು. ಅವುಗಳ ಹಿಂದೆ ದೀರ್ಘ ಪರಂಪರೆಯಿರುವುದರಿಂದ ಅನೇಕ ಪೀಳಿಗೆಗಳ ಮೆಚ್ಚುಗೆಗೆ ಪಾತ್ರವಾಗಿವುದರಿಂದ ಅವುಗಳ ಬೆಲೆ ಅಮೇಯವಾದುದು. ಮನಧರ್ಮಶಾಸ್ತ್ರ ಯಾವುದು? ನಂಬಿಕೆಗಳ ಆ ಸಂಗ್ರಹ ಸಮರ್ಪಕವಾಗಿಲ್ಲದಿರಬಹುದು. ಅದರಲ್ಲಿ ನ್ಯೂನ್ಯತೆಗಳು ಇರಬಹುದು. ಪಕ್ಷಪಾತ್ರದಿಂದ ಕೂಡಿರಬಹುದು. ನಂಬಿಕೆಗಳು ನಿಂತ ಮಡುವಲ್ಲಿ ಹರಿಯುವ ನದಿ ಎನ್ನುವುದನ್ನು ಗಮನಿಸಬೇಕು. ಅವೂ ಕಾಲಕಾಲಕ್ಕೆ ತಕ್ಕಂತೆ ಬದಲಾಯಿಸುತ್ತವೆ. ಇರಲಿ, ಸಮಾಜದಲ್ಲಿ ನೀತಿ ಧರ್ಮ ಉಳಿದಿರುವುದು ಈ ನಂಬಿಕೆಗಳಿಂದ."[೨]

ನಂಬಿಕೆ ಸಂಪ್ರದಾಯಗಳನ್ನು ಹೊತ್ತುನಿಂತ ಹಲವಾರು ಯೋಗಿಗಳಲ್ಲಿ ಶರಣರು, ಸೂಫಿಗಳು ಮತ್ತು ತತ್ವಪದಕಾರರು ಇಂದು ಇಲ್ಲದಿದ್ದರೂ ಅವರ ಮೇಲಿನ ನಂಬಿಕೆ ಸಂಪ್ರದಾಯಗಳು ಜೀವಂತವಾಗಿವೆ. ಈ ನಂಬಿಕೆ ಮತ್ತು ಸಂಪ್ರದಾಯಗಳ ಆಚರಣೆಯಿಂದಲೇ ಅನೇಕ ರೀತಿಯ ಪ್ರಯೋಜನಗಳನ್ನು ಪಡೆಯಲಾಗಿದೆ. ಇದರಿಂದ ಸುಖ-ಶಾಂತಿ ನೆಮ್ಮದಿಗಳು, ಮನೆಗೆ, ಗ್ರಾಮಕ್ಕೆ, ನಾಡಿಗೆ ಲಭಿಸಿವೆ ಎಂಬುದು ಭಕ್ತರ ನಂಬಿಕೆ.

೧. ಶರಣರು ಸೂಫಿಗಳನ್ನು ನಂಬಿರುವ ಭಕ್ತರು ತಮ್ಮ ಕಷ್ಟಗಳ ನಿವಾರಣೆಗೆ ಈ ಅನುಭಾವಿಗಳೇ ಕಾರಣವೆಂದು ನಂಬಿರುತ್ತಾರೆ. ಭಕ್ತ ಜನಸಮೂಹ ಏನೇ ಕೆಲಸ ಕಾರ್ಯಗಳನ್ನು ಮಾಡಿದರೂ, ಎಲ್ಲಿಗೆ ಹೋಗಲು ಸಿದ್ಧರಾದರೂ ಮೊದಲು ಮಠ ಮತ್ತು ದರ್ಗಾಕ್ಕೆ ಹೋಗಿ ಗದ್ದುಗೆ, ಸಮಾಧಿಗೆ ಪ್ರದಕ್ಷಿಣೆ ಹಾಕಿ ನಮಸ್ಕರಿಸಿ ಹೋಗುತ್ತಾರೆ. ಈ ನಂಬಿಕೆ ಇರುವುದರಿಂದ ನಮಗೆ ಯಾವುದೇ ತೊಡಕುಗಳು ಬರುವುದಿಲ್ಲವೆಂದು, ಬಂದರೂ ಅವುಗಳನ್ನೆಲ್ಲಾ ಈ ಅನುಭಾವಿಗಳೇ ನಿವಾರಣೆ ಮಾಡುತ್ತಾರೆಂಬ ನಂಬಿಕೆ ಭಕ್ತರಲ್ಲಿದೆ.

೨. ರೋಗ ರುಜಿನಗಳು ಬಂದರೆ, ದೆವ್ವ ಪೀಡೆಯಂಥ ಗಾಳಿ ಸೋಂಕಿದ್ದವರು ಮಠದಲ್ಲಿ ಮತ್ತು ದರ್ಗಾಗಳಲ್ಲಿ ಮಲಗಿದರೆ ರೋಗಗಳೆಲ್ಲ ಪರಿಹಾರವಾಗಿ ಹೊಸ ಚೈತನ್ಯ ಪಡೆದು ನಡೆದಾಡುವರು ಎನ್ನುವ ನಂಬಿಕೆಯಿದೆ. ಈ ನಂಬಿಕೆಯಲ್ಲಿಯೇ ಎಲ್ಲೆಲ್ಲಿಂದಲೋ

ಬಂದು ಮಠದಲ್ಲಿ ಮತ್ತು ದರ್ಗಾಗಳಿಗೆ ಭೇಟಿ ಕೊಡುತ್ತಾರೆ. ಮುಖ್ಯವಾಗಿ ಇಂಥವರು ಅಮವಾಸ್ಯೆ ಪೂಜೆಗಂತೂ ತಪ್ಪದೇ ಬಂದು ಅಂದು ರಾತ್ರಿ ಮಠ ಮತ್ತು ದರ್ಗಾಗಳಲ್ಲಿ ತಂಗುತ್ತಾರೆ.

೩. ಯಾವುದೇ ಹೊಸಕಾರ್ಯಗಳನ್ನು ಪ್ರಾರಂಭಿಸಿದರೆ, ಹೊಲ, ಮನೆಗಳನ್ನು ಖರೀದಿಸಿದರೆ, ವಿದ್ಯಾಭ್ಯಾಸ ಮತ್ತು ವೈವಾಹಿಕ ಸಂಬಂಧ ಗೊತ್ತುಪಡಿಸಿದರೆ ಈ ಅನುಭಾವಿಗಳ ಸನ್ನಿಧಿಗೆ ಹೋಗಿ ದರ್ಶನ ಪಡೆದು ಬಂದರೆ ಒಳ್ಳೆಯದಾಗುತ್ತದೆಂಬ ನಂಬಿಕೆ ಇದೆ.

೪. ಊರು ಮತ್ತು ಗ್ರಾಮಕ್ಕೆ ಕಾಲರಾ ಮತ್ತು ಮಾರಿರೋಗ ಬಂದಾಗ, ಬಹಳ ದಿನಗಳಿಂದ ಮಳೆ ಬಾರದಿದ್ದಾಗ, ಈ ಅನುಭಾವಿಗಳ ಮಠ ಮತ್ತು ದರ್ಗಾಗಳಲ್ಲಿ ಭಕ್ತರು ಪೂಜೆ ಪುನಸ್ಕಾರಗಳನ್ನು ಮಾಡಿಸುತ್ತಾರೆ. ಪ್ರವಚನಗಳನ್ನು ಏರ್ಪಡಿಸುತ್ತಾರೆ. ಊರಲ್ಲಿರುವ ಮನೆ, ಮಠ, ದರ್ಗಾ, ದೇವಾಲಯ ಇವೆಲ್ಲವುಗಳಲ್ಲಿ ಪುರಾಣ ಪ್ರವಚನದ ಕಾರ್ಯಕ್ರಮಗಳನ್ನು ಹಮ್ಮಿಕೊಂಡರೆ ಊರಿಗೆ ಹಿಡಿದಿರುವ ಸೋಂಕು, ರೋಗ ಪೀಡೆ ತೊಲಗಿ ಒಳ್ಳೆಯದಾಗುತ್ತದೆನ್ನುವ ನಂಬಿಕೆ ಜನರಲ್ಲಿದೆ.

೫. ಈ ಅನುಭಾವಿಗಳು ಸಂಚಾರ ಮಾಡಿದ ಊರುಗಳು, ಗ್ರಾಮಗಳು ಪ್ರದೇಶಗಳಲ್ಲಿನ ಭಕ್ತ ಜನರು ಇವರಿಂದ ಒಳಿತನ್ನು ಕಂಡ ಕುಟುಂಬದವರು, ಇವರ ಫೋಟೋ ತಮ್ಮ ಮನೆಯಲ್ಲಿಟ್ಟು ಪೂಜಿಸಿದರೆ ತಮಗೆ ತಮ್ಮ ಕುಟುಂಬಕ್ಕೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆಯನ್ನಿರಿಸಿಕೊಂಡಿದ್ದಾರೆ.

೬. ನಂಬಿದ ಜನರು ಹರಕೆ ಹೊತ್ತು ಕೊಳ್ಳುತ್ತಾರೆ. ಅದು ನೆರವೇರಿದರೆ ಭಕ್ತ ಜನರು ಸಂತಸಗೊಂಡು ಇವರ ಸನ್ನಿಧಿಗೆ ಹೋಗಿ ಹರಕೆಯನ್ನು ತೀರಿಸುತ್ತಾರೆ. ಮಕ್ಕಳಾಗಲೆಂಬ, ಮಕ್ಕಳಿಗೆ ಮದುವೆಯಾಗಲೆಂಬ, ಮಳೆಯಾಗಲೆಂಬ, ಹೊಲದಲ್ಲಿ ಬೆಳೆ ಸಮೃದ್ಧವಾಗಲೆಂಬ ಎಲ್ಲ ಹರಕೆಗಳು ನೆರವೇರಿದಾಗ ಭಕ್ತಜನರು ಮಠಗಳು ಮತ್ತು ದರ್ಗಾಗಳಿಗೆ ಹೋಗಿ ಹರಕೆಯನ್ನು ತೀರಿಸುತ್ತಾರೆ.

೭. ಈ ಅನುಭಾವಿಗಳು ನೆಲೆಸಿರುವ ಮತ್ತು ಸಂಚಾರ ಮಾಡಿರುವ, ಸಮಾಧಿಯಾಗಿರುವ ಸ್ಥಳಗಳಲ್ಲಿನ ಭಕ್ತರು ತಮ್ಮ ಮಕ್ಕಳು ಮೊಮ್ಮಕ್ಕಳಿಗೆ ಇವರುಗಳ ಹೆಸರುಗಳಿಡುವ ಪದ್ಧತಿ ಭಕ್ತರಲ್ಲಿದೆ. ಹೆಣ್ಣಾಗಲಿ, ಗಂಡಾಗಲಿ ಮಕ್ಕಳಿಗೆ ಇವರ ಹೆಸರನ್ನು ಇಡುತ್ತಾರೆ. ಶರಣ ಮಲ್ಲಪ್ಪನ ಹೆಸರನ್ನು ಗಂಡಾದರೆ ಮಲ್ಲಪ್ಪ, ಹೆಣ್ಣಾದರೆ ಮಲ್ಲಮ್ಮ, ಶರಣ ಮರಿಸ್ವಾಮಿಯವರ ಹೆಸರನ್ನು ಮರಿಸ್ವಾಮಿ, ಕಾನಾಮಡುಗು ಶರಣಪ್ಪನ ಭಕ್ತರು ಶರಣಪ್ಪ, ಶರಣಮ್ಮ, ಕುರುಗೋಡು ನೀಲಮ್ಮನ ಭಕ್ತರ ಮನೆಯಲ್ಲಿ ನೀಲಪ್ಪ, ನೀಲಮ್ಮ, ಕಂಪ್ಲಿಯಲ್ಲಿ ಬಡೇ ಸಾಹೇಬ್ ಖಾದ್ರಿಯ ಭಕ್ತರ ಮನೆಯಲ್ಲಿ ಸಾಹೇಬಣ್ಣ, ಸಾಬಮ್ಮ, ಮಕ್ದುಂ ಜಾನಿ ಬಾಬಾ ಭಕ್ತರು, ಜಾನಿಬಾಬಾ, ಜಾನಿ,

ಉಜ್ಜನಿ ಸಾದಿಕ್‌ವಲಿ ಶಾ ಖಾದ್ರಿ ಲೋಲಂಗರ್ ಭಕ್ತರ ಮನೆಯಲ್ಲಿ ವಲಿ, ಸಾದಿಕ್ ವಲಿ, ಹೊಸಪೇಟೆಯ ಅಹಮದ್ ಷಾ ಖಾದ್ರಿಯವರ ಭಕ್ತ ಅಹ್ಮದ್ ಷಾ ಖಾದ್ರಿ ಎಂಬ ಹೆಸರನ್ನು ಇಟ್ಟಿದ್ದಾರೆ. ಇಂಥ ಹೆಸರನ್ನು ಇಡುವ ಸಂಪ್ರದಾಯ ಈಗಲೂ ಇದೆ.

೮. ಹೊಸ ಕಾರು, ಲಾರಿ, ಬೈಕು, ಆಟೋ ಬಸ್ಸುಗಳನ್ನು ಕೊಂಡಾಗ ಈ ವಾಹನಗಳ ಮೇಲೂ ಈ ಶರಣ ಸೂಫಿ ಅನುಭಾವಿಗಳ ಹೆಸರನ್ನು ಬರೆಸುತ್ತಾರೆ. ಈ ಸಂಪ್ರದಾಯ ಈಗಲೂ ಕಾಣಬಹುದಾಗಿದೆ.

೯. ಹೊಸ ಮನೆಗಳನ್ನು ಕಟ್ಟಿಸಿದಾಗ ಮನೆಗಳಿಗೆ ತಾವು ನಂಬಿದ ದೈವಾಂಶಸಂಭೂತರ ಹೆಸರು ನೀಡುವ ಸಂಪ್ರದಾಯವಿದೆ. ದೊಡ್ಡ ಬಸಪ್ಪ ನಿಲಯ. ಶರಣಪ್ಪ ನಿಲಯ, ನೀಲಮ್ಮ ನಿವಾಸ.

೧೦. ಭಕ್ತರು ತಾವು ಮಾಡುವ ವ್ಯಾಪಾರ ವ್ಯವಹಾರಗಳಿಗೆ ಅನುಭಾವಿಗಳ ಹೆಸರುಗಳನ್ನು ಬಳಸುತ್ತಾರೆ.

೧೧. ಈ ಅನುಭಾವಿಗಳ ಮಠ ಮತ್ತು ದರ್ಗಾಗಳಲ್ಲಿ ಏನೇ ಕಾರ್ಯಕ್ರಮ ಮತ್ತು ಜಾತ್ರೆ ಉತ್ಸವಗಳು ನಡೆದರೆ ಭಕ್ತ ಜನರು ಬಂದು ಪಾಲ್ಗೊಳ್ಳುವ ಸಂಪ್ರದಾಯವಿದೆ.

ಹೀಗೆ ವರ್ಷದುದ್ದಕ್ಕೂ ಧಾರ್ಮಿಕ ಆಚರಣೆಗಳಿಂದ, ವಿಧಿವಿಧಾನಗಳಿಂದ ಕೂಡಿರುವ ಅನುಭಾವಿಗಳ ಮಠ ಮತ್ತು ದರ್ಗಾ ಬಳ್ಳಾರಿ ಜಿಲ್ಲೆಯಾದ್ಯಂತ ಇವೆ ಮತ್ತು ಅಲ್ಲಿ ನಡೆಯುವ ಆಚಾರ - ವಿಚಾರಗಳು ನಂಬಿಕೆಯ ಪ್ರತೀಕವಾಗಿವೆ. ಈ ಆಚಾರ - ವಿಚಾರ, ವಿಧಿ - ವಿಧಾನಗಳು ಮನುಷ್ಯನ ಬದುಕಿನ ಜೊತೆ ಜೊತೆಯಲ್ಲಿ ಬೆಳೆಯುತ್ತ ಬರುತ್ತಿವೆ. ಬದುಕಿನಲ್ಲಿ ಇವು ಒಂದು ಆಚರಣೆಯ ಭಾಗವಾಗಿ ಮುನ್ನಡೆಯುತ್ತಿವೆ. ನಂಬಿಕೆ ಸಂಪ್ರದಾಯ ಭಕ್ತರ ಬದುಕನ್ನು ರೂಪಿಸುವಲ್ಲಿ ಮತ್ತು ನೆಮ್ಮದಿಯ ನೆಲೆಯನ್ನು ಕಟ್ಟಿಕೊಡುವಲ್ಲಿ ಸಹಕಾರಿಯಾಗಿರುವುದನ್ನು ಕಾಣಬಹುದಾಗಿದೆ.

### ೬.೪. ಪವಾಡಗಳ ಆಶಯ

ಈ ಅನುಭಾವಿಗಳು, ಧಾರ್ಮಿಕ ಮಹಾತ್ಮರು ಜಗತ್ತಿನ ತುಂಬೆಲ್ಲಾ ಇದ್ದಾರೆ. ಇವರ ಬಗ್ಗೆ ಚರಿತೆ, ಪುರಾಣ, ಪವಾಡದ ಕಥೆಗಳಂಥ ಕೃತಿಗಳು ಬಂದಿವೆ. ಧರ್ಮ ಮತ್ತು ಧಾರ್ಮಿಕ ಮಹಾನುಭಾವಿಗಳನ್ನು ನಂಬಿರುವುದಕ್ಕೆ ಧಾರ್ಮಿಕ ಸಾಹಿತ್ಯ ಅವಿಭಾಜ್ಯ ಅಂಗವಾಗಿ ಪವಾಡಗಳು ಬೆಳೆದಿವೆ. ಕ್ರಿಸ್ತ, ಬುದ್ಧ, ಮಹಾವೀರ, ಪೈಗಂಬರ್, ಶಂಕರಾಚಾರ್ಯ, ಬಸವೇಶ್ವರ, ಕನಕದಾಸ, ಪುರಂದರದಾಸ ಹೀಗೆ ಮುಂತಾದ ಮಹಾತ್ಮರು ಅನೇಕ ಪವಾಡಗಳನ್ನು ಮಾಡಿದ್ದಾರೆಂದು ಅವರ ಬಗ್ಗೆ ಬಂದಿರುವ ಸಾಹಿತ್ಯದಲ್ಲಿ ವರ್ಣಿತವಾಗಿರುವುದನ್ನು ಕಾಣಬಹುದಾಗಿದೆ.

ದೇಶದಲ್ಲಿ ಅನೇಕ ಜನರು ಪವಾಡಗಳಂತಹ ಸಿದ್ಧಿಗಳನ್ನು ಹಠಯೋಗದಿಂದ ಪಡೆದುಕೊಳ್ಳಬಹುದೆಂದು ಯೋಗಶಾಸ್ತ್ರಜ್ಞರು ಹೇಳಿದ್ದಾರೆ. ಸಾಧಕರು ಹೇಳುವಂತೆ ಅಲ್ಪ ಆಹಾರ

ಆರೋಗ್ಯಕ್ಕೆ ಹಿತಕರ; ಆರೋಗ್ಯದಿಂದಿರಲು ಹಿತಮಿತವಾದ ಆಹಾರವನ್ನೇ ಮಾಡಿದರೆ ಮನುಜ ನಿರೋಗಿಯಾಗಿರುತ್ತಾನೆ; ಚುರುಕಾಗಿ ಕೆಲಸ ಕಾರ್ಯಗಳನ್ನು ಮಾಡುತ್ತಾನೆ. ವ್ಯಾಯಾಮ ಮಾಡಿದರೆ ದೀರ್ಘಾಯುಷಿಯಾಗುತ್ತಾನೆ. ಪತಂಜಲಿ ಮಹರ್ಷಿಗಳು ಯೋಗದ ಬಗ್ಗೆ ಉತ್ತಮ ಮಾಹಿತಿಯನ್ನು ನೀಡುತ್ತಾರೆ. ಯೋಗವೆನ್ನುವುದು ಒಂದು ಬರೀ ವ್ಯಾಯಾಮದಂತೆ ಅಲ್ಲ ಒಂದು ಸರಳ ಸಾಧನೆ ಎನ್ನುವುದಕ್ಕಿಂತ ಪರಮಜ್ಞಾನವೆಂದುಕೊಳ್ಳುವುದು ಮುಖ್ಯ ವಿಷಯವೆಂದಿದ್ದಾರೆ. ಯೋಗದಲ್ಲಿ ಮುಖ್ಯವಾದ ಯೋಗ ಹಠಯೋಗ; ಇದನ್ನು ಸಾಧನೆಗೈದರೆ ಪವಾಡಗಳನ್ನು ಸಿದ್ಧಿಸಿಕೊಂಡು ದೈವಸಂಭೂತನೆನಿಸಿಕೊಳ್ಳುತ್ತಾನೆ. ಈ ಸಾಧನೆಯನ್ನು ಸಿದ್ಧಿಸಿದ ವ್ಯಕ್ತಿ ಸಮಾಜದ ಪ್ರತಿ ವರ್ಗದ ಪ್ರತಿ ಧರ್ಮದವರಿಂದಲೂ ಗೌರವ ಮನ್ನಣೆ ಪಡೆದಿದ್ದು, ಇವರು ಮಾಡುವ ಪವಾಡ ಭಕ್ತರ ವೈಯಕ್ತಿಕ ಮತ್ತು ಸಾಮೂಹಿಕ ಸಮಸ್ಯೆಗಳನ್ನು ಬಗೆಹರಿಸಲು ಬಳಸುವಂಥವುಗಳು. ಇವುಗಳಲ್ಲಿ ಯಾವುದೇ ರೀತಿ ಸ್ವಾರ್ಥ, ಮೋಸ ಇರುವುದಿಲ್ಲ. ನೊಂದವರಿಗೆ, ರೋಗದಿಂದ ನರಳುವವರಿಗೆ, ಗ್ರಾಮಗಳಲ್ಲಿ ಸಾಂಕ್ರಾಮಿಕ ಮಾರಿರೋಗಗಳು ತಗುಲಿದಾಗ ಗ್ರಾಮದ ರಕ್ಷಣೆಗೆ ಬಳಸುವಂಥದು. ಲೋಕ ಹಿತಕ್ಕಾಗಿ ಸಾಧಿಸಿದ ಶಕ್ತಿಯ ಪವಾಡ ಮಾಡುವುದುಂಟು.

ಈ ಅನುಭಾವಿಗಳು ಮಾಡಿದ ಪವಾಡಗಳು ಸಾಮಾನ್ಯ ಜನತೆಯಲ್ಲಿ ಆಶ್ಚರ್ಯವನ್ನುಂಟು ಮಾಡುತ್ತವೆ. ಜೊತೆಗೆ ಅವರ ಬಗ್ಗೆ ಬಲವಾದ ಭಕ್ತಿಗೌರವಗಳನ್ನು ಮೂಡಿಸುತ್ತವೆ.

"ಸಾರ್ವಜನಿಕ ಕ್ಷೇಮ, ಗ್ರಾಮದ ಆರೋಗ್ಯ, ಸಾಮಾಜಿಕ ನೆಮ್ಮದಿ ತರಲು ಶ್ರಮಿಸಿದ ಮಹಾತ್ಮರು, ಪುರಾಣಕ್ಕೆ ವಸ್ತುವಾದಾಗ ಅವರುಗಳು ಮಾಡಿದರೆನ್ನಲಾದ ಪವಾಡಗಳು ಭಕ್ತರ ಬಾಯಲ್ಲಿ ನಂಬಿಕೆಯಾಗಿದ್ದ ಪವಾಡ ಕಥೆಗಳು ಲಿಖಿತ ರೂಪ ಪಡೆದವು. ಗಹನವಾದ ಜಟಿಲವಾದ ಧಾರ್ಮಿಕ ತತ್ವಗಳನ್ನು ಸಾಮಾನ್ಯ ಜನರಿಗೆ ಸುಲಭವಾಗಿ ತಿಳಿಸಿಕೊಡಲು ಪೌರಾಣಿಕರು ಕೆಲವೆಡೆ ಸಾಂಕೇತಿಕ ದೃಷ್ಟಿಯನ್ನಿರಿಸಿಕೊಂಡು ಪವಾಡ ಕಥೆ ಬಣ್ಣಿಸಿದರೆ ಮತ್ತು ಕೆಲವೆಡೆ ಅನ್ಯ ಮತದ ಮಹಾಪುರುಷರ ಕುರಿತಿದ್ದ ಪವಾಡ ಕಥೆಗಳ ಪ್ರೇರಣೆಯಿಂದ ಇಲ್ಲವೆ ಅದರಲ್ಲಿನ ಆಕರ್ಷಕವೆನಿಸಿದ ಘಟನೆಗಳನ್ನೆತ್ತಿಕೊಂಡು ತಮ್ಮ ಪುರಾಣದ ನಾಯಕನ ಚರಿತ್ರೆಯಲ್ಲಿ ಹೆಣೆದಿದ್ದಾರೆ."[೩]

### ೬.೫. ಮಹಿಮೆ ವರ್ಣನೆಯ ಉದ್ದೇಶ

೧. ಜನಸಾಮಾನ್ಯರಿಗೆ ಅನುಭಾವಿಗಳು ತಾತ್ವಿಕತೆಯನ್ನು ಸರಳಗೊಳಿಸಿ ತಿಳಿಸುವುದು.

೨. ಅನುಭಾವಿಗಳಲ್ಲಿರುವ ಮಹಿಮೆ ಮತ್ತು ಅವರು ಪಡೆದ ಶಕ್ತಿಯ ಸ್ವರೂಪವನ್ನು ತಿಳಿಸುವುದು.

೩. ಅನುಭಾವಿಗಳ ತತ್ವಗಳನ್ನು ಆಚರಿಸಿದರೆ ಅದರಿಂದ ಪಡೆದುಕೊಳ್ಳುವ ಫಲಗಳನ್ನು ತಿಳಿಸುವುದು.

ಧಾರ್ಮಿಕ ತತ್ವ ಮತ್ತು ಆಚರಣೆಗಳ ಬಗ್ಗೆ ಶ್ರದ್ಧೆ ಮೂಡಿಸಿ, ಮಹಾತ್ಮರನ್ನು ನಂಬಿದವರಿಗೆ ಸದಾ ಒಳಿತಾಗುತ್ತದೆಂಬ ನಂಬಿಕೆ ಬಲಪಡಿಸುವುದೇ ಮಹಿಮೆ ವರ್ಣನೆಯ ಉದ್ದೇಶವಾಗಿದೆ.

ಭಕ್ತರು ನಂಬಿರುವ ಈ ಮಹಾಚೇತನಗಳು ಕಣ್ಮರೆಯಾದರೂ ನಂಬಿದವರನ್ನು ಎಂದೂ ಕೈ ಬಿಡುವುದಿಲ್ಲವೆಂದು ತಿಳಿದ ಭಕ್ತರು ಅವರ ಮಹಿಮೆ ಕಥೆಗಳನ್ನು ಓದಿ, ಇಲ್ಲವೆ ಕೇಳಿ ಆರಾಧಿಸುತ್ತಾರೆ. ಇಂಥ ಮಹಿಮೆಗಳನ್ನು ನಡೆಸುವವರು ಜನಸಾಮಾನ್ಯರ ಕಣ್ಣಿನಲ್ಲಿ ಮಹಾತ್ಮರಾಗಿ ಕಾಣಿಸುತ್ತಾರೆ. ಶರಣರು, ಸೂಫಿಗಳು, ಸಾಧು, ಸಂತರು ಪವಾಡ ಪುರುಷರಾಗಿ ಜನಸಾಮಾನ್ಯರಿಗೆ ಆರಾಧ್ಯ ದೈವವಾಗಿ ಅವರ ಮನೆಮನದಲ್ಲಿ ನೆಲೆನಿಂತಿದ್ದಾರೆ.

ನಾಡಿನಲ್ಲಿ ಮಹಿಮೆಯನ್ನು ತೋರಿಸುವವರ ವರ್ಣನೆಗಳು ಬಂದಿರುವ ಕೃತಿಯಲ್ಲಿರುವವರು ಬಸವಣ್ಣ, ಸಿದ್ಧರಾಮ, ಕನಕದಾಸ, ಪುರಂದರ ದಾಸ, ಆರೂಢರು ಅವಧೂತರು. "ಶರಣರನ್ನು ಕುರಿತು ಅನೇಕ ಕಥೆ, ಐತಿಹ್ಯಗಳನ್ನು ಆಧಾರವಾಗಿಟ್ಟುಕೊಂಡು ಪವಾಡ ಕಥೆಗಳಾಗಿ ವರ್ಣಿಸಿದ್ದಾರೆ. ಪಾಲ್ಕುರಿಕೆ ಸೋಮನಾಥ, ಭೀಮಕವಿ, ಲಕ್ಕಣ್ಣ ದಂಡೇಶ ಮುಂತಾದವರು ಪುರಾಣರೂಪದ ತಮ್ಮ ಕಾವ್ಯಗಳಲ್ಲಿ ಪವಾಡಗಳನ್ನು ವರ್ಣಿಸಿದ್ದಾರೆ."[೪]

ಮಹಿಮೆಯ ಕಥೆಗಳು ಜನಸಾಮಾನ್ಯರ ಮನಸ್ಸಿನಲ್ಲಿ ನಂಬಿಕೆ ಬರಲು ಇವು ಮೊದಲು ವರ್ಣನೆಯಾಗಿದ್ದು ಜಾನಪದ ಹಾಡುಗಳಲ್ಲಿ ಇಂಥ ಹಾಡುಗಳನ್ನು ಕೇಳಿದ ಜನಸಾಮಾನ್ಯರು ಮಹಿಮೆಯನ್ನು ಸರಳವಾಗಿ ನಂಬುತ್ತಾರೆ. ಇಂಥ ಹಾಡುಗಳಲ್ಲಿ ಜನಸಾಮಾನ್ಯರ ನಂಬಿಕೆ ರೀತಿ ನೀತಿಗಳೇ ಅಡಗಿರುತ್ತವೆ. ಇಂಥವರ ದೃಷ್ಟಿಯಲ್ಲಿ ಈ ಮಹಾತ್ಮರು ಪೂಜ್ಯರಾಗುತ್ತಾರೆ. ನಂಬಿ ನಡೆಯುವ ಮತ್ತು ಈ ಮಹಾತ್ಮರನ್ನು ಆರಾಧಿಸುವವರ ಸಂಖ್ಯೆ ಅಧಿಕವಾಗಿ ಇಂದಿಗೂ ಬೆಳೆಯುತ್ತಿದೆ.

**೬.೬. ಪ್ರಸ್ತುತತೆ**

೧. ಸಾಮರಸ್ಯ, ಸೌಹಾರ್ದತೆ, ಮತೀಯತೆ, ಕೋಮುವಾದವೇ ತುಂಬಿರುವ ಇಂದಿನ ದಿನಗಳಲ್ಲಿ ಅನುಭಾವದ ನೆಲೆಗಳು ಸಾರ್ವಜನಿಕ ಸಮಾನತೆಯನ್ನು ತಂದುಕೊಟ್ಟಿವೆ.

೨. ಮಠ, ದರ್ಗಾಗಳು ಪುಣ್ಯ ಕ್ಷೇತ್ರವಾಗಿವೆ. ಇಲ್ಲಿಗೆ ಎಲ್ಲ ಜಾತಿ, ವರ್ಗದ ಜನರು ಬಂದು ದರ್ಶನ ಪಡೆಯುವುದರಿಂದ ಇಲ್ಲಿ ಸಮಾನತೆಯನ್ನು ಕಾಣುವಂತಾಗಿದೆ.

೩. ಜಾತ್ರೆಗಳು ಇಂದು ಜಾತಿಯನ್ನು ಹೋಗಲಾಡಿಸುತ್ತಿವೆ. ಜಾತ್ರೆಗಳು ಒಂದು ಧರ್ಮಕ್ಕೆ ಮೀಸಲಾಗಿಲ್ಲ. ಒಂದು ಮತಕ್ಕೆ ಮೀಸಲಾಗಿಲ್ಲ. ಜಾತ್ಯಾತೀತ, ಧರ್ಮಾತೀತ ನೆಲೆಯಲ್ಲಿ ಜಾತ್ರೆಯು ತುಂಬ ಪ್ರಸ್ತುತವಾಗಿದೆ.

೪. ಪೂಜೆಯಂಬುದು ಇಂದು ಪ್ರಾಮುಖ್ಯತೆಯನ್ನು ಪಡೆದುದಾಗಿದೆ. ಪೂಜೆಯಿಂದ ಅನ್ನದಾಸೋಹ ನಡೆಯುತ್ತದೆ. ಈ ಅನ್ನದಾಸೋಹದಲ್ಲಿ ಎಲ್ಲರು ಒಂದಾಗಿ ದಾಸೋಹವನ್ನು ಸ್ವೀಕರಿಸುತ್ತಾರೆ. ನಮ್ಮದು, ತಮ್ಮದು ಎನ್ನುವ ಈ ಕಾಲದಲ್ಲಿ ಎಲ್ಲರನ್ನು ಒಂದು ಮಾಡುವ, ಎಲ್ಲರೂ ಒಂದೇ ಎಂದು ಸಾರುವ ಸಾಮರಸ್ಯವು ಈ ಮೂಲಕ ಅನಾವರಣಗೊಂಡಿದೆ.

೫. ದರ್ಗಾ ಮತ್ತು ಮಠಗಳಲ್ಲಿ ನಡೆಯುವ ಅನ್ನ ದಾಸೋಹವು ಸರ್ವರು ಸಮಾನರು, ಜಾತಿ ದೇವರ ದೃಷ್ಟಿಯ ನೆಲೆಯಲ್ಲಿ ಒಂದೇ ಎನ್ನುವುದು ದೃಢೀಕರಿಸುತ್ತದೆ.

**ಕೊನೆ ಟಿಪ್ಪಣಿಗಳು**

೧. ಜೆ. ಕರಿಯಪ್ಪ ಮಾಳಿಗೆ, **ಬಳ್ಳಾರಿ ಜಿಲ್ಲೆಯ ಅವಧೂತರು,** ಪುಟ ೨೨೮.

೨. ಜೆ. ಕರಿಯಪ್ಪ ಮಾಳಿಗೆ, **ಬಳ್ಳಾರಿ ಜಿಲ್ಲೆಯ ಅವಧೂತರು,** ಪುಟ೨೩೩

೩. ಅದೇ, ಪುಟ ೨೩೭.

೪. ಅದೇ, ಪುಟ ೨೩೮.



## ಅಧ್ಯಾಯ : ಏಳು

# ಸಮಾರೋಪ

ಮಧ್ಯಕಾಲೀನ ಚಾರಿತ್ರಿಕ ಸಂದರ್ಭದಲ್ಲಿ ಹುಟ್ಟಿದ ಸಿದ್ಧರು, ಸಂತರು, ಸೂಫಿಗಳು, ತತ್ವಪದಕಾರರು, ಶಿವಯೋಗಿಗಳು, ಆರೂಢರು ಅನೇಕ ಪಂಥಗಳಲ್ಲಿ ಅವತರಿಸಿದ ಹಲವಾರು ಅನುಭಾವಿಗಳು ವೀರಶೈವ, ಜೈನ, ವೈಷ್ಣವ ಮುಂತಾದ ಸಾಂಸ್ಥಿಕ ಧರ್ಮಗಳ ಚೌಕಟ್ಟಿನಿಂದ ಹೊರಗುಳಿದವರು. ಇವರೆಲ್ಲಾ ತಮ್ಮ ವಿಶಿಷ್ಟ ನಡೆನುಡಿಗಳಿಂದ, ಸಮಾನತೆಯ ಮತ್ತು ನೈತಿಕ ಜೀವನದ ತಳಹದಿಯನ್ನು ಅಸ್ಥಿರ ಬದುಕಿನ ಚಿತ್ರಣವನ್ನು ಪ್ರಾಪಂಚಿಕವಾದ ಸರ್ವವೂ ನಶ್ವರ ಎಂಬ ತಿಳುವಳಿಕೆಯನ್ನು ಜನತೆಗೆ ಸಾರಿದವರಾಗಿದ್ದಾರೆ.

ಈ ಮಧ್ಯಕಾಲೀನ ಭಕ್ತಿಪಂಥದ ಅನುಭಾವಿಗಳಿಗೆ ಮೂಲಪ್ರೇರಣೆಯಾಗಿ ನಿಂತಿದ್ದು ಜನಸಾಮಾನ್ಯರ ಬದುಕು. ಅದನ್ನು ಹಸನುಗೊಳಿಸಬೇಕೆಂಬ ಹಂಬಲ ಹಾಗೂ ಜಡಗಟ್ಟಿದ ವ್ಯವಸ್ಥೆ ಅದನ್ನು ಒಡೆದು ಹಾಕಿ ಸರ್ವಸಮಾನತೆಯ ಸುಂದರ ಸುಖಿಸಮಾಜವನ್ನು ನಿರ್ಮಿಸಬೇಕೆಂಬ ಉತ್ಕಟತೆ. ಹೀಗಾಗಿ ಅನುಭಾವ ಮಾರ್ಗದ ಎಲ್ಲಾ ಅನುಭಾವಿ ಬದುಕನ್ನು ಬೆಡಗನ್ನು ಹೇಳಲು ಪ್ರಯತ್ನಿಸಿದ್ದಾರೆ.

ಸಮಾಜದಲ್ಲಿ ನಡೆಯುತ್ತಿದ್ದ ಗಲಭೆಗಳಿಗೆ ಮೂಲಕಾರಣಗಳು ಜಾತಿ ಮತ್ತು ಧರ್ಮ ಇವು ಸೃಷ್ಟಿಯ ಹಿತವನ್ನೇ ನಾಶಗೊಳಿಸುತ್ತಿವೆ. ಇಲ್ಲಿ ತುಳಿತಕ್ಕೊಳಗಾದ ಮುಗ್ಧ ಜನರಿಗೆ ನೆಲೆಕಾಣದೆ ಕಂಗಾಲಾಗಿದ್ದರು. ಇಂಥ ಜನರಿಗೆ ನೆಮ್ಮದಿಯ ನೆಲೆಯನ್ನು ತೋರಿ ಸಮಾಜದಲ್ಲಿ ಬಾಳಿಬದುಕಲು ಸಮಾನತೆಯ ಹಾದಿಯನ್ನು ತೋರಿ ಸಹಜವಾದ ಬದುಕನ್ನು ಕಟ್ಟಿಕೊಡಲು ನಾಡಿನೆಲ್ಲೆಡೆ ಅವತರಿಸಿದ ಸಾಧು, ಸಂತರು, ಶರಣರು, ಆರೂಢರು, ಅವಧೂತರು, ತತ್ವಪದಕಾರರು, ಸೂಫಿಗಳು, ಹೀಗೆ ಅನೇಕ ಅನುಭಾವಿಗಳು ತಮ್ಮ ನಡೆ - ನುಡಿಗಳ ಮೂಲಕ ಜನಸಾಮಾನ್ಯರಿಗೆ ಬದುಕಿನ ಮೌಲ್ಯಗಳನ್ನು ಕಟ್ಟಿಕೊಟ್ಟಿದ್ದಾರೆ. ವಚನ, ಪ್ರವಚನ, ಪುರಾಣ, ಕಿರ್ತನೆ, ಸ್ವರ ವಚನ ತತ್ವಪದಗಳು, ನೀತಿಬೋಧನೆ. ಹೀಗೆ ವಿವಿಧ ಪ್ರಕಾರಗಳಲ್ಲಿ ಜನತೆಯ ಅಜ್ಞಾನ, ಅಂಧಕಾರ ಮತ್ತು ಅಸಮಾನತೆಯನ್ನು ಹೋಗಲಾಡಿಸುತ್ತಾ ನೈತಿಕ ಪ್ರಜ್ಞೆಯನ್ನು ಮೂಡಿಸಿದ್ದಾರೆ.

ತುಂಗಭದ್ರಾ ನದಿ ಪ್ರಾಂತ್ಯದ ಬಳ್ಳಾರಿ ಜಿಲ್ಲೆಯಲ್ಲಿ ನೆಲೆನಿಂತಿರುವ ಅನುಭಾವಿಗಳ, ಅನುಭಾವ ಸಾಹಿತ್ಯದ ಬಗ್ಗೆ ಸಂಶೋಧನೆ ಕೈಗೊಂಡಾಗ ಮಾಹಿತಿ ಸಿಗಬಹುದೇ? ಎಂಬ ಪ್ರಶ್ನೆಯ ಹುಡುಕಾಟದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡಾಗ ಅವರ ಬಗ್ಗೆ ಇರುವ ಲಿಖಿತ ಮತ್ತು ಮೌಖಿಕ ಆಧಾರಗಳನ್ನು ಸಂಗ್ರಹಿಸಿ ಶೋಧಿಸಿದಾಗ ಕಾಲಗರ್ಭದಲ್ಲಿ ಅವಿತುಕೊಂಡಿರುವ ಮಾಹಿತಿಗಳು ಲಭ್ಯವಾದವು. ಇದರಿಂದ ಅವರ ಸಾಧನೆ, ಸಿದ್ಧಿ ಮತ್ತು ಮೌಲ್ಯಗಳ ಅಧ್ಯಯನ ಇಂದು ಅಗತ್ಯವೆಂದು ತಿಳಿದು ದೊರೆತ ಮಾಹಿತಿಗಳನ್ನು ಆಧಾರವಾಗಿಟ್ಟುಕೊಂಡು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಅನುಭಾವಿಗಳಾದ ಶರಣರು, ತತ್ವಪದಕಾರರು, ಸೂಫಿಗಳು ಯಾವುದೇ ಒಂದು ಧರ್ಮ ಪಂಗಡಕ್ಕೆ ಸೇರದೆ ಅವುಗಳನ್ನು ಮೀರಿ ನಿಂತವರು. ದೈವವನ್ನು ಇವರು ಬಾಹ್ಯದಲ್ಲಿ ಹುಡುಕದೆ ಅರಿವಿನ ಮೂಲಕ ಅಂತರಂಗದಲ್ಲಿಯೇ ಕಂಡುಕೊಂಡವರು. ದೈವವನ್ನು ಅಂತರಂಗದಿಂದ ಹುಡುಕಿದರೆ ಸಿಗದು; ಅದಕ್ಕಾಗಿ ಅಂತರಾತ್ಮವನ್ನು ಪರಿಶುದ್ಧವಾಗಿಟ್ಟುಕೊಳ್ಳ ಬೇಕೆಂಬುದನ್ನು ಅರ್ಥೈಸಿದರು. ಮನುಜ ಸಾಧಿಸಲು ಛಲ ಬೇಕು; ನಿರಂತರ ಸಾಧನೆ ಇರಬೇಕು. ಮನುಷ್ಯ ಛಲ ಮತ್ತು ಸಾಧನೆಯಿಂದ ದೇವಮಾನವನಾಗಬಲ್ಲ. ಪ್ರತಿ ಮಾನವನೊಳಗೆ ದೈವತ್ವದ ಅಂಶಗಳಿರುತ್ತವೆ. ಅದನ್ನು ಜಾಗೃತಿಗೊಳಿಸಿಕೊಂಡಾಗ ದೇವಮಾನವನಾಗುತ್ತಾನೆ. ಅದು ಹೇಗೆ ಸಾಧ್ಯ? ಎನ್ನುವ ಪ್ರಶ್ನೆ ಎದುರಾದರೆ ಮನುಷ್ಯ ತನ್ನ ಆಧ್ಯಾತ್ಮದಿಂದ ಪಡೆದುಕೊಳ್ಳಬಹುದು. ಅದಕ್ಕೆ ಛಲ, ನೇರ ಮತ್ತು ದಿಟ್ಟವಾಗಿರಬೇಕು. ಸಾಧನೆಯಂಬುದು ನಿರಂತರವಾಗಿರಬೇಕು. ಆಗ ಈ ಎಲ್ಲ ಅಂಶಗಳಿಂದ ಮನುಜನ ಅಂತರಾತ್ಮದಲ್ಲಿರುವ ಈ ದೈವತ್ವ ಅಂಶವು ಜಾಗೃತಗೊಂಡು ಮನುಜನನ್ನು ದೇವಮಾನವನನ್ನಾಗಿ ಮಾಡುತ್ತದೆ ಎಂಬುದು ಇವರ ಧ್ಯೇಯ. ಈ ಸಾಧನೆಗಾಗಿ ಜಾತಿ, ಮತ, ಧರ್ಮಗಳಿಂದ ದೂರ ಸರಿದು ಆತ್ಮ ಶುದ್ಧಿಯೊಂದೇ ಬೆಕು. ಅದನ್ನೇ ಪರಮಾತ್ಮ ಮೆಚ್ಚುವನು ಅದರ ಮುಂದೆ ಬೇರೆ ಯಾವುದು ದೊಡ್ಡದಲ್ಲವೆಂಬುದು ಇವರ ನಿರ್ಧಾರವಾಗಿತ್ತು. ಅದೇ ಛಲದಿಂದ ಅ ನಿರಂತರ ಸಾಧನೆಯಿಂದ ಅಂತರಾತ್ಮದ ಶುದ್ಧಿಯಿಂದಲೇ ದೈವ ಮಾನವರಾಗಿ ತಮ್ಮ ನಂಬಿದವರ ಮನೆಮನದಲ್ಲಿ ಆರಾಧಿಸುವ ದೈವವಾಗಿ ಪೂಜಿಸಿಕೊಳ್ಳುತ್ತಿದ್ದಾರೆ.

ಈ ಅನುಭಾವಿಗಳಾದ ಶರಣರು, ತತ್ವಪದಕಾರರು, ಸೂಫಿಗಳು ಯಾವುದೇ ಒಂದು ಅಸಮಾನತೆಯ ವಿರುದ್ಧ ಶೋಷಣೆ, ಬಡತನದ ವಿರುದ್ಧ ಹೋರಾಡಿದವರಲ್ಲ. ಹಾಗೆಯೇ ಸಿರಿತನವನ್ನು ದ್ವೇಷಿಸಿದವರಲ್ಲ. ರಾಜಕೀಯ, ಆರ್ಥಿಕ, ಸಾಮಾಜಿಕವಾಗಿ ಇವರಿಗೆ ಯಾವುದೇ ಬದಲಾವಣೆ ಬಯಸಿದವರಲ್ಲ. ಇವರ ಬಯಕೆ ಬದಲಾವಣೆಯಂಬುದು ಮನುಷ್ಯನಲ್ಲಿ ಮಾತ್ರವಿತ್ತು. ಮನುಷ್ಯ ತನ್ನಲಿರುವ ಕೋಪ, ದ್ವೇಷ, ಘರ್ಷಣೆಗಳನ್ನು ಬಿಟ್ಟು ತನ್ನಲ್ಲಿರುವ ವಿಕೃತ ಮನಸ್ಸನ್ನು ಬದಲಾಯಿಸಿಕೊಳ್ಳಬೇಕೆಂಬ ಬಯಕೆ ಇವರಿಗಿತ್ತು. ಕುಟುಂಬ, ಒಡಹುಟ್ಟಿದವರನ್ನು, ತಂದೆ-ತಾಯಿಯನ್ನು ತೊರೆದು ಆತ್ಮಜ್ಞಾನದ ಹಂಬಲಕ್ಕಾಗಿ ಹಾತೊರೆದು ಆತ್ಮಜ್ಞಾನ ಪರಮ ಸಾಧನವೆಂದು ನಂಬಿದವರು.

ರಾನಡೆಯವರು ಹೇಳುವಂತೆ ವೈಯಕ್ತಿಕ ಬಂಧನಗಳು ಅಳಿದು ಹೋದಾಗ ಸಂತರು, ಯೋಗಿಗಳು ಇಡೀ ಸೃಷ್ಟಿಯೊಡನೆ ಏಕತೆಯನ್ನು ಪಡೆಯುತ್ತಾರೆ. ಅವರು ವಿಶ್ವ ಜೀವನದಲ್ಲಿ ನೆಲೆಸಿ, ಮಾನವ ಪ್ರಕೃತಿ ಹಾಗೂ ಪರಮಾತ್ಮನೊಡನೆ ಆಧ್ಯಾತ್ಮವನ್ನನುಭವಿಸುವರು ಮತ್ತು ಸಂಲಗ್ನವಾಗುವರು. ವಿಶ್ವದ ಮೂಲೆಮೂಲೆಗಳಲ್ಲಿ ಸಂದಿಗೊಂದಿಗಳಲ್ಲಿ ಇರವಿನ ವಿಶ್ವ ವಿಷಯಕ, ಮನೋ ವಿಷಯ, ಜ್ಞಾನ ವಿಷಯಕ, ಹಾಗೂ ಅನುಭಾವ ವಿಷಯಕ, ಎಂಬೆಲ್ಲಾ ರೂಪಗಳಲ್ಲಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು ಸಂತರು, ಯೋಗಿಗಳು, ಆಶ್ಚರ್ಯಯುಕ್ತವಾದ ಆನಂದಾತಿರೇಕದಲ್ಲಿ ಮುಳುಗಿ ಬಿಡುವರು. ಈ ಮಾತು ಅನುಭಾವಿಗಳಿಗೆ ಪೂರಕವಾಗಿದೆ.

ಮೇಲು, ಕೀಳು, ಬಡವ, ಜಾತಿ, ಮತಗಳ ಭೇದಭಾವಗಳನ್ನು ತ್ಯಜಿಸಿ ಆತ್ಮ ಜ್ಞಾನಿಗಳಿಗೆ ಜಾತಿಯೆಂಬ ಮಾತೇ ಇಲ್ಲವೆಂಬ ವಿಶಾಲ ಮನೋಭಾವವನ್ನೊಳಗೊಂಡವರು. ಪ್ರಪಂಚಕ್ಕೆ ಒಳಿತನ್ನು ಬಯಸಿ, ಕೆಡಕನ್ನು ನಿವಾರಿಸುವ ಮನೋಭಾವವುಳ್ಳವರು. ಯಾವ ಸ್ವಾರ್ಥವಿಲ್ಲದೆ ತಮ್ಮನ್ನು ನಂಬಿ ಬಂದ ಜನಸಾಮಾನ್ಯರಲ್ಲಿ ನೊಂದವರಿಗೆ, ಅಸಹಾಯಕ ಭಕ್ತ ಜನಸಮುದಾಯಕ್ಕೆ ತಾವು ನೆಲೆ ನಿಂತ ಪ್ರದೇಶದಲ್ಲಿ ಸಾಧಿಸಿದ ಸಾಧನೆಯ ಸಿದ್ಧಿಯಿಂದ ಅಶೀರ್ವದಿಸಿ, ಅನುಗ್ರಹಸಿ ಸಹಾಯ ಮಾಡಿದವರಾಗಿರುತ್ತಾರೆ. ಧ್ಯಾನ, ಯೋಗ, ಆಧ್ಯಾತ್ಮ ಸ್ವಾರ್ಥವಲ್ಲ; ಇದನ್ನು ಸಾಧಿಸಿ ಸಿದ್ಧಿಯನ್ನು ಪಡೆದ ಅನೇಕ ಅನುಭಾವಿಗಳು ಅದರಿಂದ ತಾವು ಮುಕ್ತಿಯನ್ನು ಪಡೆದು ಇತರರು ಇದರ ಸಾಧನೆಯೆಂದು ಮುಕ್ತಿಯನ್ನು ಪಡೆದು ಸುಖಿಗಳಾಗಬಹುದೆಂಬ ಮನೋಭಾವ ಹೊಂದಿದವರಾಗಿತ್ತಾರೆ ಎನ್ನುವುದಕ್ಕೆ ಈ ಅನುಭಾವಿಗಳಾದ ಶರಣರು, ತತ್ವಪದಕಾರರು, ಸೂಫಿಗಳು ಸಾಕ್ಷಿ ಎಂದು ಹೇಳಬಹುದಾಗಿದೆ.

ಈ ಅನುಭಾವಿಗಳು ತಮ್ಮ ಜೀವಿತದ ಅಂತ್ಯದಲ್ಲಿ ತಮಗಿಷ್ಟವೆನಿಸಿದ ಸ್ಥಳದಲ್ಲಿ ನೆಲೆನಿಂತು ಸಮಾಧಿ ಹೊಂದಿದ್ದಾರೆ. ಕಾಲ ಕಳೆದಂತೆ ಅವರ ಭಕ್ತರು ಇವರ ದರ್ಶನಕ್ಕಾಗಿ ಬರುವವರ ಸಂಖ್ಯೆಯೇ ಹೆಚ್ಚಾಗಿದೆ. ಅನುಭಾವಿಗಳ ಗದ್ದುಗೆ ಸಮಾಧಿಯ ಸ್ಥಳದಲ್ಲಿ ದೊಡ್ಡ ದೊಡ್ಡ ಮಠಗಳಾಗಿವೆ. ದರ್ಗಾಗಳಾಗಿವೆ. ಹೋಗುವವರ ಸಂಖ್ಯೆಯು ಹೆಚ್ಚಾಗಿದೆ. ಇವರ ದರ್ಶನ ಪಡೆದು ಅನುಗ್ರಹ ಪಡೆಯಲು ಜನರು ಅಧಿಕ ಸಂಖ್ಯೆಯಲ್ಲಿ ಬರುತ್ತಿದ್ದಾರೆಂದರೆ ಇವರ ಮಹಿಮೆ ಇನ್ನೂ ಪ್ರಗತಿಪಥದಲ್ಲಿದೆ ಎಂದೇ ಹೇಳಬೇಕು. ದಿನದಲ್ಲಿ, ಒಂದು ದಿನ ವಿಶೇಷ ದಿನದಲ್ಲಿ ಭಕ್ತ ಬಂದರೆ ಮತ್ತೆ ತಿಂಗಳಿಗೊಮ್ಮೆ ಅಮವಾಸ್ಯೆಯಂದು ಬರುವ ಭಕ್ತರ ದಂಡು ನೋಡಿದರೆ ಒಂದು ಸಣ್ಣ ಜಾತ್ರೆಯಂತಿರುತ್ತದೆ. ಅನುಭಾವಿಗಳ ಗದ್ದುಗೆಗಳು ಅಭಿವೃದ್ಧಿಗೊಂಡು ಭಕ್ತರಲ್ಲಿಯೇ ಕೆಲವರು ಒಂದು ಸಮಿತಿ ರಚನೆ ಮಾಡಿಕೊಂಡು ಗದ್ದುಗೆ ಸಮಾಧಿಗಳ ಕಟ್ಟಡದ ಜೀರ್ಣೋದ್ಧಾರ ಮಾಡುತ್ತಾರೆ. ಹಲವಾರು ಪುರಾಣ - ಪ್ರವಚನ ಕೀರ್ತನಗಳಂತಹ ಕಾರ್ಯಕ್ರಮಗಳನ್ನು ನಡೆಸುತ್ತಾರೆ. ಮಠಗಳಲ್ಲಿ ಮತ್ತು ದರ್ಗಾಗಳಲ್ಲಿ ಭಕ್ತರು ಕೊಡುವ ಕಾಣಿಕೆಯಿಂದ ಗದ್ದುಗೆಗಳ ಅಭಿವೃದ್ಧಿ ಕಾರ್ಯ ನಡೆಸಿ ಬಂದ ಭಕ್ತರಿಗೆಲ್ಲ ವಿಶೇಷ ದಿನಗಳಂದು

ಅನ್ನದಾಸೋಹದಂಥ ಕಾರ್ಯಕ್ರಮಗಳು ಜರಗುತ್ತವೆ. ಭಕ್ತರಿಗೆ ಏಸು ವ್ಯವಸ್ಥೆ ಕೂಡ ಮಾಡಲಾಗುತ್ತಿದೆ.

ಇಂದಿನ ವೈಜ್ಞಾನಿಕ ಯುಗದಲ್ಲಿ ಜನರಲ್ಲಿರುವ ಆಸಕ್ತಿ, ಅಭಿರುಚಿ, ಉತ್ಸಾಹ, ಹುಮ್ಮಸ್ಸು, ರೀತಿ, ನೀತಿ ಎಲ್ಲವೂ ಬದಲಾಗುತ್ತಿದ್ದರೂ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಜಾತ್ರೆ ಉತ್ಸವಗಳ ಬಗ್ಗೆ ಒಲವು ಹಾಗೆ ಇದೆ. ಭಕ್ತಜನ ಸಮುದಾಯದಿಂದ ಅದ್ಧೂರಿಯಾಗಿ ನಡೆಯುತ್ತಿವೆ. ಇಂತಹ ಆಚರಣೆಗೆ ಮತ್ತು ಸಂಪ್ರದಾಯಗಳಿಂದ ಅನುಭಾವಿಗಳು ತಮ್ಮ ಅಸ್ತಿತ್ವ ಉಳಿಸಿಕೊಂಡಿರುವುದು ಸ್ಪಷ್ಟವಾಗಿದೆ. ಜಾತ್ರೆ ಮತ್ತು ಉರುಸುಗಳು ಆಚರಣೆ ಮತ್ತು ಉತ್ಸವಗಳು ಸ್ನೇಹ ಸೌಹಾರ್ದತೆಯನ್ನು, ಸರ್ವಧರ್ಮ ಸಮನ್ವಯತೆಯನ್ನು, ಭಾಷಾ ಬಾಂಧವ್ಯವನ್ನು ಬೆಳೆಸುತ್ತಿರುವುದು ಸಮಾಜದ ಆರೋಗ್ಯಕರ ಬೆಳವಣಿಗೆಯಾಗಿ ಕಾಣುತ್ತಿದೆ.

ಭಕ್ತರ ಮನಸ್ಸಿನಲ್ಲಿ ಶಾಶ್ವತವಾಗಿ ಉಳಿದಿರುವುದು ಅನುಭಾವಿಗಳು ತೋರಿದರೆನ್ನಲಾದ ಮಹಿಮೆಗಳು ಮತ್ತು ನಂಬಿಕೆಗಳು. ಹಾಗೆಯೇ ಪುರಾಣ, ಚರಿತ್ರೆ, ಭಜನಾಪದ, ಸುಪ್ರಭಾತ, ನಾಮಾವಳಿ ಮೊದಲಾದ ಲಿಖಿತ ಮಾಹಿತಿಗಳು. ಇವುಗಳ ಮುಖಾಂತರ ಅವರ ಜೀವನ ಚರಿತ್ರೆಯನ್ನು ತಿಳಿಯುವುದರ ಜೊತೆಗೆ ಅವರು ಮಾಡಿದರೆನ್ನಲಾದ ಸಾಮಾಜಿಕ ಸಂವೇದನೆಯುಳ್ಳ ಮಹಿಮೆಗಳ ಕತೆಗಳಿವೆ. ಪುರಾಣ ಸಾಹಿತ್ಯದ ಅವಿಭಾಜ್ಯ ಅಂಗವಾಗಿ ಬೆಳೆದಿರುವ ಮಹಿಮೆಗಳ ವರ್ಣನೆಯ ಉದ್ದೇಶ ಜನಸಾಮಾನ್ಯರಿಗೆ ಅನುಭಾವಿಗಳ ಚರಿತ್ರೆ ಮತ್ತು ಅವರ ಮೌಲ್ಯಗಳನ್ನು ತಲುಪಿಸುವುದು. ಜನತೆಯಲ್ಲಿದ್ದ ಧಾರ್ಮಿಕ ಮೌಢ್ಯ, ಜಾತಿ-ಲಿಂಗ ತಾರತಮ್ಯ, ಆಡಂಬರ, ಅಹಂಕಾರ, ವಿಕೃತ ಮನಸ್ಸುಗಳಿಗೆ ಪ್ರೀತಿ ಕರುಣೆಯನ್ನು ತಿಳಿಸುವುದಾಗಿದೆ. ಈ ಮಹಾನುಭಾವಿಗಳ ಚರಿತ್ರೆಯನ್ನು ಕೇಳಿದ್ದ ಭಕ್ತರು ಅವರ ಬಗ್ಗೆ ಗೌರವ ಮೂಡಿ ಭಯ, ಭಕ್ತಿ, ನಿಷ್ಠೆ, ನಿಷ್ಕಲ್ಮಶವಾದ ಮನಸ್ಸಿನಿಂದ ಆದರ್ಶ ಜೀವನ ನಡೆಸುವ ಚಾರಿತ್ರ್ಯವನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬಹುದಾಗಿದೆ. ಮಹಾತ್ಮರ ಮಠ ಮತ್ತು ದರ್ಗಾಗಳಿಗೆ ಅಧಿಕಸಂಖ್ಯೆಯಲ್ಲಿ ನಡೆದುಕೊಳ್ಳುತ್ತಿರುವುದರ ಮೂಲ ಕಾರಣ ಇವರು ಅನೇಕ ಜನರಿಗೆ ಸಮಸ್ಯೆಗಳನ್ನು ಪರಿಹಾರ ಮಾಡಿರುವ ಮಹಾಮಹಿಮಾನುಭಾವಿಗಳು. ಇಂದಿಗೂ ಇವರ ಮಹಿಮಾ ಶಕ್ತಿ ಜೀವಂತವಾಗಿ ನಡೆಯುತ್ತಿದೆ ಎಂಬ ನಂಬಿಕೆಯಲ್ಲಿಯೇ ನಡೆದುಕೊಳ್ಳುತ್ತಿದ್ದಾರೆ. ಅನುಭಾವಿಗಳ ಪುರಾಣ- ಪ್ರವಚನಗಳಂತೆ ನಡೆದುಕೊಳ್ಳುತ್ತಿದ್ದಾರೆ. ಅನುಭಾವಿಗಳ ಪುರಾಣ ಚರಿತ್ರೆಯ ಕೃತಿಗಳನ್ನು ಓದಿ ಸರಿ ದಾರಿಯಲ್ಲಿ ನಡೆದ ಅನೇಕ ಭಕ್ತರಿದ್ದಾರೆ. ಅವರ ಕೃತಿಗಳಲ್ಲೆಲ್ಲ ಮುಖ್ಯವಾಗಿ ಮಹಿಮೆಗಳಿಗೆ ಹೆಚ್ಚು ಒತ್ತುಕೊಟ್ಟಿರುತ್ತಾರೆ. ಇದರಿಂದ ನಡೆದುಕೊಳ್ಳುವ ಭಕ್ತರ ಸಂಖ್ಯೆ ದಿನದಿಂದ ದಿನಕ್ಕೆ ಬೆಳೆಯುತ್ತಿದೆ.

ತಾಂತ್ರಿಕವಾಗಿ, ವೈಜ್ಞಾನಿಕವಾಗಿ ಮುಂದುವರೆದಿರುವಂತಹ ಈ ಕಾಲದಲ್ಲಿಯೂ ಕೆಲ ದುಷ್ಟ ಮನಸ್ಸಿನ ವ್ಯಕ್ತಿಗಳು ಕೆಲವು ಕಡೆಗಳಲ್ಲಿ ಈ ಮಹಾನುಭಾವಿಗಳ ಹೆಸರಿನಲ್ಲಿ ಮಠ

ಮಂದಿರಗಳನ್ನು ಕಟ್ಟಿಕೊಂಡು ಕಪಟ ಗುರು ಶಿಷ್ಯರಾಗಿ ಅನೇಕರು ವಾಮಚಾರದ ಹಾದಿಯಲ್ಲಿ ನಡೆಯುತ್ತಿದ್ದಾರೆ. ಗುರುಗಳ ಹೆಸರಿನಲ್ಲಿ ಅನೈತಿಕ ಕೆಲಸಗಳನ್ನು ನಡೆಸುತ್ತಿದ್ದಾರೆ. ತಮ್ಮ ಸ್ವಾರ್ಥಕ್ಕಾಗಿ ಭಕ್ತ ಜನತೆಯನ್ನು ದಾರಿತಪ್ಪಿಸಿ ದೈವತ್ವದ, ಸಂಸ್ಕೃತಿಯನ್ನು ಹಾಳು ಮಾಡುತ್ತಿದ್ದಾರೆ. ಭಕ್ತ ಜನರು ನೋಡಿಯೂ ನೋಡದೆ, ಕೇಳಿಯೂ ಕೇಳದ ಹಾಗೆ ಇರುವುದಕ್ಕಿಂತ ಅವರು ಸದಾ ಎಚ್ಚರದಿಂದರುವುದು ಅವಶ್ಯಕ.

ಅನುಭಾವಿಗಳು ಆಡಂಬರದ ಜೀವನಕ್ಕೆ ಆಸೆ ಪಟ್ಟವರಲ್ಲ. ದೇಹದ ಬಾಹ್ಯ ಸೌಂದರ್ಯಕ್ಕೆ ಪ್ರಾಮುಖ್ಯತೆ ನೀಡಿದವರಲ್ಲ. ಕಾಣಿಸಿದ್ದರೂ ಅವರ ಅಂತರಾತ್ಮ ಪರಮಾತ್ಮನ ಅನುಗ್ರಹದ ಭಿಕ್ಷಾಟನೆಯಲ್ಲಿತ್ತು. ದೈಹಿಕವಾಗಿ ಇವರು ನೋಡಲು ವಿಚಿತ್ರವಾಗಿ ಕಾಣಿಸಿದರೂ ಆಂತರಿಕವಾಗಿ ಸ್ವಚ್ಛಂದದಲ್ಲಿದ್ದರು. ಮಾನಸಿಕವಾಗಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡವರಾಗಿದ್ದರು. ತಮ್ಮ ನಾನಾ ರೀತಿಯ ಗಲಭೆಗಳು ನಡೆಯುತ್ತಿರುವಾಗ, ಧರ್ಮ ಸಾಮರಸ್ಯ, ಜಾತಿಗಳಲ್ಲಿ ಬಾಂಧವ್ಯ ಮೂಡಿಸುವಲ್ಲಿ ಅನುಭಾವಿಗಳು ತೋರಿದ ದಾರಿ ಅವರು ನಡೆದು ನುಡಿದ ರೀತಿ, ಅವರ ಪ್ರೀತಿ ಕರುಣೆ, ಶುದ್ಧ ಮನಸ್ಸಿನಿಂದ ಪರಮಾತ್ಮನನ್ನು ಪಡೆಯುವ ಮಾರ್ಗ ಈ ಸಂಸ್ಕೃತಿಯು ಅಗತ್ಯವಾದುದಾಗಿದೆ.

ಅನುಭಾವ ಪಂಥ, ಜಾತಿ, ಮತ ಧರ್ಮಗಳನ್ನು ಮೀರಿದ್ದು; ಕುವೆಂಪು ಅವರ ನುಡಿಗಳಲ್ಲಿ ಹೇಳುವುದಾದರೆ,

ಯಾವ ಮತದವನಲ್ಲ
ಎಲ್ಲ ಮತದವನು
ಯಾವ ಪಂಥವು ಇಲ್ಲ
ಬಹು ಪಂಥದವನು.

ಇದು ಅನುಭಾವ ಮಾರ್ಗದ ವೈಶಿಷ್ಟ್ಯವೆಂದು ಹೇಳಬಹುದಾಗಿದೆ. ಈ ಅನುಭಾವಿಗಳೆಲ್ಲರೂ ಒಂದೇ ಗುರು ಸಮಾನ ಮನೋಭಾವವನ್ನು ಹೊಂದಿದವರಾಗಿದ್ದಾರೆ.

ಒಟ್ಟಾರೆ ವಿಶಾಲ ಧಾರ್ಮಿಕ ನೀತಿ, ಜಾತ್ಯಾತೀತ ನಿಲುವು, ಸಾಮಾಜಿಕ ಮೌಲ್ಯಗಳು ಮತ್ತು ಮಾನವ ಕುಲವನ್ನು ಎತ್ತಿ ಹಿಡಿದ ಅನುಭಾವಿಗಳ ತತ್ವಸಂದೇಶ ಸರ್ವಕಾಲಕ್ಕೂ ಪ್ರಸ್ತುತವಾಗಿವೆ. ಈ ದಿಸೆಯಲ್ಲಿ ಅನುಭಾವಿಗಳ ಸಂಸ್ಕೃತಿಯನ್ನು ದೇಶೀಯ ನೆಲೆಗಟ್ಟಿನ ಆಧಾರದಲ್ಲಿ ಮೌಖಿಕ ಕಥೆಗಳ ಹಿನ್ನೆಲೆಯಲ್ಲಿ ಅವರ ಚಿಂತನೆಯನ್ನು ಅಧ್ಯಯನ ಮಾಡಬೇಕಾದ ಅನಿವಾರ್ಯತೆ ಇದೆ. ಈ ನಿಟ್ಟಿನಲ್ಲಿ ತುಂಗಭದ್ರಾ ನದಿ ಪ್ರಾಂತ್ಯದ ಅನುಭಾವ, ಸಾಹಿತ್ಯ (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ) ಅಧ್ಯಯನವನ್ನು ಕೈಗೊಳ್ಳಲಾಗಿದೆ.

*** ಅಧ್ಯಯನದ ಫಲಿತಗಳು**

೧. ಜನರು ಶ್ರೀಮಂತಿಕೆ, ವೈಭವದ ಜೀವನಕ್ಕಿಂತ ಮನಸಿನ ನೆಮ್ಮದಿ - ಸುಖ - ಸಂತೋಷಕ್ಕೆ ಹೆಚ್ಚಿನ ಮಹತ್ವ ಕೊಡುತ್ತಾರೆ ಎನ್ನುವುದು ಅನುಭಾವಿಗಳ ಅಧ್ಯಯನದಿಂದ ತಿಳಿದುಬರುತ್ತದೆ.

೨. ಅನುಭಾವಿಗಳ ಪವಾಡಗಳನ್ನು, ಸಿದ್ಧಿ ಸಾಧನೆಗಳನ್ನು ಜನರು ಗೌರವಿಸುತ್ತಾರೆ ಮತ್ತು ಅವರಲ್ಲಿ ದೈವತ್ವವನ್ನು ಕಾಣುತ್ತಾರೆ.

೩. ಬಳ್ಳಾರಿ ಜಿಲ್ಲೆಯಲ್ಲಿ ಪುರಾತನ ಕಾಲದಿಂದಲೂ ಅನುಭಾವ ಪರಂಪರೆ ಮುಂದುವರಿದು ಕೊಂಡು ಬಂದಿದೆ. ತಂತ್ರಜ್ಞಾನಗಳ ಅಭಿವೃದ್ಧಿ, ಜೀವನ ಶೈಲಿಯಲ್ಲಿ ಬದಲಾವಣೆಗಳೇನಾದರೂ ಪವಾಡ ಪುರುಷರ, ಮಹಾತ್ಮರ ಮೇಲಿನ ನಂಬಿಕೆಗಳು ಕಡಿಮೆಯಾಗಿಲ್ಲ.

೪. ನಾನಾ ಜಾತಿ - ಧರ್ಮ - ಪಂಥಗಳಿರುವ ಬಳ್ಳಾರಿ ಜಿಲ್ಲೆ ಸೌಹಾರ್ದತೆಗೆ, ಧರ್ಮಸಹಿಷ್ಣುತೆಗೆ ಹೆಸರುವಾಸಿಯಾಗಿದೆ. ಇದಕ್ಕೆ ಅನುಭಾವ ಪರಂಪರೆ - ನಂಬಿಕೆಗಳು ಸಾಕ್ಷಿಯಾಗಿವೆ.

೫. ಅನುಭಾವಿಗಳು ಜಾತ್ಯಾತೀತರು - ಧರ್ಮಾತೀತರು ಎಂಬುದನ್ನು ಜಿಲ್ಲೆಯ ಅನುಭಾವಿಗಳ ಭಕ್ತರು ದೃಢಪಡಿಸಿದ್ದಾರೆ.

೬. ಬಳ್ಳಾರಿ ಜಿಲ್ಲೆಯ ಜನರು ಧಾರ್ಮಿಕತೆಗೆ ಹೆಚ್ಚಿನ ಪ್ರಾಶಸ್ತ್ಯ ನೀಡುವುದನ್ನು ಗಮನಿಸಲಾಗಿದೆ. ಮಾನವೀಯ ಅಂತಃಕರಣ ಗುಣಗಳನ್ನು ಹೊಂದಿರುವ ಬಳ್ಳಾರಿ ಜಿಲ್ಲೆಯವರು ಅನುಭಾವಿಗಳ ಪವಾಡಗಳನ್ನು, ಸಿದ್ಧಿ - ಸಾಧನೆಗಳನ್ನು ಪೂಜನೀಯವಾಗಿ ಕಾಣುತ್ತಾರೆ - ಗೌರವಿಸುತ್ತಾರೆ.

೭. ಪೌರಾಣಿಕ - ಶಿಷ್ಟ ಆರಾಧನೆಗಳಿಗಿಂತ ದೇಸಿಯ, ಪಾರಂಪರಿಕ ಆರಾಧನೆ - ಆಚರಣೆ - ಸಂಪ್ರದಾಯಗಳಿಗೆ ಹೆಚ್ಚಿನ ಮನ್ನಣೆ ಬಳ್ಳಾರಿ ಜಿಲ್ಲೆಯಲ್ಲಿದೆ. ಅನುಭಾವಿಗಳ ಆರಾಧನಾ ಕೇಂದ್ರಗಳಿಂದ ಮತ್ತು ಸೇರುವ ಭಕ್ತರ ಸಂಖ್ಯೆಯಿಂದ ದೃಢಪಡಿಸಲು ಸಾಧ್ಯವಿದೆ.

೮. ಬಳ್ಳಾರಿ ಜಿಲ್ಲೆಯಲ್ಲಿನ ಅನುಭಾವ ಪರಂಪರೆಯ ಇತ್ತೀಚಿನ ಆಚರಣೆಗಳಲ್ಲಿ ಕೆಲವೊಂದು ಮೂಢನಂಬಿಕೆಗಳಿವೆ. ಅಂಥವುಗಳನ್ನು ಸಾರಾಸಗಟಾಗಿ ತಿರಸ್ಕರಿಸಲು ಭಕ್ತರು ಮನಸ್ಸು ಮಾಡಬೇಕು.

೯. ಅನುಭಾವ ಪರಂಪರೆಯಿಂದ, ಅನುಭಾವಿ ಸಾಹಿತ್ಯದಿಂದ, ಅನುಭಾವಿಗಳ ಪ್ರವಚನಗಳಿಂದ, ಅವರ ನಡೆ - ನುಡಿ, ಜೀವನ ಶೈಲಿಯಿಂದ ಇಂದಿನ ಯುವ ಪೀಳಿಗೆಗೆ ಮಾರ್ಗದರ್ಶಿ ಯಾಗುವಂಥ ಅನೇಕ ಅಂಶಗಳಿವೆ. ಅವುಗಳನ್ನು ಹಿರಿ ತಲೆಮಾರು ಕಿರಿ ತಲೆಮಾರಿಗೆ ಮನದಟ್ಟು ಮಾಡುವ ಅವಶ್ಯಕತೆಯಿದೆ.

೧೦. ಕಠಿಣ ಸಾಧನೆಗಳಿಂದ ಅನುಭಾವಿಗಳಾದರೆ, ಇತ್ತೀಚಿನ ದಿನಗಳಲ್ಲಿ ಸಾಧನೆಗಳಿಲ್ಲದೇ ನಕಲಿ ಅನುಭಾವಿಗಳಿರುವುದನ್ನು ಅಧ್ಯಯನದಿಂದ ತಿಳಿಯಲಾಗಿದೆ.

೧೧. ೨೧ನೇ ತಾಂತ್ರಿಕ ಯುಗ, ಜಾಗತೀಕರಣದ ಯುಗವೆನ್ನುವ ಈ ಶತಮಾನದಲ್ಲೂ ಜಾಗತೀಕರಣದ ಈ ಸಂದರ್ಭದಲ್ಲಿಯೂ ಅನುಭಾವಿಗಳ ಕ್ಷೇತ್ರಗಳು ತಮ್ಮ ಅಸ್ತಿತ್ವವನ್ನು ಗಟ್ಟಿ ಮಾಡಿಕೊಂಡಿರುವುದನ್ನು ಅಧ್ಯಯನದ ಮೂಲಕ ಗಮನಿಸಲಾಗಿದೆ.

೧೨. ಬಳ್ಳಾರಿ ಜಿಲ್ಲೆಯಲ್ಲಿನ ಅನೇಕ ಪಂಥ, ಜಾತಿ, ವರ್ಗ, ಧರ್ಮದವರೆಲ್ಲ ಒಂದೇ ಸೂರಿನಡಿ ಸೇರಿ ಜ್ಞಾನದಾಸೋಹ, ಅನ್ನದಾಸೋಹಗಳಂಥ ಕಲ್ಯಾಣ ಕಾರ್ಯಕ್ರಮಗಳಲ್ಲಿ ಭಾಗಿಯಾಗಿರುವುದನ್ನು ಅನುಭಾವಿಗಳ ಅಧ್ಯಯನದಿಂದ ತಿಳಿಯಲಾಗಿದೆ.

೧೩. ಸಮಕಾಲೀನ ಸಂದರ್ಭದಲ್ಲಿ ಜಾತಿ, ಮತ, ಕೋಮುಗಳ ವಿಷಯದಲ್ಲಿ ಸಂಘರ್ಷ ಭಿನ್ನಾಭಿಪ್ರಾಯ ಬಿಕ್ಕಟ್ಟುಗಳು ಉಂಟಾಗುತ್ತಿರುವ ಈ ಕಾಲಘಟ್ಟದಲ್ಲಿ ಇಂಥ ಕ್ಷೇತ್ರಗಳ ಮೂಲಕ ಅನುಭಾವದ ತಾತ್ವಿಕತೆಯ ಮೂಲಕ ಮಾನವ ಜಾತಿ ಒಂದೇ ಎನ್ನುವ ಐಕ್ಯಮಂತ್ರವನ್ನು ರೂಢಿಸುತ್ತಿರುವುದು ಆಶಾದಾಯಕ ಬೆಳವಣಿಗೆ. ಅನುಭಾವಿಗಳ ಬದುಕು, ಬರಹ, ಸಂದೇಶಗಳು ಇನ್ನೂ ಹೆಚ್ಚಿನ ಅಧ್ಯಯನಕ್ಕೆ ಒಳಗೊಳ್ಳಬೇಕಿದೆ.



## ಅನುಬಂಧಗಳು

೧. ವಕ್ತೃ ಮಾಹಿತಿ
೨. ಪರಾಮರ್ಶನ ಗ್ರಂಥಗಳು
೩. ಛಾಯಾಚಿತ್ರಗಳು

# ೧. ವಕ್ತೃ ಮಾಹಿತಿ

| ಕ್ರಸಂ. | ಹೆಸರು | ಊರು | ವೃತ್ತಿ | ವಯಸ್ಸು | ಶಿಕ್ಷಣ |
|---|---|---|---|---|---|
| ೧. | ವಾಗೀಶ | ಬಳ್ಳಾರಿ | ವ್ಯಾಪಾರಿ | ೫೫ ವರ್ಷ | ಪಿ.ಯು.ಸಿ. |
| ೨. | ಮೂಗುತಿ ಸಣ್ಣ ರುದ್ರಪ್ಪ | ಕುರುಗೋಡು | ಕೃಷಿಕ | ೮೦ ವರ್ಷ | ಆರನೇ ತರಗತಿ |
| ೩. | ವೀರೇಶ ಸ್ವಾಮಿ | ಸಿಂಧೀಗೇರಿ | ಅರ್ಚಕ ಮತ್ತು ರೈತ | ೬೨ ವರ್ಷ | ಐದನೇ ತರಗತಿ |
| ೪. | ಕಾನಮಡಗು ದಾ.ಮ.ಐಮಡಿ ಶರಣಾರ್ಯರು | ಕಾನಮಡಗು | ಧರ್ಮಾಧಿಕಾರಿಗಳು | ೫೫ ವರ್ಷ | ಪಿ.ಯು.ಸಿ |
| ೫. | ಈಶ್ವರಯ್ಯ | ಗದ್ದಿಕೆರೆ | ಅರ್ಚಕ | ೪೬ ವರ್ಷ | ಪಿ.ಯು.ಸಿ. |
| | ಹಿರೇಮಠ್ | | ರೈತ | ೩೫ ವರ್ಷ | ಸ್.ಎಸ್.ಎಲ್.ಸಿ. |
| | ಬಸವರೆಡ್ಡಿ | | ರೈತ | ೩೫ | ೩ನೇ ತರಗತಿ |
| | ಮೀಗೇರಿ ವಾಸಪ್ಪ | | | ೬೬ ವರ್ಷ | |
| ೬. | ಆಜಾಮ್ ಪಾಷಾ ಸಾಹೇಬ್ (ಸಜ್ಜದಾ ನಷೀಮ್ ದಿವಾನಾಖಾನ್) | ಕಂಪ್ಲಿ | ದರ್ಗಾದ ಗುರು | ೪೫ ವರ್ಷ | ಪಿ.ಯು.ಸಿ. |
| ೭. | ಸೈಯದ್ ಮಸೂರ್ ಗುಲಾಮ್ ಆಲಂ ವಾದ್ ಖಾದ್ರಿ | ಹೊಸಪೇಟೆ | ದರ್ಗಾದಲ್ಲಿ ಪೂಜಾರಿಗಳು | ೩೮ ವರ್ಷ | ಎಸ್.ಎಸ್.ಎಲ್.ಸಿ. |
| ೮. | ವಾಲೇ ಸಾಬ್ | ಕುಡುತಿನಿ | ದರ್ಗಾದಲ್ಲಿನ ಅನುಭವಿಗಳು | ೯೨ ವರ್ಷ | ಅನುಭವಿ |
| ೯. | ಸೈಯದ್ ಮುನಾವಾರ್ | ಉಜ್ಜಯಿನಿ | ದರ್ಗಾದ ಪೂಜಾರಿ | ೫೫ ವರ್ಷ | |
| ೧೦. | | ಬಳ್ಳಾರಿ | ದರ್ಗಾದ ಗುರುಗಳು | ೫೫ ವರ್ಷ | ಎಸ್.ಎಸ್.ಎಲ್.ಸಿ. |

| | | | | | |
|---|---|---|---|---|---|
| ೧೧. | ತುಕಾರಾಮ | ಕುರುಗೋಡು | ವ್ಯಾಪಾರಿ | ೪೫ ವರ್ಷ | ಎಸ್.ಎಸ್.ಎಲ್.ಸಿ |
| ೧೨. | ವೈ. ಹನುಮಂತರೆಡ್ಡಿ | ಸಿಂಧಿಗೇರಿ | ಶಿಕ್ಷಕ | ೭೫ ವರ್ಷ | ಪದವೀಧರ |
| ೧೩. | ಮಲ್ಲಪ್ಪ | ಬಳ್ಳಾರಿ | ವಾಹನ ಚಾಲಕ | ೭೦ ವರ್ಷ | ೩ನೇ ತರಗತಿ |
| ೧೪. | ರಮಾಬಾಯಿ | ಬಳ್ಳಾರಿ | ಗೃಹಿಣಿ | ೫೨ ವರ್ಷ | ೨ನೇ ತರಗತಿ |
| ೧೫. | ನಾಗರತ್ನ | ಬಳ್ಳಾರಿ | ಗೃಹಿಣಿ | ೪೫ ವರ್ಷ | ೭ನೇ ತರಗತಿ |
| ೧೬. | ಸುಭಾಷ್ ಚಂದ್ರ | ಕಾನಮಡಗು | ವ್ಯಾಪಾರಿ | ೪೨ ವರ್ಷ | ೧೦ನೇ ತರಗತಿ |
| ೧೭. | ಶರಣಬಸಪ್ಪ | ಕಾನಮಡಗು | ವ್ಯಾಪಾರಿ | ೫೫ ವರ್ಷ | ೪ನೇ ತರಗತಿ |
| ೧೮. | ಯಂಕಣ್ಣ | ಗದ್ದಿಕೇರಿ | ರೈತ | ೪೦ ವರ್ಷ | ೨ನೇ ತರಗತಿ |
| ೧೯. | ದೇವಪ್ಪ | ಕಂಪ್ಲಿ | ಶಿಕ್ಷಕರು | ೫೨ ವರ್ಷ | ಪದವೀಧರ |
| ೨೦. | ನಾರಾಯಣ | ಉಜ್ಜನಿ | ಶಿಕ್ಷಕರು | ೫೫ ವರ್ಷ | ಪದವೀಧರ |
| ೨೧. | ರೇಣುಕ | ಕುಡುತಿನಿ | ಗೃಹಿಣಿ | ೫೮ ವರ್ಷ | ಪಿ.ಯು.ಸಿ. |
| ೨೨. | ಭಾಗ್ಯಮ್ಮ | ಬಳ್ಳಾರಿ | ಶಿಕ್ಷಕ | ೫೬ ವರ್ಷ | ಪದವೀಧರ |
| ೨೩. | ಮೌನೇಶ | ಬಳ್ಳಾರಿ | ಶಿಕ್ಷಕ | ೫೬ ವರ್ಷ | ಪದವೀಧರ |
| ೨೪. | ಎರ್ರಿಸ್ವಾಮಿ | ಬಳ್ಳಾರಿ | ವ್ಯಾಪಾರಿ | ೫೮ ವರ್ಷ | ೮ನೇ ತರಗತಿ |
| ೨೫. | ಮಾರುತಿ | ಕುಡುತಿನಿ | ಗುಮಾಸ್ತ | ೫೩ ವರ್ಷ | ೧೦ನೇ ತರಗತಿ |
| ೨೬ | ಮಹೇಶಪ್ಪ | ಕುಡುತಿನಿ | ಶಿಕ್ಷಕರು | ೫೨ ವರ್ಷ | ಪದವೀಧರ |
| ೨೭ | ಬಸವಪ್ಪ | ಗದ್ದಿಕೇರಿ | ವ್ಯಾಪಾರಸ್ಥ | ೬೨ ವರ್ಷ | ೮ನೇ ತರಗತಿ |
| ೨೮. | ಬಸಮ್ಮ | ಗದ್ದಿಕೇರಿ | ಗೃಹಿಣಿ | ೫೬ ವರ್ಷ | ೧೦ನೇ ತರಗತಿ |

| | | | | | |
|---|---|---|---|---|---|
| ೨೯. | ವಲಿಸಾಬ್ | ಉಜ್ಜನಿ | ಶಿಕ್ಷಕರು | ೫೮ ವರ್ಷ | ಪದವೀಧರ |
| ೩೦. | ವಹೀದಾ | ಕಂಪ್ಲಿ | ಶಿಕ್ಷಕರು | ೪೮ ವರ್ಷ | ಪದವೀಧರ |
| ೩೧. | ಭಾಷ | ಹೊಸಪೇಟೆ | ವ್ಯಾಪಾರಿ | ೬೨ ವರ್ಷ | ೮ನೇ ತರಗತಿ |
| ೩೨. | ಖಾದರ್ ಖಾನ್ | ಹೊಸಪೇಟೆ | ವ್ಯಾಪಾರಿ | ೭೨ ವರ್ಷ | ೯ನೇ ತರಗತಿ |
| ೩೩. | ಹುಸೇನ್ | ಹೊಸಪೇಟೆ | ಶಿಕ್ಷಕರು | ೪೮ ವರ್ಷ | ಪದವೀಧರ |
| ೩೪. | ಲಕ್ಷ್ಮಿದೇವಿ | ಕಾನಮಡಗು | ಗೃಹಿಣಿ | ೫೨ ವರ್ಷ | ೩ನೇ ತರಗತಿ |
| ೩೫. | ನೀಲಮ್ಮ | ಕುರುಗೋಡು | ಗೃಹಿಣಿ | ೪೬ ವರ್ಷ | ಪಿ.ಯು.ಸಿ. |
| ೩೬ | ನೀಲಪ್ಪ | ಕುರುಗೋಡು | ರೈತ | ೬೪ ವರ್ಷ | ೨ನೇ ತರಗತಿ |
| ೩೭ | ಮಹಮ್ಮದ್ | ಕುಡುತಿನಿ | ವ್ಯಾಪಾರಿ | ೬೫ ವರ್ಷ | ೩ನೇ ತರಗತಿ |
| ೩೮. | ರಜಿಯಾ ಬೇಗಂ | ಕುಡುತಿನಿ | ಗೃಹಿಣಿ | ೬೨ ವರ್ಷ | ೨ನೇ ತರಗತಿ |
| ೩೯. | ಕೃಷ್ಣಪ್ಪ | ಕಾನಮಡಗು | ವ್ಯಾಪಾರಿ | ೬೪ ವರ್ಷ | ೮ನೇ ತರಗತಿ |
| ೪೦. | ಮರಿಸ್ವಾಮಿ | ಬಳ್ಳಾರಿ | ಶಿಕ್ಷಕ | ೪೯ ವರ್ಷ | ಪದವೀಧರ |
| ೪೧. | ಮಲ್ಲಪ್ಪ | ಸಿಂಧಿಗೇರಿ | ರೈತ | ೫೨ ವರ್ಷ | ೨ನೇ ತರಗತಿ |



## ೨. ಪರಾಮರ್ಶನ ಗ್ರಂಥಗಳು


ಅ. **ಕೃತಿಗಳು**

೧. ಅಮರೇಶ ನುಗಡೋಣಿ(ಸಂ), **ಶೂನ್ಯ ಸಂಪಾದನೆಗಳು: ಸಾಂಸ್ಕೃತಿಕ ಮುಖಾಮುಖಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೨. ಅಮರೇಶ ನುಗಡೋಣಿ, **ನುಡಿವ ಬೆಡಗು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೩. ಅಮರೇಶ ನುಗಡೋಣಿ, **ಹೈದರಾಬಾದು ಕರ್ನಾಟಕ ಹಾಡು-ಹಾಡು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೪. ಅಮರೇಶ ನುಗಡೋಣಿ, **ತತ್ವಪದ ಸಾಹಿತ್ಯ ಅಧ್ಯಯನ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪.

೫. ಅಯ್ಯನಗೌಡ ಎಸ್.ವಿ., **ಸಂಶೋಧನ ದೀಪ್ತಿ,** ಶ್ರೀ ಜ.ಗಂ. ಧರ್ಮ ಪ್ರಚಾರಕ ಮಂಡಳಿ ಮೂರು ಸಾವಿರ ಮಠ, ಹುಬ್ಬಳ್ಳಿ, ೧೯೯೪.

೬. ಅಬ್ದುಲ್ ಹಮೀದ್, **ಸೂಫಿ ಪಥ ಮತ್ತು ಶರಣ ಪಥಗಳ ತೌಲನಿಕ ಅಧ್ಯಯನ,** ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೯೮.

೭. ಅನಂತಮೂರ್ತಿ ಯು.ಆರ್.(ಸಂ), **ವೀರಶೈವ ಧರ್ಮದರ್ಶನ,** ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೩.

೮. **ಅಮರನಾಥ ಶಾಸ್ತ್ರಿಗಳು ಎಮ್ಮಿಗನೂರು ಜೇಡೆಸಿದ್ಧ ಶಿವಯೋಗಿಗಳ ಪುರಾಣವು,** ಶ್ರೀ ಪ್ರಣವಜ್ಯೋತಿ ಪ್ರಕಾಶನ, ಮೆಟ್ರಿ ೧೯೭೫.

೯. ಅನಸೂಯಮ್ಮ ಶರಣಪ್ಪ ಕೆ. ಆಲೂರು, **ಶ್ರೀ ಕ್ಷೇತ್ರ ಕಾನಾಮಡುವಿನ ಶ್ರೀ ಶರಣಾರ್ಯರ ಸುಪ್ರಭಾತ ಮತ್ತು ಭಕ್ತಿಗೀತೆಗಳು,** ಶ್ರೀ ಕ್ಷೇತ್ರ ಕಾನಾಮಡಗು, ೧೯೮೬.

೧೦. ಉಪಾಧ್ಯ ಜಿ.ಎನ್., **ಅನುಭಾವ ಸಾಹಿತ್ಯದ ವಿಭಿನ್ನ ನೆಲೆಗಳು,** ಕನ್ನಡ ವಿಭಾಗ, ಮುಂಬೈ ವಿಶ್ವವಿದ್ಯಾಲಯ, ಮುಂಬಯಿ, ೨೦೧೧.

೧೧. ಉಮಾಪತಿ ಎಸ್., **ಶರಣ ಸಂಪದ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪

೧೨. ಕಲಬುರ್ಗಿ ಎಂ.ಎಂ., **ಮಾರ್ಗ – ೧,** ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ೧೯೮೮.

೧೩. ಕಲಬುರ್ಗಿ ಎಂ.ಎಂ., **ಮಾರ್ಗ – ೩,** ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ೧೯೯೮.

೧೪. **ಕನ್ನಡ ತತ್ವಪದಕಾರರು, ವಿವಿಧ ಲೇಖಕರು,** ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು, ೧೯೯೩.

೧೫. **ಕರ್ನಾಟಕ - ಕನ್ನಡ,** ವಿವಿಧ ಲೇಖಕರು, **ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೧೬. ಕರಿಬಸಪ್ಪ .ಎ., **ಬಳ್ಳಾರಿ ಜಿಲ್ಲೆಯ ಐತಿಹ್ಯಗಳು,** ಸಾಯಿಮಣಿ ಪ್ರಕಾಶನ, ಹೊಸಪೇಟೆ, ೨೦೦೯.

೧೭. ಕಲಬುರ್ಗಿ ಎಂ.ಎಂ., **ಬಸವಣ್ಣನವರ ವಚನ ಸಂಪುಟ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೩.

೧೮. ಕಲಬುರ್ಗಿ ಎಂ.ಎಂ., **ಮಾರ್ಗ, ಸಂಪುಟ - ೪,** ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೪.

೧೯. ಕರಿಯಪ್ಪ ಮಾಳಿಗಿ ಜೆ., **ಬಳ್ಳಾರಿ ಜಿಲ್ಲೆಯ ಅವಧೂತರು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮.

೨೦. ಕಾಪಸೆ, ಜಿ.ಎಸ್. ಕಂಠಿ(ಸಂ), **ಚಿದಾನಂದಾವಧೂತ: ಜ್ಞಾನ ಸಿಂಧು,** ಶ್ರೀ ಹುರಕಡ್ಲಿ ಅಜ್ಜ ಶಿಕ್ಷಣ ಸಮಿತಿ, ಧಾರವಾಡ, ೧೯೯೦.

೨೧. ಕೃಷ್ಣಮೂರ್ತಿ ಮ.ಸು., **ಸಿದ್ಧ ಸಾಹಿತ್ಯ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೨೨. ಕೃಷ್ಣಮೂರ್ತಿ ಮ.ಸು., **ಉತ್ತರದ ಸಂತ ಪರಂಪರೆ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೩.

೨೩. ಕೃಷ್ಣಮೂರ್ತಿ ಮ.ಸು., **ಸೂಫಿ ಪ್ರೇಮ ಕಾವ್ಯ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೯೫.

೨೪. ಗಂಗಾಧರ ಪತ್ತಾರ(ಸಂ), **ಶರಣಾಂಬುಧಿ,** ಅಖಿತ ಭಾರತ ಶರಣ ಸಾಹಿತ್ಯ ಪರಿಷತ್ತು, ಬಳ್ಳಾರಿ ಘಟಕ, ೨೦೦೦.

೨೫. ಗದ್ದಿಗಿಮಠ ಬಿ.ಎಸ್.(ಸಂ), **ಕನ್ನಡ ಜನಪದ ಗೀತೆಗಳು,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೫೭.

೨೬. ಗಿರಿಜಾಪತಿ ಎನ್.ಎಂ., **ವಚನ ರತ್ನತ್ರಯರು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪.

೨೭. ಗುಂಡಪ್ಪ ಎಲ್.(ಸಂ), **ಆದಿಪುರಾಣ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೫೭

೨೮. **ಗುರುಸಿದ್ಧ ಶಿವಾಚಾರ್ಯರು: ಮಹಾಮಹಿಮೆ ಚಡೆಯೋಗೀಶ್ವರ ಚರಿತ್ರೆ,** ಶ್ರೀ ಹಂಪಿ ಸಾವಿರ ದೇವರು ಮಹಾಂತಿನಮಠ.

೨೯. ಗೋಪಾಲಯ್ಯ ಕೆ.ಎಚ್., **ಪುರಾಣ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೦.

೩೦. **ಚನ್ನಬಸವೇಶ್ವರ. ಶಿ.ವ: ಚೆಳ್ಳಗುರಿಕೆ ಶ್ರೀ ಎರ್ರಿಸ್ವಾಮಿಗಳ ಲೀಲಾವಿಲಾಸ,** ಚೆಳ್ಳಗುರಿಕೆ ಶ್ರೀ ಎರ್ರಿಸ್ವಾಮಿಗಳ ಜೀವಸಮಾಧಿ, ಚೆಳ್ಳಗುರಿಕೆ, ೧೯೬೫

೩೧. ಚನ್ನಬಸಪ್ಪ ಶಿವಬಸಪ್ಪ ಕಲ್ಮಂಗಿ, **ಮಹಾಮಹಿಮ ಯಮ್ಮಿಗನೂರು ಶ್ರೀ ಜಡೇಸಿದ್ಧೇಶ್ವರ ಶತಕವು,** ಶ್ರೀ ಜಡೇಸಿದ್ಧೇಶ್ವರ ಶಿವಯೋಗಾಶ್ರಮ, ಕಾಕಬಾಳು, ಹೊಸಪೇಟೆ, ೧೯೮೭

೩೨. ಚನ್ನವೀರಪ್ಪ ಎಸ್.ಆರ್.(ಸಂ), **ಸ್ವರವಚನ ತರಂಗ,** ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೦.

೩೩. ಚನ್ನಕ್ಕ ಪಾವಟೆ, **ವಚನ ಸಂಗಮ,** ಅಕ್ಕ ಪ್ರಕಾಶನ, ಕುಣಿಗಲ್, ೨೦೧೦.

೩೪. ಚಿತ್ಕಲ ರವಿ, **ಅನುಭಾವ ಜ್ಯೋತಿಗಳು,** ಪ್ರಕಾಶಕರು, ಚಿತ್ಕಲ ರವಿ, ೨೦೦೦.

೩೫. ಚಿದಾನಂದಮೂರ್ತಿ ಎಂ.. **ಸಂಶೋಧನೆ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೭.

೩೬. ಜವರೇಗೌಡ, **ಜಾನಪದ ಅಧ್ಯಯನ,** ವಿ.ಕೆ. ಮೂರ್ತಿ, ಮೈಸೂರು, ೧೯೭೮.

೩೭. ಜೋಳದರಾಶಿ ದೊಡ್ಡನಗೌಡ(ಸಂ), **ಚಳ್ಳಗುರಿಕೆ ಶ್ರೀ ಎರ್ರಿಸ್ವಾಮಿಗಳು, ಶಿವಮಯ ಜೀವನ ಚರಿತ್ರೆ ಮತ್ತು ತಿಕ್ಕಯ್ಯ ಅವಧೂತರು ವಿರಚಿತ ಭಕ್ತಿಗೀತೆಗಳು,** ಟ್ರಸ್ಟ್ ಕಮಿಟಿ, ಶ್ರೀ ಎರ್ರಿಸ್ವಾಮಿ ಜೀವಸಮಾಧಿ ಮಠ, ಚೆಳ್ಳಗುರಿಕೆ, ೨೦೦೮.

೩೮. ತಿಪ್ಪೇರುದ್ರಸ್ವಾಮಿ ಹೆಚ್., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಡಿ.ವಿ.ಕೆ. ಮೂರ್ತಿ, ಮೈಸೂರು ೧೯೯೭.

೩೯. ತಿಪ್ಪೇರುದ್ರ ಸ್ವಾಮಿ ಹೆಚ್., **ವಚನಗಳಲ್ಲಿ ವೀರಶೈವ ಧರ್ಮ,** ಡಿ.ವಿ.ಕೆ. ಮೂರ್ತಿ, ಮೈಸೂರು, ೧೯೬೯.

೪೦. ತಿಪ್ಪೇಸ್ವಾಮಿ, **ಶರಣರು ಮತ್ತು ಸಂತರು,** ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು, ೧೯೯೮

೪೧. ತಿಪ್ಪೇರುದ್ರಸ್ವಾಮಿ ಹೆಚ್., **ಶರಣರ ಅನುಭಾವ ಸಾಹಿತ್ಯ,** ಡಿ.ವಿ.ಕೆ. ಮೂರ್ತಿ, ಮೈಸೂರು, ೧೯೯೧.

೪೨. ತಿಪ್ಪೇರುದ್ರಸ್ವಾಮಿ ಹೆಚ್., **ಶೂನ್ಯ ಸಂಪಾದನೆ,** ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ೧೯೭೩.

೪೩. ದಯಾನಂದ ಕೆ.ಎ., **ಕರ್ನಾಟಕದ ಪರಂಪರೆ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೭೦.

೪೪. ದಾಸೇಗೌಡ, **ನಮ್ಮ ಜನಪದ ನಂಬಿಕೆಗಳು,** ಪ್ರಸಾರಾಂಗ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೩.

೪೫. ದೇವುಡು ನರಸಿಂಹ ಶಾಸ್ತ್ರಿ ಮತ್ತು ಶಿವಮೂರ್ತಿ,(ಸಂ), **ಜೈಮಿನಿ ಭಾರತ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ನೃಪತುಂಗ ರಸ್ತೆ, ಬೆಂಗಳೂರು.

೪೬. ದೊಡ್ಡನಗೌಡರು ಜೋಳದರಾಶಿ, **ಚೆಳ್ಳಗುರ್ಕಿ ಎರ್ರಿತಾತ,** ಎ.ಬಿ.ಹೆಚ್. ಪ್ರಕಾಶನ, ಬೆಂಗಳೂರು, ೧೯೮೧.

೪೭. ದೊಡ್ಡನಗೌಡರು ಜೋಳದರಾಶಿ(ಸಂ), **ಚೆಳ್ಳಗುರ್ಕಿ ಎರ್ರಿತಾತನವರ ಶಿವಮಯ ಜೀವನ ಚರಿತ್ರೆ ಮತ್ತು ತಿಕ್ಕಾವಧೂತರ ಭಕ್ತಿಗೀತೆಗಳು,** ಶ್ರೀ ಎರ್ರಿತಾತನವರ ಜೀವಸಮಾಧಿ ಕ್ಷೇತ್ರ, ಚೇಳ್ಳಗುರಿಕೆ ೧೯೭೪

೪೮. ನಂಜುಂಡಪ್ಪ, ವೈ.ವಿ., **ಶಿವಯೋಗಿ ಶ್ರೀ ಜಿನಕಲ್ಲು, ಸಿದ್ಧೇಶ್ವರ,** ಸಿದ್ಧ ಸಾಹಿತ್ಯ ಪ್ರಕಾಶನ, ಅರಸೀಕೆರೆ, ೧೯೯೯

೪೯. ನರಸಿಂಹಾಚಾರ್ ಆರ್., **ಕರ್ನಾಟಕ ಕವಿ ಚರಿತೆ, ಸಂಪುಟ–೨,** ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು, ೧೯೭೩.

೫೦. ನಾಗೇಶ ಶಾಸ್ತ್ರಿಗಳು ವೈ., **ಲೀಲಾಮೃತ, ಶ್ರೀ ಎರ್ರಿಸ್ವಾಮಿಗಳ ಜೀವಸಮಾಧಿ ಕ್ಷೇತ್ರ,** ಚೆಳ್ಳಗುರಿಕೆ ೧೯೬೬.

೫೧. ನಾಗೇಶ ಶಾಸ್ತ್ರಿಗಳು ವೈ., **ಶ್ರೀ ಮರಿಯೋಗೀಶ್ವರ ಪುರಾಣ,** ಶ್ರೀ ನಿ.ಪ್ರಸ್ವ ಮಹಂತಸ್ವಾಮಿಗಳು, ಶ್ರೀ ಗುರುಮೃತ್ಯುಂಜಯ ಸ್ವಾಮಿಗಳು, ಶ್ರೀ ಮುರುಗ ಮಠ, ಧಾರವಾಡ, ೧೯೭೦.

೫೨. ನಾಗಯ್ಯ ಜೆ.ಎಂ., **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ,** ಲೋಹಿಯ ಪ್ರಕಾಶನ, ಬಳ್ಳಾರಿ, ೨೦೦೨.

೫೩. ನಾರಾಯಣ ಶಾಸ್ತ್ರಿ ಗೋಕರ್ಣ, **ಭಾರತದ ಸರ್ವಧರ್ಮ ಸಾಧುಸಂತರು,** ಸಮಾಜ ಪುಸ್ತಕಾಲಯ, ಧಾರವಾಡ, ೨೦೦೪.

೫೪. ನಾಯಕ, ಹಾ.ಮಾ., **ಜಾನಪದ ಸ್ವರೂಪ,** ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು, ೧೯೭೧.

೫೫. ಪುಟ್ಟಪ್ಪ ಕೆ.ವಿ.(ಸಂ), **ಯುಗಯಾತ್ರಿ ಭಾರತೀಯ ಸಂಸ್ಕೃತಿ, ಸಂಪುಟ–೧,** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೦.

೫೬. ಪುಲುಮತಿ ಶ್ಯಾಮರಾವ್, **ವಿಜಯನಗರದ ಕಲೆ ಮತ್ತು ಸಾಹಿತ್ಯ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೫೬.

೫೭. ಪೂಜಾರ್ ವ್ಹಿ.ಜಿ., **ವೀರಶೈವ ಸಾಹಿತ್ಯದಲ್ಲಿ ಪವಾಡ ಕಥೆಗಳು,** ಪುಸ್ತಕ ಅಕಾಡೆಮಿ, ಕಲುಬುರ್ಗಿ, ೧೯೯೧

೫೮. ಪ್ರಭಾನಂದ ಪಂಡಿತರು, **ಸಿಂಧಿಗೇರಿ ಶ್ರೀ ಶಿವಶರಣ ಮಲ್ಲೇಶ್ವರನ ಪುರಾಣವು,** ಕೆ. ಗುರುಪಾದಪ್ಪ ಸಿಂಧಿಗೇರಿ ೧೯೮೭

೫೯. ಪ್ರೇಮಾನಂದ, **ವಿಜ್ಞಾನ ಮತ್ತು ಪವಾಡಗಳು**(ಅನು), ಪಾಂಡುರಂಗ ಶಾಸ್ತ್ರಿ, ಸೀತಾರಾಮ್ ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೭

೬೦. ಬಸಣ್ಣಶಾಸ್ತ್ರಿ, **ಸಿಂಧಿಗೇರಿ ಶರಣ ಶ್ರೀ ಮಲ್ಲಪ್ಪತಾತನ ಜೀವನ ಚರಿತ್ರೆ: ಕರ್ಚೇಡು.**

೬೧. ಬಸವರಾಜ್ ಬಿ.ಸಿ., **ಚೆಳ್ಳಗುರ್ಕಿ ಶ್ರೀ ಎರ್ರಿಸ್ವಾಮಿಗಳು,** ತ್ರಿವೇಣಿ ಪಬ್ಲಿಕೇಷನ್ಸ್, ಚಾಮರಾಜನಗರ, ಮೈಸೂರು, ೧೯೯೯

೬೨. ಬಸವರಾಜ್ ಎಲ್.(ಸಂ), **ಶಿವಗಣ ಪ್ರಸಾದಿ ಮಹಾದೇವಯ್ಯಗಳ ಶೂನ್ಯ ಸಂಪಾದನೆ,** ಶ್ರೀ ಬೃಹನ್ಮಠ ಸಂಸ್ಥಾನ, ಚಿತ್ರದುರ್ಗ, ೧೯೬೯

೬೩. ಬಸವರಾಜ್ ಕಲ್ಗುಡಿ, **ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫.

೬೪. ಬಸವರಾಜ ಕಲ್ಗುಡಿ, **ಅನುಭಾವ ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ,** ಕೆ.ವಿ. ಪ್ರಗತಿ ಪ್ರಕಾಶನ, ಬೆಂಗಳೂರು, ೧೯೮೮.

೬೫. ಬಸವರಾಜ ಸಬರದ(ಸಂ), **ಹೈದರಾಬಾದ್ ಕರ್ನಾಟಕದ ತತ್ತ್ವಪದಕಾರರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೬೬. ಬಸವರಾಜ ಸಬರದ, **ಗುಲಬರ್ಗಾ ಜಿಲ್ಲೆಯ ಅನುಭಾವದ ಕವಿಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೫.

೬೭. ಬಸವರಾಜ ಸಬರದ, **ಶರಣರು ಮತ್ತು ದಾಂಪತ್ಯ,** ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲ್ಬರ್ಗ, ೨೦೧೧.

೬೮. ಬಸವರಾಜ ಎಲ್., **ನಿಜಗುಣ ಶಿವಯೋಗಿಯ ತತ್ತ್ವದರ್ಶನ,** ಶ್ರೀ ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು ೧೯೯೧.

೬೯. ಬಸವಲಿಂಗ ಪಟ್ಟದೇವರ, **ಕಲ್ಯಾಣ ದೀಪ್ತಿ,** ಬಸವಲಿಂಗ ಪಟ್ಟದೇವರು ಹಿರಿಯ ಮಠ ಸಂಸ್ಥಾನ, ಭಾಲ್ಕಿ, ೨೦೧೪.

೭೦. ಬೇಲೂರು ಕೇಶವದಾಸರು, **ಶ್ರೀ ಕರ್ನಾಟಕ ಭಕ್ತವಿಜಯ,** ನವಭಾರತಿ ಪ್ರಕಾಶನ, ಮೈಸೂರು, ೧೯೩೨.

೭೧. ಮರಿಸಿದ್ಧಯ್ಯ ಸ್ವಾಮಿಗಳು, **ಶ್ರೀ ಶಿವರಾಮವಧೂತರ ಪುರಾಣವು,** ಶ್ರೀ ವಿದ್ಯಾನಂದ ಭಾರತಿಸ್ವಾಮಿಗಳು, ಶ್ರೀ ಶಿವರಾಮವಧೂತ ಆಶ್ರಮ ಹೇಮಕೂಟ, ಹಂಪಿ, ೨೦೦೩

೭೨. ಮಂಜುನಾಥ ಬೇವಿನಕಟ್ಟಿ, **ಜನಪದ ನಂಬಿಕೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೬

೭೩. ಮಲ್ಲೇಪುರಂ ಜಿ. ವೆಂಕಟೇಶ, **ಮಹಲಿಂಗರಂಗ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬

೭೪. ರಹಮತ್ ತರೀಕೆರೆ, **ಮರದೊಳಗಿನ ಕಿಚ್ಚು,** ೨೦೦೨, ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್, ಕಾಂತರಾಜ್ ಅರಸ್ ರಸ್ತೆ, ಮೈಸೂರು

೭೫. ರಹಮತ್ ತರೀಕೆರೆ, **ಕರ್ನಾಟಕದ ಸೂಫಿಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೧.

೭೬. ರಹಮತ್ ತರೀಕೆರೆ, **ಕರ್ನಾಟಕದ ನಾಥಪಂಥ,** ಅಭಿನವ ಪ್ರಕಾಶನ ಬೆಂಗಳೂರು, ೨೦೦೭.

೭೭. ರಹಮತ್ ತರೀಕೆರೆ(ಸಂ), **ಧರ್ಮ ವಿಶ್ವಕೋಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿಯ, ೨೦೦೦.

೭೮. ರಘುಶಂಕರ್ ಭಾತ್ರಂ, **ವಚನ ಸಾಹಿತ್ಯ ಹೊಸ ಪರಿಕಲ್ಪನೆ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪.

೭೯. ರಾನಡೆ ಆರ್.ಡಿ. **ಕನ್ನಡ ಸಂತರ ಪರಮಾರ್ಥ ಪಥ**(ಅನು), ದೇಶಪಾಂಡೆ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬.

೮೦. ರಂಗಾರೆಡ್ಡಿ ಕೋಡಿರಾಂಪುರ(ಸಂ), **ತತ್ವಪದಗಳು,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೬.

೮೧. ವಾಸುದೇವ ಬಡಿಗೇರ, **ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

೮೨. ವಿದ್ಯಾಶಂಕರ ಎಸ್., **ವೀರಶೈವ ಪುರಾಣಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೭.

೮೩. ವೀರಣ್ಣ ಸಿ., **ತವನಿಧಿ,** ಗೋ.ರು.ಚ. ಅಭಿನಂದನ ಸಮಿತಿ, ಬೆಂಗಳೂರು, ೨೦೧೪.

೮೪. ವಿರೂಪಾಕ್ಷಿ ಪೂಜಾರಹಳ್ಳಿ, **ವಸಾಹತುಕಾಲೀನ ಬಳ್ಳಾರಿ ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೮೫. ವಿದ್ವಾನ್ ಭುಜಂಗ ಮಠದ ಗುರುಸಿದ್ಧಯ್ಯನವರು, **ಮಹಾದಾಸೋಹ ಮೂರ್ತಿ,** ಕಾನಮಡುವಿನ ಶ್ರೀ ಶರಣಾರ್ಯರು, ಐಮಡಿ ಶರಣಾರ್ಯರು, ದಾಸೋಹ ಮಠ, ಕಾನಾಮಡಗು, ೧೯೬೮.

೮೬. ವೆಂಕಟೇಶ್ ಇಂದ್ವಾಡಿ, **ಮಂಟೇಸ್ವಾಮಿ ಪರಂಪರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೯.

೮೭. ವೆಂಕಟಗಿರಿ ದಳವಾಯಿ, **ಬಳ್ಳಾರಿ ಜಿಲ್ಲೆ ಸಮಕಾಲೀನ ಕಾವ್ಯ,** ಗೌತಮ ಪ್ರಕಾಶನ, ಬಳ್ಳಾರಿ, ೧೯೯೭.

೮೮. ವೇಮಲ ಗಟ್ಟೆಪ್ಪ ಶ್ರೇಷ್ಠಿ, **ದಮ್ಮೂರು ಶ್ರೀ ಸದ್ಗುರು ವೆಂಕಾವಧೂತರ ಚರಿತ್ರೆ,** ವೇಮಲ ಟ್ರೇಡರ್ಸ್, ಹೊಸಪೇಟೆ, ೨೦೦೧.

೮೯. ವೇಮಲ ಗಟ್ಟೆಪ್ಪ ಶ್ರೇಷ್ಠಿ(ಸಂ), **ಶ್ರೀ ಸದ್ಗುರು ಸ್ತುತಿ ಪುಷ್ಪಾಂಜಲಿ,** ವೇಮಲ ಟ್ರೇಡರ್ಸ್, ಹೊಸಪೇಟೆ, ೧೯೯೮.

೯೦. ಶಿರೂರ ಬಿ.ವಿ., **ಸಂಶೋಧನಾ ಸ್ವರೂಪ,** ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ, ೧೯೯೨

೯೧. ಶಿವಕುಮಾರಸ್ವಾಮಿ ಸಿ.ಎಸ್.(ಸಂ), **ಕರ್ನಾಟಕದ ಜಾತ್ರೆಗಳು,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ ಮೈಸೂರು, ೧೯೮೮.

೯೨. ಶಿವಮೂರ್ತಿ ಶಾಸ್ತ್ರಿಗಳು ಡಿ.ಎಂ., **ಶ್ರೀ ಸದ್ಗುರು ವೆಂಕಾವಧೂತರ ಪುರಾಣ,** ವ್ಹಿ.ಜಿ. ಶೆಟ್ಟಿ, ವೇಮಲ ಟ್ರೇಡರ್ಸ್, ಹೊಸಪೇಟೆ, ೧೯೯೮.

೯೩. ಶಿವಮೂರ್ತಿ ಶಾಸ್ತ್ರಿಗಳು ಡಿ.ಎಂ., **ಶ್ರೀ ಸದ್ಗುರು ಎರಿಬಸವೇಶ ಪುರಾಣ,** ಶರಣಪ್ಪರೆಡ್ಡಿ, ಕೊಳಗಲ್ಲು, ಬಳ್ಳಾರಿ, ೨೦೦೦.

೯೪. ಶಿವಾನಂದ ವಿರಕ್ತಮಠ, **ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮

೯೫. ಶಿವಾನಂದ ವಿರಕ್ತಮಠ(ಸಂ), **ಕೊಡೇಕಲ್ಲು, ವಚನಕಾವ್ಯ ಸಂಪುಟ, ವಚನ-ಸ್ವರವಚನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೯೬. ಶಿವಾನಂದ ಎಸ್., **ಚೆಳ್ಳಗುರಿಕೆ, ಎರ್ರಿತಾತ,** ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೧.

೯೭. ಶಿವರುದ್ರಪ್ಪ ಜಿ.ಎಸ್., **ಶರಣ ಪಥ,** ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ, ೨೦೧೧.

೯೮. ಶ್ರೀನಿವಾಸ ಹಾವನೂರ, **ಹೊಸಗನ್ನಡದ ಅರುಣೋದಯ,** ಪ್ರಸಾರಾಂಗ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೪.

೯೯. ಷಣ್ಮುಖಯ್ಯ ಅಕ್ಕೂರಮಠ, **ಸೂಫಿ ಮತ್ತು ಶರಣರ ಅನುಭಾವ ಪಥ,** ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳಿ, ಮೂರು ಸಾವಿರ ಮಠ, ಹುಬ್ಬಳ್ಳಿ, ೧೯೮೨.

೧೦೦. ಶೇಖ್ಅಲಿ ಬಿ.(ಸಂ), **ಕರ್ನಾಟಕ ಚರಿತ್ರೆ ಸಂಪುಟ-೩,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

೧೦೧. ಸ್ವಾಮಿ ಸೋಮನಾಥನಂದ(ಅನು), **ಅವಧೂತ ಗೀತಾ,** ಶ್ರೀ ರಾಮಕೃಷ್ಣಾಶ್ರಮ, ಮೈಸೂರು, ೧೯೮೯.

೧೦೨. ಸ್ವಾಮಿ ವಿವೇಕಾನಂದ, **ಭಕ್ತಿಯೋಗ**(ಕನ್ನಡಾನುವಾದ), ಶ್ರೀ ರಾಮಕೃಷ್ಣಾಶ್ರಮ, ಮೈಸೂರು, ೧೯೯೯.

೧೦೩. ಸಿದ್ಧಯ್ಯ ಪುರಾಣಿಕ, **ಶರಣ ಚರಿತಾಮೃತ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೦.

೧೦೪. ಸುಂಕಾಪುರದ ಎಂ.ಎಸ್. ನಾಗಭೂಷಣ ಶಾಸ್ತ್ರಿಗಳು(ಸಂ), **ಗುರುಬಸವ ಕೃತ ಅವಧೂತ ಗೀತ,** ಶ್ರೀ ಮುರುಘಮಠ, ಮೃತ್ಯುಂಜಯನಗರ, ಧಾರವಾಡ, ೧೯೬೭.

೧೦೫. ಸುಬ್ಬಣ್ಣ ಎಂ.ಎಸ್., **ಚಾಕುಬಂಡೆ,** ಶ್ರೀ ಶಿವರಾಮ ಅವಧೂತರ ಚರಿತ್ರೆ, ಶ್ರೀ ವಿದ್ಯಾನಂದ ಭಾರತಿ ಸ್ವಾಮಿಗಳು ಶ್ರೀ ಶಿವರಾಮ ಅವಧೂತರ ಆಶ್ರಮ, ಹೇಮಕೂಟ ಹಂಪಿ, ೨೦೦೩.

೧೦೬. ಹರಿದಾಸ ಭಟ್ಟಾಚಾರ್ಯ(ಸಂ), **ಯುಗಯಾತ್ರಿ ಭಾರತೀಯ ಸಂಸ್ಕೃತಿ,**

ಸಂಪುಟ - ೩, ದರ್ಶನಗಳು, ೧೯೭೫

ಸಂಪುಟ - ೪, ಧರ್ಮಗಳು, ೧೯೮೮, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೦೭. ಹಳ್ಳಿಕೇರಿ ಎಫ್.ಟಿ.(ಸಂ), **ಎಮ್ಮೆ ಬಸವನ ಕಾಲಜ್ಞಾನ ಸಾಹಿತ್ಯ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೧೦೮. ಹಿರೇಮಠ ಆರ್.ಸಿ., **ಮಹಾಯಾತ್ರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೭,

೧೦೯. ಹೆಬ್ಬಾಲೆ ಕೆ. ನಾಗೇಶ್, **ಮುಕ್ತ ಸಂಸ್ಕೃತಿ ಮತ್ತು ಹಂಪಿ ಪರಿಸರ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

ಬ. **ಕೋಶಗಳು**

೧. **ಸಂಸ್ಕೃತ–ಕನ್ನಡ, ಶಬ್ದ ಕೋಶ ಭಾಗ–೩(ಸಂ),** ಚಕ್ರವರ್ತಿ ಶ್ರೀನಿವಾಸ ಗೋಪಾಲಚಾರ್ಯ ಶ್ರೀ ಕೌಸ್ತುಭ ಸೌಧ, ಬೆಂಗಳೂರು, ೧೯೮೪.

೨. **ಸಂಸ್ಕೃತ - ಕನ್ನಡ ಸುವರ್ಣಕೋಶ.**

೩. **ಕನ್ನಡ ನಿಘಂಟು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪. **ಕನ್ನಡ - ಇಂಗ್ಲೀಷ್ ನಿಘಂಟು** (ಸಂ), ಆರ್.ಎಫ್. ಕಿಟೆಲ್, ಮಂಗಳೂರು.

೫. **ಕನ್ನಡ - ಕನ್ನಡ ಶಬ್ದಕೋಶ** (ಸಂ), ಬಿ.ಜಿ. ಸಂಕೇಶ್ವರ, ಗದಗ.

೬. **ಪರಮಾರ್ಥ ಪದಕೋಶ** (ಸಂ), ಅ.ರಾ.ಸೇ.

೭. **ಕನ್ನಡ ವಿಶ್ವಕೋಶ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ ಮೈಸೂರು.

೮. **ವಚನ ಪರಿಭಾಷಾ ಕೋಶ** (ಸಂ), ವಿದ್ಯಾಶಂಕರ ಎಸ್., ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೯. **ಎನ್‌ಸೈಕ್ಲೋಪಿಡಿಯಾ - ಬ್ರಿಟಾನಿಕಾ, ವ್ಯಾಲ್ಯೂಂ - ೧೬.**

ಕ. **ಸಂಸ್ಕೃತ ಕೃತಿಗಳು**

೧. ಹಠಯೋಗ ಪ್ರದೀಪಿಕೆ

೨. ಶ್ರೀ ಭಾಗವತ ಸಾರೋದ್ಧಾರಮೃತಂ, ಘೂಳೀ ಕೃಷ್ಣಮೂರ್ತ್ಯಾಚಾರ್ಯ

೩. ಪ್ರ: ಶ್ರೀ ವ್ಯಾಸ ಪ್ರಕಾಶನ, ಸತ್ಯನಾರಾಯಣಪೇಟೆ, ಬಳ್ಳಾರಿ

೪. ಜೀವ ಬ್ರಹ್ಮೈಕ್ಯ ರಾಜಯೋಗ ಸಾರಾಮೃತವು (ಮೂಲ) ಸಚ್ಚಿದಾನಂದ ಪರಮಯೋಗೀಶ್ವರ, (ಕನ್ನಡಕ್ಕೆ) ಭೀಮಸೇನ.





ಶಿವಶರಣೆ ಕುರುಗೋಡು ನೀಲಮ್ಮ, ಬಳ್ಳಾರಿ



ಮರಿಸ್ವಾಮಿಯವರ ಗದ್ದುಗೆ, ಬಳ್ಳಾರಿ



ತತ್ವಪದಕಾರ ಮೈಲಾರ ಬಸವಲಿಂಗ ಶರಣರು, ಬಳ್ಳಾರಿ


ಕಾನಮಡುಗು ಶರಣಪ್ಪ ಅವರ ರಥೋತ್ಸವ, ಕೂಡ್ಲಿಗಿ


ಗದ್ದಿಕೇರಿ ದೊಡ್ಡಬಸಪ್ಪ ಅವರ ರಥೋತ್ಸವ, ಹಗರಿಬೊಮ್ಮನಹಳ್ಳಿ


ಸಿಂಧಿಗೇರಿ ಮಲ್ಲಪ್ಪ ಅವರ ರಥೋತ್ಸವ, ಬಳ್ಳಾರಿ



ಬಡೇಸಾಹೇಬ್ ಖಾದ್ರಿ ಅವರ ದರ್ಗಾ, ಕಂಪ್ಲಿ



ಸಾದಿಕ್ ವಲಿ ಶಾ ಖಾದ್ರಿ ಲೋಲಂಗರ್ ಅವರ ದರ್ಗಾ, ಉಜ್ಜನಿ(ಕೂಡ್ಲಿಗಿ)



ಲಂಗರ್ ಷಾ ವಲಿ ಬಾಬಾ ಅವರ ದರ್ಗಾ, ಕುಡುತಿನಿ(ಬಳ್ಳಾರಿ)

